# ಕರ್ಣಾಟಕ ಕಾವ್ಯಮಂಜರಿ.

ಮಹಾಕವಿ ತಿರುಮಲೆಯಾರ್ಯ

ವಿರಚಿತಂ

# ಚಿಕದೇವರಾಜ ವಿಜಯಂ.

[೧೭]

ಎಸ್. ಜಿ. ನರಸಿಂಹಾಚಾರ್,

ಲೈಬ್ರೇರಿಯನ್ ಓರಿಯಂಟಲ್ ಲೈಬ್ರೇರಿ ಮೈಸೂರು.

ಆಜಿ. ರಾಮಾನುಜೈಯಂಗಾರ್,

ಅಸಿಸ್ಟೆಂಟ್ ಮ್ಯಾಸ್ಟರ್ ವೆಸಲಿಯನ್ ಹೈಸ್ಕೂಲ್.

ಇವರಿಂದ ಪರಿಷ್ಕರಿಸಲ್ಪಟ್ಟು

ಕರ್ಣಾಟಕ ಕಾವ್ಯಮಂಜರಿ ಪ್ರೊಪ್ರೈಟರುಗಳಿಗಾಗಿ

ಮೈಸೂರು

ಗ್ರಾಜ್ಯುಯೇಟ್ಸ್ ಟ್ರೇಡಿಂಗ್ ಅಸೋಸಿಯೇಷನ್ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು.

೧೮೯೭.

[ಕ್ರಯ ೧—೧೪—೦

# ಪೀಠಿಕೆ.

## —ಕವಿ ಚರಿತ್ರೆ.—

ಈ ಗ್ರಂಥಕರ್ತನ ಹೆಸರು ತಿರುಮಲೆಯಾರ್ಯನು. ಈತನಿಗೆ ತಿರುಮಲೈಯಂಗಾರ್ಯನೆಂದೂ ಹೆಸರುಂಟು. ಈತನ ತಂದೆ ಮೈಸೂರು ಮಹಾರಾಜ ದೊಡ್ಡದೇವರಾಜನಿಗೆ ಸ್ನೇಹಿತನಾಗಿಯೂ, ಪೌರಾಣಿಕನಾಗಿಯೂ ಇದ್ದ ಅಳಹಿಯಸಿಂಗರಾರ್ಯನು.[1] ಈತನ ತಾಯಿ ಮೈಸೂರು ಮಹಾರಾಜ ಕಂಠೀರವನರಸರಾಜನ ಪ್ರಧಾನಿಯಾದ ಗೋವಿಂದರಾಜಯ್ಯನೆಂದು ನಾಮಾಂತರವುಳ್ಳ ಅಪ್ಪಾಜಯ್ಯನ ಮಗಳು ಸಿಂಗಮ್ಮನು.[2] ಈ ಕವಿಯು ಕ್ರಿ ಶ ೧೬೪೫ ಕ್ಕೆ ಸರಿಯಾದ ಪಾರ್ಥಿವಸಂವತ್ಸರದ ಆಶ್ವಯುಜದಲ್ಲಿ ಶ್ರೀರಂಗಪಟ್ಟಣದಲ್ಲಿ ಜನಿಸಿದನು[3] ಈತನು ಚಿಕದೇವಮಹಾರಾಜನೊಡನೆ ಬಳೆದು, ಮಿತ್ರನಾಗಿ ವಿದ್ಯಾಭ್ಯಾಸವನ್ನು ಮಾಡಿದನೆಂದು ತಿಳಿಯಬರುತ್ತದೆ.[4]

ಮೈಸೂರು ಮಹಾರಾಜನಾದ ದೊಡ್ಡದೇವರಾಜನು ಈತನಿಗೂ, ಈತನ ತಂದೆಯಾದ ಆಳಹಿಯಸಿಂಗರಾರ್ಯನಿಗೂ ಶಿಂಗಮಾರನಹಳ್ಳಿ ಮೊದಲಾದ ಗ್ರಾಮಗಳನ್ನು ಸರ್ವಮಾನ್ಯವಾಗಿ ಕೊಟ್ಟಂತೆ ತಿಳಿಯಬರುತ್ತದೆ.[5] ಈ ಕವಿಯು ಮೈಸೂರು ರಾಜ್ಯದ ಮಂತ್ರಿತ್ವವನ್ನು ವಹಿಸುವದಕ್ಕೆ ಮುಂದೆ "ಅಶೇಷತಂತ್ರಸ್ವತಂತ್ರನೆನಿಸಿ" ಆಸ್ಥಾನಪಂಡಿತನಾಗಿದ್ದು ಸಂಸ್ಕೃತ ಕರ್ಣಾಟಕಭಾಷೆಗಳಲ್ಲಿ ಅನೇಕಕಾವ್ಯಗಳನ್ನು ರಚಿಸಿದಹಾಗೆ ತಿಳಿಯಬರುತ್ತದೆ[6]

---

1. ಚಿಕದೇವರಾಜವಿಜಯಂ—ಆಶ್ವಾಸ ೩. ಪದ್ಯಗಳು ೭೧, ೧೨೨; ೪. ೧೯, ೧೭೦
2. ನರಪತಿವಿಜಯ; ಚಿಕದೇವರಾಯ ವಂಶಾವಳಿ—ಪು. ೧೬೩
3. ಚಿಕದೇವರಾಯ ವಂಶಾವಳಿ—ಪು. ೧೬೬
4. ಚಿಕದೇವರಾಜವಿಜಯಂ—೪. ೮೭, ೯೧, ೯೩
5. ಶ್ರೀರಂಗಪಟ್ಟಣ—೯೪, ಶಾಸನ; ಮೈಸೂರು ಶಾಸನ—೭
6. ತಿರುಮಕೂಡ್ಲು ತಾಲ್ಲೋಕು ೨೩ ನೆಯ ಶಾಸನವನ್ನು ಶ. ಕ. ೧೫೮೬ ರಲ್ಲಿ (ಕ್ರಿ ಶ. ೧೬೬೪) ತಿರುಮಲೈಯಂಗಾರ್ಯನು ಬರೆದಿರುತ್ತಾನೆ. ಮತ್ತು ಮಿತ್ರವಿಂದಾಗೋವಿಂದ ಪು. ೪, ೫ ಅಪ್ರತಿಮವೀರಚರಿತಂ—ಪು. ೩ ಪದ್ಯ—೨೧, ೧೨

ಚಿಕ್ಕದೇವಮಹಾರಾಜನು ಕ್ರಿ. ಶ. ೧೬೭೩ ರಲ್ಲಿ ಪಟ್ಟಾಭಿಷಿಕ್ತನಾಗಿ ಶ್ರೀರಂಗ ಪಟ್ಟಣದಲ್ಲಿ ರಾಜ್ಯಭಾರವನ್ನು ಮಾಡುತ್ತಿರುವಲ್ಲಿ ಅವನ ಮಂತ್ರಿಯಾದ ಎಳವಂದೂರು ವಿಶಾಲಾಕ್ಷಪಂಡಿತನನ್ನು ಕ್ರಿ. ಶ. ೧೬೮೪ ರಲ್ಲಿ ಲಿಂಗವಂತರು ಕೊಂದುಹಾಕಿದರು. ಆಗ ದೊರೆಯು ಪ್ರಧಾನಿಯಾದ ಅಪ್ಪಾಜಯ್ಯನನ್ನು ಕರೆಯಿಸಿ, ಸಂಸ್ಥಾನದ ಮಂತ್ರಿತ್ವವನ್ನು ವಹಿಸಹೇಳಿದನು. ಅದಕ್ಕೆ ಅವನು—ರಾಜನೀತಿವಿಶಾರದನಾಗಿ ಆಸ್ಥಾನಪಂಡಿತನಾಗಿ ಇರುವ ನನ್ನ ದೌಹಿತ್ರ ತಿರುಮಲೈಯಂಗಾರ್ಯನು ಆ ಮಂತ್ರಿತ್ವಕ್ಕೆ ಸಮರ್ಥನೆಂದು ಅರಿಕೆ ಮಾಡಲು—ಈತನಿಗೆ ಮಂತ್ರಿತ್ವವನ್ನು ಕೊಟ್ಟಂತೆ ತಿಳಿಯಬರುತ್ತದೆ. ಈತನು ಕೆಲವು ಕಾಲ ಮಂತ್ರಿಪದವಿಯನ್ನಲಂಕರಿಸಿದ್ದು ಬಳಿಕ ಕ್ರಿ. ಶ. ೧೬೯೫ ರಲ್ಲಿ ಮಹಾರಾಜನ ಅಪ್ಪಣೆಯನ್ನು ತೆಗೆದುಕೊಂಡು ಶ್ರೀರಂಗಾದಿಸ್ಥಲಕ್ಕೆ ಯಾತ್ರೆಹೋದಂತೆಯೂ, ಆ ಕಾಲದಲ್ಲಿ ಮಧುರೆಯ ನಾಯಕನ ಹೆಂಡತಿ ಮಂಗಮ್ಮನೆಂಬವಳು ಈತನಿಗೆ ಗ್ರಾಮಾದಿಗಳನ್ನು ಕೊಟ್ಟು ತನ್ನಲ್ಲೇ ಇರುವಂತೆ ಕೇಳಿಕೊಂಡುದರಿಂದ ಸ್ವಲ್ಪ ಕಾಲ ಅಲ್ಲೇ ನಿಂತಂತೆಯೂ,[೮] ಈ ಸಮಾಚಾರವನ್ನು ತಿಳಿದು ಅಲ್ಲಿನ ಮಂತ್ರಿತ್ವವನ್ನು ವಹಿಸುವನೆಂಬ ಶಂಕೆಯಿಂದ ಚಿಕ್ಕದೇವಮಹಾರಾಜನು ಒಂದು ನಿರೂಪವನ್ನು ಬರೆದು ಕರೆಯಕಳುಹಿಸಲು ತಿರುಮಲೈಯಂಗಾರ್ಯನು ಪುನಃ ಶ್ರೀರಂಗಪಟ್ಟಣಕ್ಕೆ ಕ್ರಿ. ಶ ೧೬೯೮ ರಲ್ಲಿ ಬಂದುಮಂತ್ರಿತ್ವವನ್ನು ವಹಿಸಿದಂತೆಯೂ[೯] ತಿಳಿಯಬರುತ್ತದೆ.

ಚಿಕ್ಕದೇವಮಹಾರಾಜನು ತನ್ನ ಅವಸಾನಕಾಲದಲ್ಲಿ ಅಂದರೆ ಕ್ರಿ. ಶ. ೧೭೦೪ ನೆಯ ತಾರಣಸಂವತ್ಸರದಲ್ಲಿ ಮಂತ್ರಿ ತಿರುಮಲೈಯಂಗಾರ್ಯನನ್ನೂ, ಪ್ರಧಾನಿ ಅಪ್ಪಾಜೈಯನನ್ನೂ ಬರಿಸಿ ತನ್ನ ಮಗನನ್ನೂ ರಾಜ್ಯವನ್ನೂ ನೋಡಿಕೊಳ್ಳುವಂತೆ ಹೇಳಿ ಅವರಿಗೆ ಸರ್ವಾಧಿಕಾರವನ್ನು ಕೊಟ್ಟಂತೆಯೂ, ಬಳಿಕ ಮಂತ್ರಿ ಪ್ರಧಾನಿಗಳು ಕಂಠೀರವ ನರಸರಾಜವಡಯನಿಗೆ ಪಟ್ಟವನ್ನು ಕಟ್ಟಿ ತಾವೇ ರಾಜ್ಯದ ಆಡಳಿತವನ್ನು ನೋಡುತ್ತಿದ್ದರೆಂದೂ[೧೦] ತಿಳಿಯಬರುತ್ತದೆ.

ಕ್ರಿ. ಶ. ೧೭೦೬ ರಲ್ಲಿ ತಿರುಮಲೈಯಂಗಾರ್ಯನು ಮೃತನಾದನೆಂದು ಗೊತ್ತಾಗು

---

7. ನರಪತಿವಿಜಯಂ.
8. ಮಧುರೆ ಮಂಗಮ್ಮನ ಭೂದಾನಶಾಸನ—ಶ. ಕ. ೧೬೧೨ ನೇ ಧಾತು ಸಂ !
9. ಬಹುದಾನ್ಯ ಚೈತ್ರದಲ್ಲಿ ಬರೆದು ಕಳುಹಿಸಿದ ನಿರೂಪ.
10. ನರಪತಿವಿಜಯ.

ತ್ತದೆ. ಈತನ ಮಂತ್ರಿತ್ವದ ಶಕ್ತಿಯನ್ನು ಚಿಕ್ಕದೇವಮಹಾರಾಜನ ರಾಜ್ಯಸ್ಥಿತಿಯೇ ತಿಳಿಸುತ್ತದೆ.

ಈತನು ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಬಹಳ ಪಂಡಿತನು. ಈತನು ಮಾಡಿದ ಗ್ರಂಥಗಳಲ್ಲಿ ನಮಗೆ ಪ್ರಕೃತದಲ್ಲಿ ದೊರತಿರುವವು–

ಸಂಸ್ಕೃತದಲ್ಲಿ:—೧. ಯದುಗಿರಿನಾರಾಯಣಸ್ತವ, ೨ ಯದುಗಿರಿನಾಯಕೀಸ್ತವ, ೩. ಶ್ರೀಲಕ್ಷ್ಮೀನೃಸಿಂಹಸ್ತವ, ೪. ಗೋಪಾಲಸ್ತವ, ೫. ರಾಜಗೋಪಾಲಸ್ತವ, ೬. ಪರವಾಸುದೇವಸ್ತವ, ೭. ಮಂಜುಳಕೇಶವಸ್ತವ, ೮. ಪಶ್ಚಿಮರಂಗರಾಜಸ್ತವ, ೯. ಏಕಾದಶೀನಿರ್ಣಯ.

ಕನ್ನಡದಲ್ಲಿ:—೧. ಅಪ್ರತಿಮವೀರಚರಿತ, ೨ ಚಿಕದೇವರಾಯವಂಶಾವಳಿ ೩. ಚಿಕದೇವರಾಜವಿಜಯ, ೪. ಚಿಕದೇವರಾಯಶತಕ, ೫ ಕರ್ಣಾಟಕ ಕೀರ್ತನೆಗಳು.

ಸಚ್ಛೂದ್ರಾಧಿಕಾರನಿರ್ಣಯ (ಸಂಸ್ಕೃತ), ಗೀತಗೋಪಾಲ, ಚಿಕದೇವರಾಜ ಬಿನ್ನಪ, ಮುಂತಾದ ಕೆಲವು ಗ್ರಂಥಗಳು ಚಿಕದೇವರಾಜಾಂಕಿತವಾಗಿದ್ದರೂ ಈತನೇ ಮಾಡಿದುವೆಂದು ಪ್ರವಾದವಿದೆ.

## ಏತತ್ಕವಿಕೃತ ಕರ್ಣಾಟಕ ಗ್ರಂಥ ವಿಮರ್ಶೆ.

೧. ಅಪ್ರತಿಮವೀರಚರಿತ:—ಈ ಅಲಂಕಾರ ಗ್ರಂಥದಲ್ಲಿ ನಾಲ್ಕು ಪ್ರಕರಣಗಳಿವೆ. ಪ್ರಥಮಪ್ರಕರಣದಲ್ಲಿ ಉತ್ತಮ ಮಧ್ಯಮ ಸಾಧಾರಣ ಕಾವ್ಯಲಕ್ಷಣಗಳೂ ಶಬ್ದಗುಣಗಳೂ, ಅರ್ಥ ಗುಣಗಳೂ; ದ್ವಿತೀಯಪ್ರಕರಣದಲ್ಲಿ ರೀತಿಶಯ್ಯಾಪಾಕಗಳ ಸ್ವರೂಪಗಳೂ, ಕೈಶಿಕ್ಯಾದಿ ವೃತ್ತಿಗಳ ಸ್ವರೂಪವೂ, ಛೇಕಾನುಪ್ರಾಸ ಮೊದಲಾದ ಶಬ್ದಾಲಂಕಾರಗಳೂ; ತೃತೀಯಪ್ರಕರಣದಲ್ಲಿ ಉಪಮಾದಿ ನೂರು ಅರ್ಥಾಲಂಕಾರಗಳೂ ಅವುಗಳ ಭೇದಗಳೂ; ಚತುರ್ಥಪ್ರಕರಣದಲ್ಲಿ ರಸಾಲಂಕಾರಗಳೂ; ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ. ಈ ಗ್ರಂಥದಲ್ಲಿ ಕವಿಯು ಚಂದ್ರಾಲೋಕ, ವಾಮನವೃತ್ತಿ, ಕಾವ್ಯಪ್ರಕಾಶ ಮೊದಲಾದ ಸಂಸ್ಕೃತಗ್ರಂಥಗಳಿಂದ ಲಕ್ಷಣಗಳನ್ನು ತೆಗೆದುಕೊಂಡು, ಅವುಗಳಿಗೆ ಕನ್ನಡದಲ್ಲಿ ಗದ್ಯರೂಪವಾದ ವೃತ್ತಿಯನ್ನು ಬರೆದು, ಒಂದೊಂದಕ್ಕೂ ಸ್ವನಿರ್ಮಿತ ಕರ್ಣಾಟಕ ಪದ್ಯರೂಪವಾದ ಉದಾಹರಣೆಯನ್ನು ಕೊಟ್ಟು, ಕನ್ನಡದಲ್ಲಿಯೇ ಲಕ್ಷಣ ಸಮನ್ವಯವನ್ನು ಮಾಡಿರುತ್ತಾನೆ.

೨. ಚಿಕದೇವರಾಯ ವಂಶಾವಳಿ—ಇದು ಮೈಸೂರು ಮಹಾರಾಜರವರ ಚರಿತ್ರರೂಪವಾದ ವಚನಗ್ರಂಥ. ಇದು ಬಹಳ ಪ್ರೌಢವಾಗಿಯೂ, ರಸಭರಿತವಾಗಿಯೂ ಇದೆ. ಸಂಸ್ಕೃತದಲ್ಲಿ ಕಾದಂಬರಿಯು ಹೇಗೆ ಉತ್ತಮ ಗದ್ಯ ಗ್ರಂಥವೆನಿಸಿಕೊಂಡಿದೆಯೋ ಹಾಗೆಯೇ ಇದು ಕನ್ನಡದಲ್ಲಿ ಉತ್ತಮಗದ್ಯಗ್ರಂಥವೆನಿಸಿಕೊಂಡಿದೆ.

೩. ಚಿಕದೇವರಾಜವಿಜಯ—ಇದು ಮೈಸೂರು ಮಹಾರಾಜರ ಚರಿತ್ರರೂಪವಾದ ಚಂಪೂಪ್ರಬಂಧ. ಇದು ಶ್ಲಾಘ್ಯವಾದ ಕಾವ್ಯ. ಇದರಲ್ಲಿ ೬ ಆಶ್ವಾಸಗಳಿವೆ. ಮೊದಲನೆಯ ಆಶ್ವಾಸದಲ್ಲಿ ಇಷ್ಟದೇವತಾಭ್ಯರ್ಥನ, ಕವಿತಾವರ್ಣನ, ಜಗತ್ಸೃಷ್ಟ್ಯಾದಿ ಯದುಪರ್ಯಂತವಂಶವರ್ಣನವೂ; ದ್ವಿತೀಯಾಶ್ವಾಸದಲ್ಲಿ ಬೆಟ್ಟದ ಚಾಮರಾಜ ಚಾಮರಾಜ ರಾಜರಾಜಚಾಮರಾಜ ಇಮ್ಮಡಿನರಸರಾಜಭೂಪಾಲ ಪ್ರಭಾವ ವರ್ಣನವೂ ; ತೃತೀಯಾಶ್ವಾಸದಲ್ಲಿ ದೊಡ್ಡದೇವರಾಜ ಗುಣವರ್ಣನ ಪುತ್ರಾಭಿಲಾಷ ಶ್ರೀಕೃಷ್ಣಲೀಲಾಶ್ರವಣ ಯಾದವಾಚಲಗಮನ ಶ್ರೀನಾರಾಯಣವರಪ್ರದಾನ ಪ್ರಜಾಪಾಲನಾದಿ ವರ್ಣನವೂ; ತುರೀಯಾಶ್ವಾಸದಲ್ಲಿ ಶ್ರೀಮದಮೃತಾಂಬಾದೌಹೃದ ಕುಮಾರೋದಯ ಬಾಲಲೀಲಾ ಲಿಪಿಗ್ರಹಣಶಾಸ್ತ್ರಪುರಾಣವೀಕ್ಷಾಖುರಳೀಶ್ರಮಯೌವನೋದಯಾದಿವರ್ಣನವೂ; ಪಂಚಮಾಶ್ವಾಸದಲ್ಲಿ ದೇವರಾಜದಿಗ್ವಿಜಯ ಚಿಕದೇವರಾಯದಿನಚರ್ಯಾದಿವರ್ಣನವೂ; ಷಷ್ಠಾಶ್ವಾಸದಲ್ಲಿ ರಾತ್ರಿವಿಹಾರವರ್ಣನೆಗಳೂ ಇವೆ.

ಈ ಗ್ರಂಥದಲ್ಲಿ ಕವಿಯ ಕವಿತಾಸಾಮರ್ಥ್ಯವು ಚೆನ್ನಾಗಿ ಗೊತ್ತಾಗುವದು. ಈ ಗ್ರಂಥದ ಅನೇಕ ಪದ್ಯಗಳು ಅಪ್ರತಿಮವೀರಚರಿತದಲ್ಲಿ ಉದಾಹೃತವಾಗಿವೆ.

ಈತನ ಕವಿತ್ವದ ವಿಷಯವಾಗಿ—

"ಎನಿತಂದವಾಗಿ ಮೆಲ್ಪುವಡೆದ ಸಬುದಂಗಳಸೇರುವೆಯಿಂ ಸರಳಮುಂ, ಕರಮೆಸೆವ ಪುರುಳ ಪವಣಿಗೆಯಿಂ ಸರಸಮುಮೆನಿಸಿ ತನಿಸೊದೆಯ ಸೋನೆಯಂತೆ ಇನಿದಂ ಕಿವಿಗಳ್ಗೆ ಕಱೆಗುಮಿಾತಿರುಮಲಾರ್ಯರ ಬಾಯ್ದೆಱೆಯ ಸರಸತಿಯ ಸೈಪುವಡೆದ ಸಾಹಿತ್ಯಸೌಂದರ್ಯಂ" ಎಂದೂ,

"ಈಪಂಡಿತಕವಿಮಂಡಲಾಖಂಡಲರ್ ಪಿರಿದಾಗಿ ಶಾಸ್ತ್ರಸ್ಮೃತಿಸ್ತೋತ್ರಗ್ರಂಥಂಗಳಂ ಇವಲ್ಲದಿನ್ನುಂ ಸಕ್ಕದದೊಳಂ ಕನ್ನಡದೊಳಂ ಬೇಱೆ

ಮೇಳಿ ಕಿವಿಗಿನಿಸಂ ಸೂಸುವಪಲವಗೆಯ ಕಾವ್ಯನಾಟಕಾಲಂಕಾರಂ ಮೊದಲಾದ ವಸ್ತುಕವರ್ಣಕಪ್ರಬಂಧಂಗಳಂ ಗಡಿಯಿಲ್ಲದೆ ನಿರವಿಸಿರ್ದರ್"

ಎಂದೂ,

« ಪಿರಿಮಂ ಪ್ರೌಢತ್ವಮಂ ಪೆರ್ಗಳಿಕೆ ಕವಿವರರ್ ಕಬ್ಬದೊಳ್ ಶಾಸ್ತ್ರದೊಳ್ ಮೇಣ್ । ಕರಮಾಸಾಹಿತ್ಯದೊಳ್ ಬಿತ್ತರಿಪೊಡೆ ರಸಮಂ ತಿರ್ಮಲಾರ್ಪರ್ಗೆ ಸಲ್ಗುಂ ॥ ತರಣಿದ್ಯೋತಂಗಳೇನಾಡಮೆ ವಿಧುಮಣಿಯೊಳ್ ನೈದಿಲೊಳ್ ಮತ್ತಮಂ ತಾಂ । ಕರಗಿಪ್ಪಂ ಬಿಚ್ಚುರ್ವಂ ಚಂದಿರನೆ ಉೞಿದವರ್ಗಂ ತೊಸರ್ಗುಂ ಮಲರ್ಗುಂ ॥"

ಎಂದು ಮಿತ್ರವಿಂದಾಗೋವಿಂದನಾಟಕದಲ್ಲಿದೆ.

ಈತನ ಚರಿತ್ರವನ್ನು ಈತನ ವಂಶಸ್ಥರಾದ ಕರ್ಣಾಟಕ ಕಾವ್ಯಮಂಜರಿ ಮೇನೇಜಿಂಗ್ ಪ್ರೊಪ್ರೈಟರ ಮ. ಕುಮಾರಸ್ವಾಮಿ ತಿರುಮಲಾಚಾರ್ಯರೂ, ಪ್ರಧಾನ ಅಪ್ಪಾಜಯ್ಯನ ವಂಶಸ್ಥರಾದ ಅಡ್ವೋಕೇಟ್ ಎಂ ಎ. ಶ್ರೀನಿವಾಸಾಚಾರ್ಯರೂ ವಿಸ್ತಾರವಾಗಿ ಬರೆಯುತ್ತಿದಾರೆ.

ಮಹಾಕವಿ

ತಿರುಮಲೆಯಾರ್ಯ ವಿರಚಿತಂ,

# ಚಿಕದೇವರಾಜ ವಿಜಯಂ.



## ಪ್ರಥಮಾಶ್ವಾಸಂ.

ಶ್ರೀಕಾಂತಂ ಸಂಪದುದ್ಯೋತನಕೃತಿ ಸುಮನಸ್ಸಂಸದಾಮೋದಸಂಧಾ ।
ನೈಕಾಂತಂ ವೀತದೋಷಂ ಭುವನನಯನನಾಮ್ನಾಯವಿದ್ವಂದಿತಂ ದಿ ॥
ವ್ಯಾಕಾರಂ ಸರ್ವತೇಜೋಧಿಕನಖಿಲಜಗದ್ಬಾಂಧವಂ ವಿಕ್ರಮಾಂಕಂ ! ಲೋ
ಕೋದ್ಬೋಧಾನುರಕ್ತಂ ತೊಳಗುಗೆ ಚಿಕದೇವೇಂದ್ರಭಾಸ್ವನ್ಮುಕುಂದಂ ॥೧

ಸತತಂ ಸತ್ಯಾದೃತಂ ಸಂಶ್ರಿತಮಧುರನಯೋಧ್ಯಾಧಿನಾಥಂ ಸುಮಂತ್ರಾಂ ।
ಚಿತದಿವ್ಯಶ್ರೀಸಮೇತಂ ಪ್ರಥಿತವಿಜಯಧರ್ಮಂ ಯಶೋದೋತ್ಸವಂ ಸ್ವೀ ॥
ಕೃತಧಾತ್ರೀಜನ್ಮಭಾವೋನ್ನತಿ ಸಹಜಬಲೋಪಗ್ರನುನ್ನೀತಚಕ್ರಂ ।
ನುತಕೃಷ್ಣಾಭಿಖ್ಯನೊಲ್ದಪ್ರತಿಮನುದಯದಿಂ ಬಾೞ್ಗೆ ಸಂಗ್ರಾಮರಾಮಂ ॥

ಅಮಿತಾನಂದಾಪ್ತಿಯಂ ಮಾೞ್ಕೆಮಗಮೃತಕಲಾದಾಯಿ ಸದ್ವೃತ್ತನುದ್ಯ ।
ತ್ಪ್ರಮಥಾಧೀಶಾವತಂಸಾಂಚಿತನಮರಧುನೀಸಂಸ್ತುತಂ ದಿವ್ಯತೇಜ ॥
ಶ್ಶಮಿತಾನಂತಾಧ್ವತಾಪಂ ಶಿಶಿರಿತಭುವನಂ ಸರ್ವಲೋಕಾಭಿವಂದ್ಯಂ ।
ವಿಮಲಂ ತ್ರೈವಿಕ್ರಮಶ್ರೀಚರಣನಖಮಯಂ ಚಂದ್ರಮಂ ಸಾಂದ್ರರೂಪಂ॥

ಸಿರಿಯಡಿಕೈಮೊಗಂ ತಳೆಯೆ ತಾವರೆಯಂನವಮನೊಪ್ಪೆ ಚಕ್ರಮಿಂ ।
ಚರದೊಡಗೂಡಿ ಸಂಕುಮರಸಂಬಳಿಯ ಸಿಂಗರದೊಳ್ಪುಳಂಚೆ ಮೆ ॥

ಯ್ಸಿರಿ ಕರೆಗಣ್ಮೆ ಪಾಯ್ವ ತಿಳಿನೀರ್ದೆರೆಯಂತಿರೆ ಶಾರ್ಙ್ಗಭೃತ್ಸುಧಾ ।
ಸರಿಸಿಯೊಳೞ್ದು ತೇಲ್ದು ತಣಿದಾಂ ಕಳೆವೆಂ ಭವದಾವತಾಪಮಂ ॥೪

ಕಡಲೊಳ್ಪುಟ್ಟಿ ತಳರ್ದು ತಾವರೆಗಳೊಳ್ ಬ್ರಹ್ಮೇಶಮುಖ್ಯರ್ಕಳಾ ।
ಮುಡಿಯೊಳ್ದಟ್ಟಡಿಯಿಟ್ಟು ನಲ್ಲನೆರ್ದೆ*ಯಂ ಸಾರ್ದಲ್ಲಿ ಚಲ್ಲಾಡಿ ಕ ॥
ಣ್ಗಡೆಯೊಳ್ದಿಟ್ಟಿಯ ಮುಟ್ಟುವಿಾಱದಿನಿಯಂ ಕೈಗೈದು ಕಾದಿರ್ಪನಂ ।
ನಿಡಿದುಂ ಮಾೞ್ಕೆ ಜಗತ್ತ್ರಯೀಜನನಿ ತನ್ನಾಳ್ದಳ್ಕಱಿಂ ಮಕ್ಕಳೊಳ್ ॥೫

ಪಸಿದು ಕನಲ್ದು ರಾಹುವಿನ ದಾಡೆಯ ಕೂರ್ಮೆನೆ ಸೋಂಕದೊರ್ಮೆಯುಂ ।
ಕಿಸುಗದಿರೊಂದಿ ಕಂದಿ ಕಡಲೊಳ್ಬಿಱದಾದ್ವಿಜರಾಜತೇಜಮಂ ॥
ಪಸಗೆಡಿಸಲ್ಕೆ ಪೂಣ್ದೊಳಗುಂ ಪೊಱಗುಂ ಕಳೆದೆತ್ತಿ ಮರ್ಬನೀ ।
ಪೊಸವಗೆನೇಸಱೋಱ್ಗದಳೆದಿರ್ಕೆ ಸುದರ್ಶನನಾರ್ತಿಕರ್ಶನಂ ॥೬

ನಲಿಯಿಸುಗೆಯ್ದು ಮತ್ಸ್ಕೃತಿಕುಮುದ್ವತಿಯಂ ಕಳೆಗುಂದದಾವಗಂ ।
ನಲುಗದೆ ವಾಮದೇವನುರಿಗಣ್ಜಿಡೆವಾವುಗಳಂ [ಶರೀರ]ದೊಳ್ ॥
ಮೊಲವೊಳಪುಲ್ಲೆಯಾಲವೆನೆ ಸಂದಿಯುವೊಂದಿದ ಕಂದನಾನದೀ ।
ಬಲಮುರಿಸಂಕುಮೆಯ್ಯೆಮರೆ ಮೈಮೆಯುನಾಂತ ನವೀನಚಂಧ್ರಮಂ ॥೭

ಕೊರಲೊಳ್ಗದ್ಗದಮುಣ್ಮೆ ಪೊಣ್ಮೆ ನವಿರಂಗೋಪಾಂಗದೊಳ್ ಕಣ್ಗಳಂ ।
ಪರಿಕಾಲ್ಪಾಯೆ ಸುಖಾಶ್ರು ಬಾಹ್ಯಕರಣವ್ಯಾಪಾರಮಂ ಮಾಣ್ದು ಶಾಂ ॥
ತಿರಸಂ ಮೆಯ್ವಡೆದಂತಿರಚ್ಯುತಪದಧ್ಯಾನಾಮೃತಾಸ್ವಾದತ ।
ತ್ಪರರೆಮ್ಮಂ ಪೊರೆವರ್ ತೃಣೀಕೃತಭವಬ್ರಹ್ಮಾದಿಗಳ್ ಸೂರಿಗಳ್ ॥೮

ತೊಲಗಿಸಿ ಕಾಮಮಂ ತುಱಿದು ಕೋಪಮನೋಡಿಸಿ ಲೋಭಮಂ ಶಮಂ
ನೆಲೆಗೊಳೆ ಸಂದು ಮೋಹಮದಮತ್ಸರಮೊಂದದ ದಿವ್ಯಸೂರಿಗಳ್ ॥
ಕಲಿಬಲಹಾರಿಗಳ್ಕಲುಷವೈರಿಗಳಾಶ್ರಿತಕಾರ್ಯಕಾರಿಗಳ್ ।
ನಲವಿನೊಳೆಮ್ಮನಾಳ್ಗೆ ನಳಿನಾಕ್ಷಚರಿತ್ರದ ಜೈತ್ರಭೇರಿಗಳ್ ॥೯

॥ ಇಂತು ನಾಂದೀಪದ್ಧತಿ ॥

ಕಣಿಯೊಳಗಾಯ್ದು ಸಾಣೆವಿಡಿದೊಳ್ವಣಿಯಂತಿರೆ ಮಾತಿನೋಜೆ ಮೇ ।
ಣೆಣೆಯಱಿತೋಜನೊಳ್ಮಸುನಿಯೊಳ್ಬಗಿವಂತಿರೆ ನುಣ್ಬವಣ್ ಪುರುಳ್ ॥
ಗೆಣೆಗೊಳೆ ಪೊಣ್ಮೆ ಪಾಯ್ದು ಪೊಱಸೂಸಿ ಪೊದೞ್ದೆಸೆವೊಳ್ಗದಿರ್ಗಳಂ ।
ಮಣಿಮಯದೊಪ್ಪವೊಂದು ತೊಡವಂ ಪಡಿಗೊಳ್ವುದು ಕಬ್ಬವೊರ್ಬನಾ ॥

ಎಸೆವೊಳ್ಪೋಜೆ ಬೆಡಂಗು ಸಂಗತಿ ಹಸಾದಂ ತಣ್ಪು ನುಣ್ಪಿಂಪುಗಳ್ ।
ಮಸಕಂಗೊಂಡಿರೆ ಕಮ್ಮನುಣ್ಮೆ ಕವಿವೊಳ್ಗಂಪೆಂಬಿನಂ ಪೆಂಪಿನಿಂ ॥
ರಸಮಾಕಬ್ಬಮನೊರ್ಬರಿರ್ಬರೆನಲೇನೊಳ್ಗಬ್ಬಿಗರ್ ಸರ್ಬರುಂ ।
ಪೊಸಪೂಮಾಸಿಗದಂತೆ ತೊಂಡಲೆಡೆಯೊಳ್ಕೊಂಡೊಲ್ದು ಕೊಂಡಾಡುವರ್ ॥೧೧

ನುಡಿಗಳ ನುಣ್ಪಿನಿಂದೆಸೆಯೆ ಶಯ್ಯೆ ಪವಣ್ಗಳ ಪಾಂಗಿನಿಂದಮಿಂ ।
ಪಿಡಿದಿರೆ ರೀತಿ ವೃತ್ತಿ ಕಳೆವೆತ್ತಿರೆಯರ್ಥಗತಿಪ್ರಭೇದದಿಂ ॥
ತೊಡವು ಗುಣಂಗಳುಂ ತೊಡರೆ ಭಾವರಸಂ ಪಡಿಚಾಯೆಗೊಳ್ವಿನಂ ।
ಪಡೆವುದು ಬಣ್ಣಗಬ್ಬಮದು ನಿರ್ಭರದೀಕವಿಗಳ್ಗೆ ಪರ್ಬಮಂ ॥೧೨

ಸುಱಿವ ಕುರುಳ್ಗಳೊಳ್ತೊಳಗಿ ನುಣ್ಬಣೆಯೊಳ್ಕಡಿಗೊಂಡು ಪುರ್ಬಿನೊಳ್।
ಪೊಳೆದೆಸ*ಟ್ಗಣ್ಗಳೊಳ್ ಮುಗು*ಳ್ದ ಮೆಲ್ನಗೆಯೊಳ್ಪೊಗರೇಱಿ ಗಲ್ಲದೊಳ್॥
ಬಳೆದು ಕುಚಂಗಳೊಳ್ನವೆದು ನಲ್ನಡುವೊಳ್ಕಡುರಯ್ಯಮಾಗಿ ಕ ।
ಣ್ಗೊಳಿಪುದು ನಲ್ಲಳಾಕೃತಿಯವೊಲೀಕೃತಿಯುಂ ಪವಣೊಂದಿದಂದದಿಂ ॥೧೩

ಕೃತಿಯುಂ ಕೇಳದ ಮುಂ ನೆಗೞ್ಗ ದುಗುಡಂ ಕೊರ್ಬುರ್ಬುಗರ್ಬಂಗಳುಂ।
ಶ್ರುತಿಯಿಂ ಪೀರ್ದೊಡನೊಳ್ಪು ಮೆಲ್ಪು ನವಿರಾನಂದಾಶ್ರುಗಳ್ಗದ್ಗದಂ ॥
ಮಿಱಿಯುಂ ಮೀಱಿ ತೊಡಂಕೆ ಮುನ್ನಿರವಿನೊಳ್ನಿರ್ವೇದಮಂ ನೀಡಿ ಸ ।
ನ್ನುತಿಗೆಯ್ವಂತುಟು ಮಾಣ್ಕಿಪೊಯ್ಕನೆ ರಸೋದ್ರೇಕಂ ಚಮತ್ಕಾರದಿಂ ॥೧೪

ಸಕ್ಕದಗನ್ನಡವೆರಡಱೊ ।
ಳಕ್ಕಸರಂಗೊಳ್ವುದೋಜೆಗಬ್ಬಂ ರಸದಿಂ ॥

ದುಕ್ಕಳಿಸಿ ಪೊಯ್ವ ಪೆರ್ದೊಱೆ |
ಗಕ್ಕುಮೆ ತಡೆ ಪಳ್ಳದಿಂಟೆಕಿಱುದೊಱೆಗೆಱೆಗಳ್ ||೧೫

ಬಡನಡು ಬಲ್ಮೊಲೆ ನಿಡುಗ |
ಣ್ಕಡುಪುರ್ವಿಂದೆಸೆವ ಕೊನಬುಗಾತ್ರಿಯ ಸೊಗಸಂ ||
ಪಡೆಗುಂ ಕೃತಿಯುಂ ಪದಪಿಂ |
ದೆಡೆಯೆಡೆಯೊಳ್ತಕ್ಕತಕ್ಕ ಬಣ್ಣಿಗೆಬವಣಿಂ ||೧೬

ಕಱಗುಮದೊರ್ಬನ ಕಬ್ಬಂ |
ತಱಿಸಂದಾಬಗೆಯನಱಿವ ರಸಿಕನ ಕಿವಿಯೊಳ್ ||
ಕಱ್ಗಳೆದು ಗರ್ಭಮುರ್ಬಿದ |
ನೆಱೆವೆಱೆಯಂ ಪಿೞಿಯೆ ಸುರಿವ ತನಿರಸದೊದವಂ ||೧೭

ಅಳಿಯರಗಿಳಿಯರಸಂಚೆಯು |
ಮಿಳಿಯೊಳ್ ಭಾವುಕರ ಕಿವಿಗೆ ಸವಿಯಂ ಪಡೆಗುಂ ||
ಕಳಕಂಠಕಂಠನಾಳೋ |
ದ್ಗಳಿತಸುಧಾಸಾರದಿಂಪು ಪೊಸವಗೆಯಲ್ತೇ ||೧೮

|| ಇಂತು ಕವಿತಾಪದ್ಧತಿ ||

ಸವಿದಳೆದು ತಣ್ಪುಗಳ್ಮೆಗೆ |
ಸವನಿಸಿ ರಸಭರಿತಮೆನಿಸ ಕವಿಮಾನಸದೊಳ್ ||
ಭುವನಂಗಳಂಚೆಯಂತೆಮೊ |
ಲವಿರತಮುೞ್ದುೞ್ದು ತೇಲ್ದು ನಲಿಗುಮವಮಮಾ! ||೧೯

ಸಕಲವಿಭವಾಕೃತಿಯೊಳಂ |
ಪ್ರಕಟಿತಮೆನಿಸಿತ್ತು ರಾಮಕೃಷ್ಣಾಕೃತಿಗಳ್ ||
ಶುಕವಾಲ್ಮೀಕಿವ್ಯಾಸರ |
ಸುಕವಿತೆಯಿಂದೆನೆ ಕವೀಂದ್ರರೇನಗ್ಗಳರೋ ||೨೦

ಒಗೆದುದನೊಗೆದಂತೆ ಮಗು ।
ಚೋದ್ಗೆಯಿಸುಗುಂ ಪೆಱತನೊಂದನೊಗೆಯಿಸನಜನುಂ ॥
ವಿಗಡರ್ಕಬ್ಬಿಗರವನಿಂ ।
ದೊಗೆಯಿಸುವರ್ಬಗೆಗೆ ಬಂದುದೆಲ್ಲಮನವುಮಾ ! ॥೨೧

ಜವಣೆಸೆಯೆ ಪುರುಳುಮೊಪ್ಪಿರೆ ।
ಸವನಿಸಿದೊಳ್ಗಬ್ಬಗರದೆ ಬಿಜ್ಜೆಯ ಬಳದಿಂ ॥
ಕವಿಗಳ್ನಿಟ್ಟನೆ ನೆಗೞಿಸೆ ।
ಯುವನೆ ಗಡಾ ! ದೇವನೆನಿಸಿ ಜಸನುಂ ಪಡೆಗುಂ ॥೨೨

ಪಡೆಗೆ ಜಗವೆಲ್ಲಮಂ ತಾಂ ।
ಮಡಿಪುಗೆ ಮೇಣಗಱಿನೇನವಂ ಪಿರಿಯನೆ ಪೇೞ್ ॥
ಕಡುಗೊತ್ತುರ್ ಪೊರೆದು ಕಬ್ಬಿಗ ।
ರೊಡೆತನವುಂ ಪಡೆದೊಡವನೆ ಪಿರಿಯರ ಪಿರಿಯಂ ॥೨೩

ಕಡುಪಿಂ ಕೊರಾನೆ ಕಾೞ್ಕಿರ್ಚಡವಿ ಬಱಿಸಿಡಿಲ್ಬಳ್ಳಿಮಿಂಚೆಂಬಿವೆಲ್ಲಂ ।
ಪಡೆಗುಂ ನೋೞ್ಪರ್ಗೆ ಮೇಣಾಬ್ಬಿಗದೊದವನವೇ ಮತ್ತಮೊಳ್ಗಬ್ಬದೊಳ್ಬಂ॥
ದೊಡನೊಳ್ಪಂ ಪೆತ್ತು ಮಾೞ್ಕುಂ ಸಹೃದಯಹೃದಯಾಹ್ಲಾದಮಂ ನಾಡೆಯೆಂ
ತಾ । ದೊಡಮುಳ್ಕೇಂ ಕಬ್ಬಿಗರ್ತಾಮಘಟಿತಘಟನಾನೂತನಬ್ರಹ್ಮರಲ್ತೇ ॥

ಸ್ಮರಿಕುಮೆ ದುರ್ವಿದಗ್ಧಕವಿಕೂಪವಿರೂಪದುರಾಪವಾರಿಯಂ ।
ಪಿರಿದೊಡನಾಳ್ಗುಮೇ ಕುಕವಿಸಂಕುಲಪಂಕಿಲಪಲ್ವಲಾಂಬುವಂ ॥
ಸರಸ[illegible]ಚಕೆಯಿಂಚರದೆ ಪಾಡುತೆಯಾಡುತೆ ಮಾೞ್ಕುಮಟ್ಟಿಯಂ ।
ಸರಸಕವೀಂದ್ರವಂದ್ಯಚಿಕದೇವನ ಮಾನಸದೊಳ್ನಿವಾಸಮಂ ॥೨೪

॥ ಇಂತು ಸುಕವಿತಾಪದ್ಧತಿ ॥

ಮಸಗಿ ಜಡಾಶಯತಮನಂ ।
ತೆಸಗುಗೆ ಪರವಚನಚೌರ್ಯಮಂ ನಿಶ್ಶಂಕಂ ॥

ಜಸಮನದಱಿಂದೆ ಜಗದೊ |
ಳ್ಪಸರಿಕೆ ಪೆಱನಂತೆ ತನ್ನನಱಿವರುಮೊಳರೇ ||೨೬

ಸ್ವವಶಮದಲ್ತೆ ಕೇಳ್ತನಗೆ ನಾಲಗೆಯೆತ್ತಿಸಿನಾದೊಡಂ ಪದಂ |
ಕಿವಿಪ್ರೊಡೆಗೆಯ್ದು ಪೊಕ್ಕು ಪೊಱಮಟ್ಟು ಪಳಂಚದೆ ನಾಲ್ಕುಮೂಱಿದಂ ||
ಪವಣಿಸಿ ಸಾದ ಕಬ್ಬಮನಿದೊಂದನೊಡರ್ಚಿದೆನೆಂದು ಪೆರ್ಮೆಯಂ |
ಸವನಿಕೆ ತಕ್ಕಮಿಕ್ಕಿನೆಡೆಯೊಳ್ ರಸಿಕರ್ ವಿರಳರ್ಥರೀತಿಯೊಳ್ ||೨೭

ಪದಮವ್ಯಾಕೃತಿಶಿಷ್ಟಮೋ ಪವಣದೇಂ ಪ್ರಾಸಕ್ರಮಭ್ರಷ್ಟಮೋ |
ಪುದಿದರ್ಥಂಗಳುಮೋನಲಂಕೃತಿಚಮತ್ಕಾರಾಪಕೃಷ್ಟಂಗಳೇ ||
ಮುದಮಂ ಭಾವುಕರ್ಗೇಕೆ ಮಾಡವನಿತುಂ ಕಬ್ಬಂಗಳೆಂದಜ್ಞನೋ |
ಯದಿರೇನಕ್ಕುಮೆ ವಾಜಿ ಮಿಕ್ಕ ಪಶು ತಾನಾಕಾರದಿಂ ಪೋಲ್ತೊಡಂ ||೨೮

ಅವಿವೇಕದೊಳಳವಱಿಯದೆ |
ಭುವನಪ್ರಖ್ಯಾತದಿವ್ಯವಿಕ್ರಮಗತಿಯೊಳ್ ||
ಸವನಿಸೆ ಬಱುಸಂದೆಯುಮಂ |
ಕವಿಯಾದೊಡಮೇನವಂಗೆ ಕಣ್ಗಳವೆ ದಿಟಂ ||೨೯

ಉಱೆ ಕವಿತರ್ಪುದೊಳ್ಪಡಿಪುರುಳ್ಗಳ ನುಣ್ಬಮಣಿಂಪಮಲ್ಲದೇಂ |
ಮಱೆಗೆಯದೈದೆ ಬಾಯ್ದೆಱೆದು ಬಣ್ಣಿಸೆ ಮೇಣ್ ಪ್ರಸಮುಣ್ಕಿ ತೋರ್ಕುಮೋ ||
ಮಿಱುಗುವ ಮೇಲುದೋಸರಿಸೆ ಮೆಲ್ಲೆಲರಿಂ ನಸುನಾಣ್ಬಮಂತದೇಂ |
ತೆಱೆದೆರ್ದೆಯಿಂದೆ ಸಂದಪುದು ಚಂದಮೆ ಕೋಂಗರ ಪೆಣ್ಗಳಂದದಿಂ ||೩೦

|| ಇಂತು ಸತ್ಕವಿಪ್ರಶಂಸಾ[illegible] ||

ಪೊನ್ನುಡೆಯಿಗೆ ತೊ[illegible] ಬಾ |
ವನ್ನಮಿರಲ್ಬುದಿಪುಡಿಯನೊಳ್ಪನ್ನಮಿರಲ್ ||
ಮನ್ನಿಸಿಯೆಲುವಂ ಕೊಳೆಯುವ |
ನೆನ್ನಂ ತಾನಕ್ಕೆ ಪಶುಪನೆಂದೇ ಬಗೆವರ್ ||೩೧

ಸುರತರುಮಣಿಪಶುಗಳ್ ತಾಂ |
ಪಿರಿದೀವುದನಮರಲೋಕವಾಸಿಗಳಱಿವರ್ ||
ಪರಿದು ಬೆಳಗೆಯ್ವ ಕಳದೊಳ್ |
ತಿರಿವರದೇಂ ತಿಳಿಯಲಾರ್ಪರೇ ಕಾಲುರಿಚರ್ ||೨೧

ನೆಗೞ್ದ ರಸಗಬ್ಬಮನಾ |
ವಗೆಯಱಿದಾನಂದವಡೆದ ಮಂದರನೆವರಂ ||
ತೆಗೞ್ದ ನಾಡುಗರಂ ತಾ |
ನೊಗೆಯಿಸಿದಂ ಬಱಿದೆ ಬಿದಿಯದೇಂ ತಲೆವ್ರೋಕಂ ||೨೨

|| ಇಂತು ಅಜ್ಞಪದ್ಧತಿ ||

ದವಮುಂ ಬಾಡಬಮುಂ ಶಾಂ |
ಭವದೃಶಮುಂ ಕಾಲಕೂಟಮುಂ ಕಲ್ಪೋದ್ಯ ||
ದ್ರವಿಯುಂ ಪವಿಯುಂ ಪಿಶುನಜ |
ನವಚನದ ಕಲಾಕಲಾಂಶಮಂ ಪೋಲ್ತಪುವೇ ||೨೩

ಪುದಿದಿರ್ಪುದು ತೇೞ್ಗೆ ವಿಷಂ |
ತುದಿವಾಲದೊಳ್ಬಿದೆ ಫಣಿಗೆ ತುದಿದಾಡೆಗಳೊಳ್ ||
ತುದಿನಾಲಗೆಯೊಳ್ಪಿಸುಣಂ |
ಗಿದು ಸರಿಯವು ಸೋಂಕೆ ಕೊಲ್ವುವಿದು ಸೋಂಕದೊಡಂ ||

ಜಗದಸುಖವನೆ ನುಂಗುವರೊಡ |
ನುಗುೞ್ವರ್ಕಡುಬಿಸಮನವರು! ಕಾಲುಡುಗಿದೊಡಂ ||
ತಗುಳ್ದ*ಗಿವರೀಯೊಗೞ್ಗೆ |
ಲಗೆವಳರಂ ಪಲ್ಲನುಡಿವರಲ್ತೆ ನರೇಂದ್ರರ್ ||೨೪

|| ಇಂತು ಪಿಶುನನಿಂದೆ ||

ಜಲನಿಧಿಯೆಂದು ಸಂದ ಪ್ರೋಬೆನ್ನಿಳ ಬಲ್ಲಹನೆಂದುಮೀಟ್ಗಿಯಂ ।
ತಳೆದಿರೆ ಬಂದ ಪ್ರೋತವಣಿಜರ್ತಡಿಗೆಯ್ದಿ ತೃಷಾವಿಷಾದವಂ ॥
ಕೊಟಚೆಯ ನೀರೊಳೇ ಕಳೆಗುವೆಂದೊಡೆ ನಾಡೆ ಸಮುದ್ರ ಚಿಃ! ಸುಡೀ ।
ಘುಳಘುಳನೇಟ್ವ ಬೊಬ್ಬುಳಿಯನೀಸುಟಿಯಂ ನೊರೆಯಂ ತರಂಗವಂ॥೩೭

॥ ಇಂತು ಲೋಭಿನಿಂದೆ ॥

ಉರಿ ನೋಟದೊಳಗೆಯೆ ವಿಷಂ ।
ಕೊರಲೊಳ್ತೀವಿರೆ ಮಹೋಗ್ರಭಾವಮನಂಗೀ ॥
ಕರಿಸೆ ಪುರವೈರಿಯುವನೀ ।
ಶ್ವರನಾದೊಡಮೇಂ ಮರುಳ್ಗಳೆಟಿಯನೆ ತಪ್ಪಂ ॥೩೮

ಕುಡಿಗೆ ಕೊರಲ್ವರೆಗಂ ತಾಂ ।
ಕಡುವಟೆಯಂ ಕಟಿಗೆ ಕದಡುದೋರ್ಪುದೆ ಕಡಲೊಳ್ ॥
ತಡೆಯಿಲ್ಲದೆ ಘನತೆಯೊಳಂ ।
ಪಡೆಗುಂ ತಾಂ ಕರ್ಪುಬೆಳ್ಪುಬಣ್ಣದ ಬಗೆಯಂ ॥೩೯

ಅಟಿಯಿಸದಟಿಪುದು ಗುಣಮಂ ।
ಪೆಱರೊಳ್ತನ್ನೊಳ್ಪುಳಂಚಿದೊಡಮಲ್ಲದೊಡಂ ॥
ಕಟಿಯಂ ತನ್ನೊಳ್ಪೆಱರೊಳ್ ।
ಕಱುಬುತನಂ ಮಱುಕಮೆಂಬಿವೇಂಗೆಯ್ಯವು ಪೇೞ್ ॥೪೦

ಜನಪರಿತಾಪಾಪಹಜೀ ।
ವನಮೆನಿಸುತೆ ಘನನಿಕಾಯಮಂ ನೆಗೞ್ದಂ ತಾ ॥
ನಿನಿಸು ನೆವಮಿಲ್ಲದದಟಿಂ ।
ದನುಗೆಡಿಸುತ್ತುಂ ಪ್ರಭಂಜನನುಮುಱಿ ನೆಗೞ್ಗುಂ ॥೪೧

॥ ಇಂತು ದುರ್ಜನಪದ್ಧತಿ ॥

ಎರಡುಂ ಪಕ್ಕಮುಮೊಂದೇ ।
ಸರಿಯೆನೆ ನಡುನಿಂದು ನೆಗೞ್ದಯಾದ್ವಿಜವರನೊಳ್ ॥
ಕರವೊಸೆದು ತನ್ನ ಭಾರಮ ।
ನಿರಿಸಿದವೊಲ್ ಪೆಂಪುಗೊಳಿಪನುತ್ತಮಪುರುಷಂ ॥೪೨
ಮೈಮೆವಡೆದಿರ್ಕವಱಾವಂ ।
ಪ್ರೇಮಂ ಮಿಗೆ ವಿಬುಧಹೃದ್ಯಸದ್ವಿಕ್ರಮದಿಂ ॥
ಶ್ರೀಮಂತನೊರ್ವನವನೇ ।
ಭೂಮೀಶನುಮವನೆ ಅವನೆ ಪುರುಷೋತ್ತಮನುಂ ॥೪೩

॥ ಇಂತು ಸಜ್ಜನಪದ್ಧತಿ ॥

ಅಗಿಯುತ್ತಿರೆಯುರೆಮೆಯ್ಯುಂ ।
ಬಗೆದನೆ ಸಸಿ ರಾಹುವಂ ಚಕೋರದ ತೃಷೆಯುಂ ॥
ತಗುಳ್ದ* ಸುಧಾಕರನಂ ಧರೆ ।
*ಪೊಗೞ್ವನಮೋಂ ಸಿರದೊಳಾನನೇ ಸರ್ವಜ್ಞಂ ॥೪೪
ಮಣಿಯುಂ ಗಾಜುಮನೆಣೆಗೊಂ ।
ಡೆಣಿಸುಗೆ ಕಾಲುರಿಚರದಱಿನೇನೊಣಿಯುಮೋ ॥
ಗುಣಮಂ ದೋಷಮನಱಿತು ವಿ ।
ಪಣಿಯೊಳದೇನೊರ್ವನಿರನೆ ನೆಲವೆಲೆಗೊಳಿಪಂ ? ॥೪೫
ನೀರಕ್ಷೀರಂಗಳನೊಂ ।
ದೇ ರೀತಿಯೊಳಱಿವರಱಿಗೆ ಬೇರ್ಕೆಯ್ದದಱೊಳ್ ॥
ನೀರಸಮನುೞಿದು ಸಾರಮ ।
ಸಾರ್ದೈದುಱ್ ರಾಜಹಂಸನೊರ್ವನೆ ಸವಿಗುಂ ॥೪೬
ನೆಲಸುಗೆ ನೆೞಲೊಳ್ ಪಕ್ಷಿಗ ।
ಳಲಸದೆ ಪಲಿಸಿರ್ಕೆ ತರುಗಳದನೆಣಿಸಂ ಕೋ ॥

ಗಿಳಿಯುಲಿವಂದಮನದಱಿಂ ।
ಮಲರ್ದಲರ್ದಮ್ಮಾವಿನಿರವನಿಱಿಸೆಂ ಮನದಿಂ ॥೪೭

ಪಲವುಂ ಭಾವಂಗಳೊಳಂ ।
ಪಲತೆಱದಿಂ ಬಳಸಿ ಒರ್ಕೆ ಬುಧಗುರುಕವಿಗಳ್ ॥
ನೆಲೆಯುಂ ನಿರವಿಸೆಯೊರ್ವನೆ ।
ಕಲಾಧರಂ ಕಲ್ಲ ಮೆಲ್ಲಿತೆನೆ ಕರಗಿಸುಗುಂ ॥೪೮

ಮೊಗೆಮೊಗೆದೀಂಟಿಯೀಂಟಿ ಕಿವಿಸೋಱಿಗಳಿಂ ಸವಿಗಬ್ಬಗಬ್ಬದಿಂ ।
ಮಗಮಗಿಸುತ್ತ ಪಾಯ್ವ ರಸದಿಂ ಚರಿಯುಂ ಸವಿವನ್ನೆಗಂ ಕರಂ ॥
ಮೊಗಸಿರಿದೋಱೆ ಮೀಱೆ ನವಿರುಂ ಸೆರೆಗಳ್ ಬಿಗುಪೇಱೆ ಗದ್ಗದಂ ।
ಮಿಗೆಯುಗೆಯಾಲಿನೀರ್ ನೆಱೆ ಸೊಗಂಬಡೆವಂ ಚಿಕದೇವಭೂವರಂ ॥೪೯

ತಂದೆ ಚಿಕದೇವನಾಶ್ರಿತ ।
ಬೃಂದಕ್ಕೀಮುಱುಕಮೊಱುಕಮೇಂ ಪೆಱರ್ಗೊಳವೇ ॥
ತಂದೆಯುಮೀಯಂದದೊಳೇಂ ।
ಕಂದರ್ಗಾನಂದಮೊಸಗುಗುಮೆ ಪೇೞ್ ಮನಮೇ ॥೫೦

ಕೃತಿಪತಿಯ ನಲ್ಗುಣಂಗಳ್ ।
ಕೃತಿವೇಳ್ವನ ಮನಮನಲೆದು ನಲಿಯಿಸೆ ಪೇೞ್ವಾ ॥
ಕೃತಿಯೆ ಕೃತಿ ಮಿಕ್ಕಿನಂತುಪ ।
ಕೃತಿಯುಂ ತಾಂ ಒಯಸಿ ಪೇೞ್ವ ಕೃತಿಗಳ್ ಖಿತಿಗಳ್ ॥

ಕೃತಿಪತಿ ಚಿಕದೇವೇಂದ್ರಂ ।
ಕೃತಿ ಚಿಕದೇವೇಂದ್ರವಿಜಯಮೀಕೃತಿವೇಳ್ದಂ ॥
ಕೃತಮತಿಯವನೊಲ್ಮೆ ಪ್ರಮಾ ।
ಕೃತಿವೆತ್ತವೊಲೆಸೆವ ಸುಕೃತಿ ತಿರುಮಲೆಯಾರ್ಯಂ ॥೫೧

ಕಂದಂ ಕವಿಕೋಕಿಲಮಾ ।
ಕಂದಂ ಕೋಮಳವಿಕಾಸಿಕೃತಿಕಲ್ಪಲತಾ ॥
ಕಂದಂ ವಿಸ್ಮಯರರಸದು ।
ಕ್ಕಂದಂ ಚಿಕದೇವರಾಯಚಂದನ ಚಂದಂ ॥೫೨

ಕಂದಂಗಳ್ ಮಱುಕದ ಕಿಱು ।
ಗಂದಂಗಳ್ ಮುದ್ದುನುಡಿಗಳಂ ಮೊದಲಿಕುಂ ॥
ಚಂದಂ ಪ್ರಾಸಂ ಜತಿಯುಂ ।
ಚಂದಮನನುಸರಿಸಿ ಬರ್ಕುಮಮರ್ದುಗುವಿನೆಗಂ ॥೫೪

( ಇಂದ್ರವಜ್ರಾ ವೃತ್ತಂ )

ವೃತ್ತಂಗಳುತ್ತುಂಗರಸೋದಯಾನು ।
ವೃತ್ತಂಗಳತ್ತುಂಗಜಲೀಲೆಯುಂ ಸ ॥
ದ್ವೃತ್ತಂಗಳಂ ಪೆಣ್ಗಳ ಮತ್ತುರೋಜ ।
ವೃತ್ತಂಗಳಂ ಪೊತ್ತಿರ್ದೆಯೇೞ ಬಾೞ್ಗಂ ॥೫೫

ವಚನಂಗಳುಚಿತಚಾಟುವಿ ।
ರಚನಂಗಳ್ ಪ್ರಚುರರುಚಿರಸಾಹಿತ್ಯಸುಧಾ ॥
ವಚನಂಗಳನಿಯಳೊಲ್ಮೆಯ ।
ವಚನಂಗಳೆನಲ್ಕೆ ಮನಮನಿರ್ಕುೞಗೊಳ್ಗಂ ॥೫೬

ಚಿಕದೇವಕ್ಷಿತಿಪಾಲನಾಣತಿಯನಾಂತಿರ್ಕೆಧರಾಚಕ್ರಮೀ ।
ಚಿಕದೇವಕ್ಷಿತಿಪಾಲನುಂ ಸೊಗದೊಳಿರ್ಕಾಚಂದ್ರತಾರಾರ್ಕಮುಂ ॥
ಸಕಲಂ ಸಾಹಿತಿಯಕ್ಕೆ ಬಿಜ್ಜೆ ಸಕಲಂ ಸಾರಜ್ಞಮಕ್ಕೀಜನಂ ।
ಸಕಲಂ ತಾಂ ಕಿವಿಯಕ್ಕೆ ಮಿಕ್ಕ ಕರಣಂ ಸಾನಂದಮಕ್ಕಿಂ ಜನಂ ॥೫೭

ಈ ಚಿಕದೇವರಾಜವಿಜಯಮೆಂಬ ಮಹಾಪ್ರಬಂಧಕ್ಕೆ ಕಥಾಪ್ರಸ್ತಾವಮೆಂತೆನೆ :—

ಶ್ರೀವರನಖಿಲಜಗಜ್ಜೀ ।
ವನಲಯಲೀಲನಮಲನಾಶ್ರಿತಸುಲಭಂ ॥

ಪಾವನಗುಣಶೇವಧಿ ಚೆಕ |
ದೇವನೊಳೊಲ್ದಿರ್ಕೆ ರಂಗಮಂಗಳನಿಲಯಂ ||೫೮

ಸಿರಿಯೆಳೆಯರ್ಕಳರ್ಕಲದೊಳುಕ್ಕೆವದಿಂದಿರೆ ಮುಂದೆ ಪಾದಪಂ |
ಕರುಹದ ಸೋಂಕಿನೊಳ್ ನಲಿಯೆ ನೀಳೆ ಕರಂ ಪಡೆವಾಳ ಪಕ್ಕಿಯಾ ||
ಣ್ಮರುಮನಿತೂಳಗಂಗೆಯೆ ವಿಭೂತಿಯುಗಂ ಸೊಗವಾಳಿಯಾಳ್ದುವಾ |
ಹರಿ ಪರಿಪೂರ್ಣದಿವ್ಯನಿಜನಿರ್ಮಲನಿತ್ಯಸುಖಾನುಭೂತಿಯೊಳ್ ||೫೯

ವ|| ಇಂತು ತನ್ನ ಪರಮಪದದೊಳ್ ವೈಕುಂಠಪುರದ ಮಧ್ಯದೊಳ್ ಸಾಸಿರಗಂಬದ ಮಹಾಮಣಿಮಂಡಪದೊಳರ್ದರಸುಗೆಯ್ಯುತ್ತೆ ತನ್ನೊಳಿರ್ಪ ನಿತ್ಯಮುಕ್ತರ ನೆಲೆವಾಳ್ತೆಯೊಳಳ್ತಿವಡುತ್ತುಂ ಪ್ರಳಯಕಾಲದೊಳವ್ಯಕ್ತ ಸೂಕ್ಷ್ಮಪ್ರಕೃತಿಯೊಳಡಂಗಿ ಮಯಣದೊಳ್ ಪುಮಂಗಿದ ಚಿನ್ನದೊರೆವ್ರಡಿ ಯಂತೆರೂಪಟಿದಿರ್ಪ ಬದ್ಧಾತ್ಮವರ್ಗದ ದುರ್ಗತಿಯಂ ಕಳೆಯಲೆಂದು ಸರ್ಗಂಗೆಯ್ಯಲೆಳಸಿ ||೬೦

ತರುಣಿಯನೊಂದನೆ ಅದಕುಪ |
ಕರಣಂಗೊಂಡೊಡನೆ ತನ್ನ ಪೊಡೆಯಲವ್ರುಡಿಯಿಂ ||
ಬರಮುನನೊಗೆಯಿಸಿಯುವನೊಳ |
ಮರುಳ್ಗಳವಂತೊರೆದನೊಸೆದು ನಿಗಮದ ನೆಲೆಯಂ ||೬೧

ಬೊಮ್ಮನ ಮನದಿಂದಂ ಪೂಸ |
ಬೊಮ್ಮರ್ ಪೊಣ್ಮಿದರುದಾರರೊಂಬೈವರ್ ತಾಂ ||
ತವೊಳ್ಮೊಳ್ದಾರೆಗೊಂಡಿದೊರ್ಡ |
ಮೇಮ್ಮಿಗಿಲೆನೆ ನೆಗಳ್ದನತ್ರಿ ಚಿತ್ರಚರಿತ್ರಂ ||೬೨

ಅತ್ರಿಯ ನೇತ್ರದಿನನಿಬರ |
ನೇತ್ರಾನಂದನನೆನಿಪ್ಪ ನಂದನನೊಗೆದಂ ||

ಧಾತ್ರ್ಯಂಶದಿನಖಿಲಕಲಾ |
ಪಾತ್ರಂ ಶಶಿ ಕುಸುಮಚಾಪಜೈತ್ರಚ್ಛತ್ರಂ ||೬೩

ಇದು ಕಣ್ಣಾಪುರುಷೋತ್ತಮಂಗಿದು ವತಂಸಂ ವ್ಯೋಮಕೇಶಂಗೆ ತಾ |
ನಿದು ಜೀವಾತು ಮನೋಭವಂಗಿದು ನಟಾಚಾರ್ಯಂ ಸಮುದ್ರೋರ್ಮಿಗ ||
ಳ್ಗದಿಯಾಪ್ಯಾಯನವಾಸಮಸ್ತಸುರಬೃಂದಕ್ಕಿಂಬಿನಂ ಕೀರ್ತಿಸಂ |
ಪದಮಂ ಪೆತ್ತಸೆದಿರ್ಕುಮೀಯುತಬಿಲರ್ಗಾನಂದಮಂ ಚಂದ್ರಮಂ ||೬೪

**ಅದೆಂತೆನೆ** :—

ಪೊಳೆಪೊಳ್ಪಂ ತಣ್ಪು ನುಣ್ಪಂಪಿಡಿದಿರೆ ಕದಿರ್ಗಳ್ ವಿಶ್ವಸಂಸಾರಿತಾಪಂ |
ಗಳನೀಡಾಡುತ್ತೆ ದೋಷಾಸ್ಪದತಮಮುಮನೆಟ್ಟಿಟ್ಟೆ ಕೃಷ್ಣಾಂಕಮುಂ ಮೆ ||
ಯ್ಗೊಳೆಯಬ್ಜಾಭಿಖ್ಯೆ ಪೆಂಪಂ ಪಡೆಯೆ ಕುವಲಯಾಮೋದಮಿಂಬಾಗೆಯಾ
ಖಂ | ಡಲಮುಖ್ಯರ್ಗಾಸೆಸೊಂಪಂ ಪೆರ್ಚಿಯುರೆ ಮೆಚ್ಚಿದತ್ತಿಂದು ಗೋವಿಂದ
ನೇತ್ರಂ ||೬೫

ಶ್ರೀಮದ್ವಿಷ್ಣುಪದಾರ್ಪಿತ |
ಮಾಮುಕ್ತಸ್ಫುರತಾರಕಕುಟ್ಮಲಸರದಿಂ ||
ದಾಮೋದರನ ಬಾಸಿಗ |
ಮಾಮೋದಂಬಡೆಗುಮಮೃತಸಾಂದ್ರಂ ಚಂದ್ರಂ ||೬೬

ಸಕಲೌಷಧಿಪತಿ ಶಮನಾಂ |
ತಕನಿಟಿಲಜ್ವಾಲಜಾಲಶಲಭಾಯಿತನಂ ||
ಪ್ರಕಟಿಸಿ ತೋಱುಸುಗುಂ ದ |
ರ್ಪಕನಂ ಜನಮೊಲ್ದು ಪೊಗಳ್ವಿನಂ ಬಗೆಬಗೆಯೊಳ್ ||೬೭

ಆಗಿರೆ ಪದ್ಮಕೋಶದೊಳಗಿರ್ಪಳಿನಾದಮುಪಾಂಗನಾದಮು |
ದ್ವೇಗದೊರಲ್ಪ ಚಕ್ರರುತಿ ಗೆಜ್ಜೆಯ ನುಣ್ಚರಮೀಂಟ ಜೊನ್ನಮಂ ||

ಕೂಗುವ ಜೊನ್ನವಕ್ಕಿಗಳ ಮೆಲ್ಲುಲಿ ತಾಂ ಮೊಗವೀಸೆಯಿಂಚರಂ ।
ಸಾಗರದೂರ್ಮಿಯಂ ಕುಣಿಸುಗುಂ ಶಶಿಸೂತ್ರಿ ಕರಾಗ್ರಸೂತ್ರದಿಂ ॥೬೮

ಬಳಸಿ ಬಯಲ್ಬಟ್ಟೆಗಳೊಳ್ ।
ಬೞಲ್ಕೆ ಮಿಗೆ ಸತ್ರಶಾಲೆಗಳೊಳಂ ಬಿಡುಗ ॥
ೞ್ಗಳೊಳನಿಸು ನಿದ್ದೆಗಾಣದ ।
ಖಿಳವಿಬುಧರನೊಲ್ದು ಪೊರೆಗುಮೊರ್ವಂ ರಾಜಂ ॥೬೯

ವ॥ ಇಂತೀಚಂದ್ರಮನಖಿಳಜಗತ್ಕಾರಣನುಂ ಆಶ್ರಿತರಕ್ಷಾಪರಾಯಣನುಮ ಪ್ಪ ನಾರಾಯಣಂಗೆ ನೇತ್ರಸ್ಥಾನೀಯನುಮೀಶಾನಶಿರಶ್ಶ್ಲಾಘಾಸಂಸ್ತುತನುಮ ನಂಗಸಂಜೀವನನುಮಂಬುಧಿತರಂಗತಾಂಡವೋಪನಿಷದುಪದೇಶದೇಶಿಕನುಮ ಶೇಷಾಮರಪರಿಷದಾಪ್ಯಾಯಕನುಮೆನಿಸಿ ರಂಜಿಸುಗುಮಂತುಮಲ್ಲದೆಯುಂ ॥

ದಶಮುಖತಾಮಸಭಾವ ।
ಪ್ರಶಮನಕೃತಿ ವಾರಿರಾಶಿವಿಕ್ಷೋಭಕಲಾ ॥
ಕುಶಲಂ ಸತ್ಪಥಗಂ ಸ್ನಿ ।
ಗ್ಧಶುಭಾಲೋಕನದೆ ರಾಮಚಂದ್ರಂ ಚಂದ್ರಂ ॥೭೧
ಶ್ರೀಮದ್ವೈಷ್ಣವಪದದು ।
ದ್ದಾಮತೆಯಂ ನೆಗಪುತಮೃತಕಲೆಯಂ ವಿಬುಧ ॥
ಸ್ತೋಮಕ್ಕಮೀಯುತುಂ ಶ್ರೀ ।
ರಾಮಾನುಜನೆನೆ ವಿರಾಜಿಕುಂ ದ್ವಿಜರಾಜಂ ॥೭೦

ವ॥ ಮತ್ತಮಾರಾಜಂ ಮಹಾರಾಜನಂತಖಿಳಭೂಭೃನ್ಮಸ್ತಕನ್ಯಸ್ತಪಾದನುಂ ಅನುರಕ್ತಜನಾದೃತಪ್ರಸಾದನುಂ, ಗೋವಿಂದನಂತೆ ಸಂತತಗೋಕುಲೋಲ್ಲಾ ಸನುಂ ಶ್ರೀನಿವಾಸನುಂ, ವಿದ್ವತ್ಪ್ರಭುವಿನಂತೆ ಬುಧೋದ್ಭವಕರನುಂ ಕಲಾ ಧರನುಂ, ಬಲಭದ್ರನಂತೆ ರೇವತ್ಯಾಶ್ಲೇಷಾನುಕೂಲನುಂ ಕಾಮಪಾಲನುಂ, ಸುಜನನಂತೆ ಸದ್ವೃತ್ತನುಂ ಕ್ಷಣದೋದಯಾಸಕ್ತಮುಮೆನಿಸಿರ್ಕುಂ ॥೭೨

ವೃತ್ತಂ ||೨೪

( ಸ್ವಾಗತೆ )

ಅತ್ರಿನೇತ್ರವಿಹಿತೋದಯನೇ ತಾ |
ನಾತ್ರಿನೇತ್ರಮಕುಟೋದಿತನಕ್ಕುಂ ||
ಕ್ಷತ್ರವಂಶಪತಿಯಾಗಿಯುಮೇಂ ನ |
ಕ್ಷತ್ರವಂಶಪತಿಯುಂ ದ್ವಿಜರಾಜಂ ||೨೫

ವ|| ಮತ್ತಮಾಸುಧಾಕರಂ ವಿಧುವಾಗಿಯುಂ ಚಕ್ರವಿಶೇಷಕರನುಂ, ಕೃತ್ತಿಕಾಶ್ಲಿಷ್ಟನಾಗಿಯುಮಮಲಾಂಶುಕನುಂ, ಪುಷ್ಯರವಿಕಾಸಕನಾಗಿಯುಂ ಪಂಕಜಸಂಕೋಚಕರನುಂ, ಸತ್ಪಥಸಾಧಕನಾಗಿಯುಂ ಪಥಿಕಜನಬಾಧಕನುಂ, ಶುಚಿಯಾಗಿಯುಂ ಶೀತಕರನುಂ, ಕಾಮೋದ್ದೀಪಕನಾಗಿಯುಂ ಅಮೃತಾರ್ಥಿಜನಸೇವಿತನುಮೆನಿಸಿ ರಂಜಿಸಿಗುಮಂತಾ ಮಲ್ಲದೆಯುಂ ||೨೬

ಸಿರಿ ತೇಜಂ ಕಳೆಯೊಳ್ಪು ಸೊಂಪು ಸೊಬಗುಲ್ಲಾಸಂ ಜಸಂ ಪೆಂಪು ಸಿಂ |
ಗರಮಿಂಪೋಜೆ ಬೆಡಂಗು ದೇಸಿ ತಿಳಿವಾಹ್ಲಾದಂ ಪ್ರಸಾದಂ ಮನಂ ||
ಬರೆಯಾನಂದದ ಕಂದಮಿಂದುವುದಯಕ್ಷ್ಮಾಭೃತ್ತಟೀಸಿಂಹವಿ |
ಷ್ಟರಮಂ ಸಾರ್ದನಮುರ್ಕಿ ಸೊರ್ಕಿ ಜಗಮೆಲ್ಲಂ ಬರ್ದುಕಿರ್ದುವಾನಂದದೊಳ್ ||

ಕ್ಷಿತಿಯೊಳ್ ಸತ್ಸಂಗದಿಂ ಸನ್ಮತಿ ಮತಿಯಿನಶೇಷಾರ್ಥತತ್ತ್ವಶ್ರುತಂ ಮೇಣಾ|
ಶ್ರುತದಿಂದಾಚಾರಮಾಚಾರದಿನಱಮಱದಿಂ ಸತ್ವಮಾಸತ್ವದಿಂ ಶ್ರೀ ||
ಪತಿಪಾದಾಸಕ್ತಿಯಾಸಕ್ತಿಯಿನಖಿಲಫಲಪ್ರಾಪ್ತಿಯಾಪ್ರಾಪ್ತಿಯಿಂದ |
ಪ್ರತಿಮಾನಂದಾಪ್ತಿಯಾವಿರ್ಭವಿಸುವ ತೆಱದಿಂ ಸೋಮನಿಂ ಸಾಮ್ಯನಾದಂ ||

ಪರಿದು ಮಿತಂಪಚಸಭೆಯೊಳ್ |
ಪಿರಿಯತ್ಪನೆನಿಸಿ ನೆಗಳ್ದ* ಬುಧರಂತಿರಲಿಂ ||
ಗುರುಕವಿಯಿದಿರಲ್ಲಿ ಕಲಾ |
ಧರತನಯಂ ವಿಬುಧರಿಂದೆಯುಂ ಬುಧನೆನಿಕುಂ ||೨೯

ಸರಸಕವಮನೀಯಕಾಯಂ ।
ಶರಹತಿದೂರೀಕೃತಾಮರಾರಿನಿಕಾಯಂ ॥
ಪುರುಹೂತರಣಸಹಾಯಂ ।
ಪುರೂರವಂ ಬುಧನಿನಾದನಸಮನಜೇಯಂ ॥೮೦

ಪೇರ್ಮೆಯಿನಾರ್ಮನಂಬುಗಿಸರೀಬುಧನಂದನನಂದಮಂ ಕರಂ ।
ಕೂರ್ಮನ ಕೂರ್ಮೆಯಂ ದಿಗಿಭಸಂಘದ ಸಂಗಮುಮಂ ಫಣೀಂದ್ರನೊಳ್ ॥
ಶರ್ಮಮನೊರ್ಮೆಯುಂ ಗಣಿಸದುರ್ವರೆ ಕೊರ್ವಿರೆ ಬಾಹುಕಾಂಡದೊಳ್ ।
ಧರ್ಮದೆ ಧರ್ಮದಾರಪದದೊಳ್ ಪುದಿದುರ್ವಶಿಯುರ್ವಿ ಸೇಱದಳ್ ॥೮೧

ಅಪಿಸೀತಪುರುಷವಿದ್ವಿಷ ।
ದವನೀಭೃದ್ವಜ್ರನವಿರತೋದಯದಿಂ ಸಂ ॥
ದವನಿಂದೆ ನಯವಿಶಾರದ ।
ನವನಿಂದಾಯುಃಕುಮಾರನೊಗೆದನುದಾರಂ॥ ೮೨

ಆಯುಗೆ ನಹುಷಂ ವಿದ್ವಿಷ ।
ದಾಯುವನರೆಗೆಯ್ವನಧಿಗತನಯಂ ತನಯಂ ॥
ಕಾಯಜಮಂಜುಳನಸುರನಿ ।
ಕಾಯಜಡೀಕರಣಚಂಡಿಮಧುರಂ ಮಧುರಂ ॥ ೮೩

ಬರ್ದಿಲದ ನಾಡ ಕಟ್ಟಕಡೆಬೀದಿಯ ಹಾದಿಯೊಳೂರ್ಮೆ ಸಲ್ವೆಮೆಂ ।
ದೆರ್ದೆಯೊಳ್ ಪೂಣ್ದು ವರ್ಪಡದ ಪಾಡುಗಳಾವುದುಮಿಲ್ಲವೆಂದೊಡಾ ॥
ಬರ್ದಿಲಮೆ ತನ್ನ ಮುನ್ನಿನ ಮನಃಪ್ರಿಯನಂ ತೊಱೆದಟ್ಟಱಿಂದೆ ತಾ ।
ನೆರ್ದೆಗರಗುತ್ತು ಸಾರ್ದದೆನೆಯೀಜಸಮಾನಹುಷಂಗೆ ಸಂಗತಂ ॥ ೮೪

(ಅನುಷ್ಟುಪ್)

ಜಯಾತಿಪ್ರೀತಿನಿಹತಾ ।
ಭಿಯಾತಿ ನಹುಷಾತ್ಮಜಂ ॥

ಯಯಾತಿಭೂಮಿಪಂ ಸಪ್ತ ।
ಹಯಾತಿಜ್ಯೋತಿರಾಸ್ಪದಂ ॥೮೫

ಅತಿದೃಪ್ತಾಸುರಜಾತಿರೇಕದೆ ಮಹಾಗರ್ತಕ್ಕೆ ಬಿಟ್ಟಿದ್ದ ಭೂ ।
ಸತಿಯಂ ಶ್ರೀಧರನೆತ್ತಿ ಚಿತ್ತಭವಸಂತಾಪಂಗಳಂ ತೂಳ್ದು ಸಂ ॥
ತತಸೌಭಾಗ್ಯಮನಿತ್ತು ಸಂತವಿಸಿದಂತಾತರ್ಾವನೋವ್ಯಕ್ತನೀ ।
ಕ್ಷಿತಿಪಾಲಂ ಕವಿಕನ್ಯೆಯುಂ ನೆಗಪುತುಂ ಸೌಕರ್ಯಮಂ ತಾಳ್ದಿದಂ ॥೮೬

ಯದು ನಯದೂಷಿತಸುರಗುರು ।
ಕದನಕದರ್ಥಿತಸಪತ್ನನಪನೀತಿಮುರಾ ॥
ಸದನಸದನುಶಾಸ್ತ್ರಿಪರಂ ।
ಮದನಮದಾಪಹರರೂಪನವನಿಂದಾದಂ ॥೮೭

ಸಿರಿಯೊಳ್ ಬಿನ್ನಣಮೋಜೆಯೊಳ್ ವಿನಯಮುಂ ಕಟ್ಟಾರ್ಪಿನೊಳ್ ನೀತಿಯುಂ । ಕರುಣಾಳುತ್ವಮುಮೀಶ್ವರತ್ವದೊಳಂ ಸಾಮ್ರಾಜ್ಯದೊಳ್ ಪೆಂಪಿನೊಳ್ ॥ ಪರತೇಜಃಪರಿತೋಷಮುಂ ಹರಯದೊಳ್ ಸೌಜನ್ಯಮುಂ ನಿಚ್ಚವೊಂ । ದಿರೆ ತದ್ವಂಶದ ಮಯ್ಮೆವೆತ್ತು ನೆಗೆಳ್ದರ್ ಭೂಪಾಲವರ್ಯರ್ ಪಲರ್ ॥

ವ॥ ಇಂತೀಯಾದವರ್ ಪಡುಗಡಲ ಮಡುವಿನೆಡೆಯೊಳಡಿದ ಕಡಲೊಡೆಯನ ಬೀಡಿನ ಪಡಿನೆಲಂತೆ ಕಡುಬೆಡಂಗುವಡೆದ ದ್ವಾರಾವತೀಪುರಮಂ ಪರಿಪಾಲಿಸುತ್ತುಮಿರ್ದು ತಾಂ ತಮ್ಮ ಕುಲದೇವತೆಯುಂ ಕುಲಧನಮುಮಪ್ಪ ನಾರಾಯಣನ ಚರಣಾರವಿಂದದ್ವಂದ್ವಸಂದರ್ಶನೋತ್ಕಂಠೆಯಿಂ ಭೂವೈಕುಂಠಾಪರಾಭಿಧಾನಮಾದ ಯಾದವಾಚಲಕ್ಕೈತಂದು ॥೮೯

ಅಕಲುಷಿತಾಶಯದ್ರಮಿಡಸಂಸ್ಕೃತವೇದವಚೋವಿತಾನಶಾ ।
ಣಕಷಣದಿಂ ಯತೀಂದ್ರಶುಭಸೂಕ್ತಿಸುಧಾರಸಸೇಕದಿಂದೆಯುಂ ॥
ಪ್ರಕಟಿತಮಾದ ಯಾದವಗಿರೀಶನ ಪಾದನಖಾನಘಾಂಶುವಿಂ ।
ಸಕಲತಮಂಗಳಂ ಕಳೆದು ಸಂತಸಭಾಜನರಾದರಾದಿಯೊಳ್ ॥೯೦

ಅಲರೊಳ್ ಬಂಡುಣಿವಿಂಡುಗಳ್ ಸೊದೆಯೊಳಾ ಬಾಂಬಟ್ಟೆಗರ್ಗಂಡುಗೋ।
ಗಿಲೆಗಳ್ ಮೆಲ್ದಳದೊರ್ಂಬೆಯೊಳ್ ಗಿಳಿಗಳಮ್ಮಾವಣ್ಗಳೊಳ್ ತಳ್ತ ನ ॥
ಲ್ಲೊಲವ್ರೊಳ್ ಕಾದಲರೆಂದಿಗಂ ತಣಿಯದಂತೀಯಾದವರ್ ಯಾದವಾ ।
ಚಲನಾರಾಯಣನಿತ್ಯಕಿಂಕರತೆಯೊಳ್ ಸಂದಿರ್ದರಾನಂದದಿಂ ॥೯೧

ವ॥ ಇಂತಿವರ್ ಯಾದವಗಿರಿನಾರಾಯಣಚರಣಪರಿಚರಣವಿರಹಾಸಹಿಷ್ಣು ತ್ವದಿಂದೆಳೆಗನ್ನೆಯ ಕನ್ನವುರದನ್ನಮಿರ್ಪ ಕನ್ನಡನಾಡೊಳ್ ಕವೇರಕನ್ಯೆಯ ದಕ್ಷಿಣಮಹೀಭಾಗದೊಳ್ ಮಹಿತಮಾದ ಮಹೀಶೂರನಗರದೊಳರಸುಗೆಯ್ಯು ತ್ತುಮಿರ್ದರ್. ಅವರ ಗುಣಂಗಳೆಂತೆನೆ :— ॥೯೨

ಕಲ್ವೋದೊಳ್ಪಂಗೆ ಸಂಪಾದಿಸುವ ಪುರುಳಆಕ್ಕೊಳ್ಜಸಕ್ಕೀಟ್ಗಯೆಲ್ಲಂ ।
ಗೆಲ್ವುರ್ವೀಭಾಗಮಂ ಭೂಸುರಸುರಕುಲಮಂ ಕಾಪಿಡಲ್ ಗಾಡಿವೆತ್ತಾ ॥
ಚೆಲ್ವಂ ನಲ್ವೆಂಡಿರೊಳ್ಪಂಗಣುಗರವನಿಯುಂ ಪಾಲಿಸಲ್ಕೆಲ್ಲಿಯುಂ ತಾಂ ।
ಸಲ್ವಾಪುರ್ಂ ದರ್ಪಿತಾರಾತಿವಿಹತಿಗೆನೆಯೀವಂಶ್ಯರೌನ್ನತ್ಯಮೆಂತೋ ! ॥೯೩

ಏಳಮೆಯನೋದಿನಿಂ ಒಟೀಕೆ ದಿಗ್ವಿಜಯಕ್ರಮದಿಂ ಯುವತ್ವಮಂ ।
ಫಳವಿಷಯಾಭಿಲಾಷವಿಧುರಾನಘದಿವ್ಯತಪಸ್ಸಮಾಧಿನಿ ॥
ರ್ಮಳಮತಿಯಿಂದೆ ವಾರ್ಧಿಕಮನೀಪರಿಯಾಯುವನೆಲ್ಲಮಂ ಕರಂ ।
ಕಳೆದು ಪೊದಲ್ದ ಯಾದವರ ಪಾಂಗಿನೊಳನ್ಯರುಮೊಪ್ಪಲಾರ್ಪರೇ ॥೯೪

ಪಲವ್ರೊಡಲಾಂತುದೋ ಸುಕೃತಮಾಕೃತಿವೆತ್ತುವೊ ರಾಜನೀತಿಗಳ್ ।
ಕಲೆಗಳವೇಟ್ಗೆಯಿಂ ನಯನಗೋಚರಮಾದುವೊ ಮೂರ್ತಿಭೇದಮಂ ॥
ಕಲಿತನಮೆಯ್ದೆ ಪೊತ್ತುದೊ ಪ್ರತಾಪಮದೇಂ ಬಹುರೂಪುಗೊಂಡುದೋ ।
ನಲವಿನೊಳೀಜಗಂ ಪೊಗಟ್ಬನಂ ಬಗೆವಂದುದು ಯಾದವವ್ರಜಂ ॥೯೫

ಚಿಕದೇವನೃಪಾಲಕೃಪಾ ।
ವಿಕಸಿತಮತಿ ವಿಮಲತಿರುಮಲಾರ್ಯರ ಕೃತಿಯೊಳ್ ॥

ಚಿಕದೇವರಾಜವಿಜಯದೊ ।
ಳಕಳಂಕಂ ಪ್ರಥಮಮಾದುದಿಂತಾಶ್ವಾಸಂ ॥೯೬
ಜಾಣಿರ್ಕೆ ಜನದೊಳೆಲ್ಲಂ ।
ಕೇಣಂ ಕೆಲನಕ್ಕೆ ಮಿಕ್ಕ ಕಿಱುಗೆಯ್ಮೆಗಳೊಳ್ ।
ನಾಣಕ್ಕೆ ಕಳರ ಮೊಗಮಂ ।
ಕಾಣದೆ ಜಗಮನಿತುಮಿರ್ಕೆ ಕಡುಸಂತಸದೊಳ್ ॥೯೭

ಇದು ಯದುಗಿರಿಶಿಖರಾಭರಣಶ್ರೀಮನ್ನಾರಾಯಣಚರಣಪರಿಚರಣಪರಾಯಣ ಶರಣಾಗತರಕ್ಷಣವಿಚಕ್ಷಣ ಸಕಲಕಲಾಪ್ರವೀಣ ಬಿರುದಂತೆಂಬರಗಂಡ ಲೋಕೈಕವೀರ ಭೂರಿತುರುಷ್ಕಶುಷ್ಕವನದಾವಾನಲ ಮರಾಟಝಾಟಮೇಘಚ್ಛಟಾವಿಘಟನನಿರ್ಘಾಟ ಪ್ರಳಯಕಾಲಜಂಝಾನಿಲ ಪಾಂಡ್ಯಮಂಡಲಾಧಿಪವೇತಂಡವಿಲುಂಠನಕಂಠೀರವ ಮಲೆಪನೃಪಮದಮರ್ದನ ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪನಪ್ರತಿಮ

ವೀರನರಪತಿ ಶ್ರೀಚಿಕದೇವಮಹಾರಾಜ ಕೃಪಾಪರಿಪಾಲಿತ
ಶ್ರೀತಿರುಮಲೆಯಾರ್ಯ ವಿರಚಿತಮಪ್ಪ
ಚಿಕದೇವರಾಜವಿಜಯ ಮಹಾಪ್ರಬಂಧದೊಳ್
ಇಷ್ಟದೇವತಾಭ್ಯರ್ಥನ ಕವಿತಾದಿವರ್ಣನ ಜಗತ್ಸೃಷ್ಟ್ಯಾದಿ
ಯದುಪರ್ಯ್ಯನ್ತವಂಶವರ್ಣನಂ
ಪ್ರಥಮಾಶ್ವಾಸಂ ಸಂಪೂರ್ಣಂ.

# ದ್ವಿತೀಯಾಶ್ವಾಸಂ.

---

ಶ್ರೀದಿವ್ಯಾಪಾಂಗಂಗಳ |
ನಾದಿನದೊಳ್ ಕಲ್ತು ಪ್ರೌಳಪಿನೊದವಿಂ ತಮನಂ ||
ಮೋದಿ ನಿಗಮಂಗಳಂ ತಂ |
ದಾದಿಯ ಮೀನಾಳ್ದನಕ್ಕೆ ನರಪತಿಗನಿಶಂ ||೧

ಶ್ರೀವತ್ಸಾಂಕನುದಾರದೀರ್ಘಭುಜನುತ್ಫುಲ್ಲಾಮಲಸ್ನಿಗ್ಧರಾ |
ಜೀವಾಕ್ಷಂ ಕಮಲಾಪದಾಬ್ಜಯುಗಳಲ್ಲಾಕ್ಷಾಲಸದ್ವಕ್ಷಸಂ ||
ಭೋಮಾಹದ್ಯುತಿ ಭೋಗಿಭೋಗಶಯನೀಯಂ ಭೂಮಿನೀಳಾಸಖಂ |
ದೇವಂ ಪಕ್ಷಿಮರಂಗಧಾಮನೆಮಗೀಗಾನಂದಸಂದೋಹಮಂ ||೨

ಆವಂಶದೊಳತಿನಿರ್ಮಲ |
ನಾವಿರ್ಭವಿಸಿದನುದಾರರುಚಿರಸುವೃತ್ತಂ ||
ಭಾವಿಸೆ ಬೆಟ್ಟದ ಚಾಮ |
ಕ್ಷ್ಮಾವರನಿಳೆಯಾಣ್ಮರೆಸೆವ ತಲೆವಣಿಯನ್ನಂ ||೩

ಕಟ್ಟದಟಿಂದೆಯುಂ ಕಠಿನಪೀನಮಹೋನ್ನತಕಾಯದಿಂದೆಯುಂ |
ನೆಟ್ಟನೆ ನಿಂದು ಮೋಣಿನಿತುಮಳ್ಕದ ಬಳ್ಕದ ಬಲ್ಪಿನಿಂದೆಯುಂ ||
ನಿಟ್ಟಿಸಿ ಬೆಟ್ಟಗೆತ್ತಹಿತಭೂಮಿಪರೀಪೆಸರಿಟ್ಟರೆಂಬಿನಂ |
ಬೆಟ್ಟದಚಾಮರಾಜನೆನಿಕುಂ ನೃಪವರ್ಯನವಾರ್ಯವಿಕ್ರಮಂ ||೪

ದಯೆಯಿಂ ಧರ್ಮದಿನೋಜೆಯಿಂ ಸೊಬಗಿನಿಂ ಕಟ್ಟಾರ್ಪಿನಿಂ ಬಲ್ಪಿನಿಂ |
ನಯದಿಂ ನಲ್ಮೆಯಿನೊಲ್ಮೆಯಿಂ ವಿನಯದಿಂ ಸದ್ವೃತ್ತದಿಂ ಸತ್ಯದಿಂ ||
ದೆಯುಮೆಂತಾರ್ಬರುದಾಂತರಾಗರುವರಂ ಚಾಮೇಂದ್ರನುದ್ಯದ್ಗುಣಾ |
ಶ್ರಯನಂತೆಂಬರಗಂಡನೆಂಬ ಬಿರುದಿಂ ಮಿಕ್ಕಿರ್ಕಮೇಂ ತಕ್ಕನೋ ||೫

ಧರೆಯೊಳ್ ನೀವ್ರೊನಲೆಲ್ಲಮಂ ಕಡಲಶೇಷಜ್ಯೋತಿಯುಂ ನೇಸಱುಂ ।
ಬರವುಂ ಭೂತನಿಕಾಯಮುಂ ನಿಗಮಮುಂ ವಿದ್ಯಾಸಮೂಹಂಗಳಂ ॥
ಪಿರಿದುಂ ತಾವೊಳಕೊಂಡು ಸಲ್ವ ತೆಱದಿಂ ಶ್ರೀಚಾಮರಾಜೇಂದ್ರನೀ ।
ಬಿರುದೆಲ್ಲಾ ಬಿರುದಂಗಳೊಳ್ಪನಿಱಿಕೆಯ್ದಾರ್ಪಿಂ ಪೊದಟ್ಟೊದ್ದಪ್ಪುಗುಂ ॥೬

ಅಯದಿಂ ಸಿದ್ಧಿತ್ರಿತಯಂ ।
ನಯದಿಂ ಶಕ್ತಿತ್ರಯಂ ತ್ರಿವರ್ಗಂ ಜಗದೊಳ್ ॥
ಜಯದಿಂ ಜನಿಯಿಪವೋಲ್ ನಿ ।
ರ್ಭಯರನಿಂ ಮೂವರೊಗೆದರವನೀಪಾಲರ್ ॥೭

ವ॥ ಅಂತಾಮೂವರುಂ ತಿಮ್ಮರಾಜೊಡೆಯರ್ ಕೃಷ್ಣರಾಜೊಡೆಯರ್ ಚಾಮರಾಜೊಡೆಯರೆಂಬ ವ್ಯವಹಾರನಾಮಂಗಳಂ ನೆಗಳ್ದಿರ್ಪರವರೊಳ್ ॥೮

ಈತಿಮ್ಮರಾಜಭೂಪಂ ।
ನೀತಿವಿದಂ ನಿಪುಣರೆಱೆಯನನಿಶಾಭ್ಯುದಯಂ ॥
ನೂತನಕುವಲಯಪತಿಯವ ।
ದಾತಂ ಜಸಮೆಂಬ ಜೊನ್ನಮಂ ಪಸರಿಸುಗುಂ ॥೯

ಪೊಡವಿಯ ಪೊತ್ತ ಬಲ್ಪೊಱೆಯನೊಲ್ದಿಱಿಪಲ್ ಸಬಲಂ ಖಳರ್ಕಳಂ ।
ಕಡಿಕಡಿದೊಟ್ಟಿ ಮೆಟ್ಟಿ ಮಿಗೆ ಜೆಂಹಗನಂ ವಿಜಯಾಂಶುವೃದ್ಧಿ ದಾಂ ।
ಗುಡಿಯಿಡೆ ಧರ್ಮರಾಜ್ಯಮೆನಿಸುತ್ತಖಿಲಾವನಿಭಾಗಮಂ ಜಸಂ ।
ಬಡೆದಿರೆ ಕೃಷ್ಣರಾಯನೆನಿಪ್ರೊಳ್ಪಸರೀಪುರಸಂಗೆ ಸಂಗತಂ ॥೧೦

ಇಂತೆಸೆವ ಕೃಷ್ಣರಾಯನ ।
ನಂತರದೊಳ್ ಚಾಮರಾಜನೊಪ್ಪಂದವಸೀ ॥
ಕಾಂತಾಭಾಗ್ಯಫಲೋದಯ ।
ಮೇಂ ತಳೆದುದೊ ತನುವನೆಂಬಿನಂ ಬಗೆಗೊಳಕುಂ ॥೧೧

ವ॥ ಇಂತಿವಂ ಸಂತಸದೊಳ್ ಮಹಿಶೂರನಗರದೊಳರಸುಗೆಯ್ಯುತ್ತುಮಿರೆ

ಅತ್ತಲುತ್ತರದೇಶದೊಳ್ ಪಂಪಾಸರಃಪರಿಸರದೊಳ್ ನಿಖಿಲಸಂಪನ್ನಿಷದ್ಯೆಯೆನಿಪ ವಿದ್ಯಾನಗರದೊಳ್ ||೧೨

ಮೊದಲೊಳ್ ಹರಿಹರಬುಕ್ಕರ್ |
ಮೊದಲೆನಿಸಿದರರಸುಗೆಯ್ದು ಪಸರಿಸಿ ಜಸಮಂ ||
ಪದಪಿಂ ಕುಱುಂಬರಾಯರ್ |
ಪದಿಮೂವರ ಬರ್ದಿ*ಲವೇೞ ಬಣ್ಣಂಬಡೆದರ್ ||೧೩

ಬೞಿಕೀಶ್ವರನರಸಮುಖರ್ |
ತುೞಿಲಾಳ್ಗಳ್ ದೊರೆಗಳೆನಿಸಿ ತೊಲಗಿದರೈವರ್ ||
ತುೞುವರ್ ಸದಾಶಿವಾಭಿಧ |
ನೞಿಬರ್ದಂ ಪೊರೆಯುತಿರ್ದನೆಳಮೆಯೊಳಳಿಯಂ ||೧೪

ವ|| ಈರಾಯನೆಳವರೆಯುದವನಾದುದಱಿಂದವನ ||೧೫

ದೞವಾಯಿ ರಾಮರಾಜಂ |
ಬೞಿಕೞಿಜಸದೊಡನೆ ಮೆರೆಸಿಯಾಳ್ದನ ಸಿರಿಗಂ ||
ದೞುಪಿಯುಳಿಯನೆನಿಸಿಯುಮೊಡ |
ನೞಿದಂ ಬಾೞ್ದಪೆರೆಯಾಳ್ದನೊಳ್ ಪುರುಡಿಸಿದರ್ ||೧೬

ವ|| ಬೞಿಕ್ಕ ಮುಷ್ಕರತುರುಷ್ಕಶುಷ್ಕವೈರದೊಳೞಿವಳಿಯುರಾಮರಾಜನನುಜಂ ಎರದಿಮ್ಮರಾಜಂ ||೧೭

ವಿದ್ಯಾನಗರದ ರಾಜ್ಯಮು |
ನುದ್ಯಾಪನೆಗೆಯ್ದು ಪುತ್ರಮಿತ್ರರುಮಿದು ಸಾ ||
ಮದ್ಯಮೆನೆಯುಂ ತೆರಳ್ದಂ |
ಹೃದ್ಯದೊಳಂ ಹೃದ್ಯಮಲ್ತೆ ಹಂದೆಗೆ ಹರಣಂ ||೧೮

ವ|| ಆಬೞಿಕ್ಕಂ ||೧೯

ಘನಗಿರಿಯಲ್ಲಿ ಸಂದರಸುಗೆಯ್ವಿನಮಂದೆರದಿಮ್ಮರಾಜನಾ ।
ತನ ತನುಜಾತನಾಂತು ಚತುರಂಗಬಲಂಗಳನಾಜಿರಂಗದೊಳ್ ॥
ತನಗಿದಿರಾರುಮಿಲ್ಲೆನಿಸಿ ಪರ್ವಿದ ಗರ್ವದಿನುರ್ವಿ ಚಾಮರಾ ।
ಜನೊಳಿದಿರಾಗಿ ತನ್ನ ಗಜವಾಜಿಬಲಂಗಳ ನೀಗಿ ಸಾಗಿದಂ ॥೨೦

ಆಯೆರದಿಮ್ಮರಾಜಧರಣೀಶಕುಮಾರಕರಾಮರಾಜನಂ ।
ತಾಯುಸದಿಂದೆ ಪಿಂದೆಗೆಯೆ ರೇವುಟಿವೆಂಕಟನೆಂಬ ತಚ್ಚಮೂ ॥
ನಾಯಕನಾದುರ್ ಸಾದುರ್ *ಪೊಣರ್ದಳ್ಕದೆ ಚಾಮಧರಾಧಿನಾಥನಿಂ ।
ದಾಯಿಗನಾದನಗ್ಗಳದ ಸಗ್ಗಿಗರೊಳ್ ಸೊದೆಯಗ್ಗಸುಗ್ಗಿಯೊಳ್ ॥೨೧

ವ॥ ಇಂತು ಸಂಗರದೊಳ್ ತೆಲುಂಗರಾಯರಂ ಭಂಗಂಬಡಿಸಿ ರಾರಾಜಿಪ ಚಾಮರಾಜಂಗೆ ॥೨೨

ನಾಲ್ಕುಂ ವಿದ್ಯೆಗಳನ್ನರ್ ।
ನಾಲ್ಕುಮುಪಾಯಂಗಳನ್ನರರ್ಥಸಹಾಯರ್ ॥
ನಾಲ್ಕುಂ ಕುಮಾರಕರ್ಪದಿ ।
ನಾಲ್ಕುಂ ಜಗಮೆಯ್ದೆ ಪೊಗಳೆಯೊಗೆದರುದಾರರ್ ॥೨೩

ವ॥ ಆತನೂಜಾತರ್ಗೆ ಜಾತಕರ್ಮಮಂ ನೆಗಳ್ಚಿ ಜಗದ್ರಂಜನತ್ವದಿಂ ಸಹಜಸ್ಥೈರ್ಯದಿಂ ದಿವ್ಯಗುಣೋದಯದಿಂ ಚೆಲ್ವಿಕೆಯಿಂ ತೇಜುವಾಯಿಂ ರಾಜರಸರೆಂದುಂ, ಬೆಟ್ಟದಚಾಮರಾಜರಸರೆಂದುಂ, ದೇವರಾಜರಸರೆಂದುಂ, ಚೆನ್ನರಾಜರಸರೆಂದುಮನ್ವರ್ಥಂಗಳಾದ ನಲ್ವೆಸರ್ಗಳನಿಟ್ಟು ಶಸ್ತ್ರಶಾಸ್ತ್ರವ್ಯುತ್ಪತ್ತಿಯಂ ಪತ್ತುಗೆಗೊಳಿಸಿ ॥೨೪

ವೃತ್ತಾನ್ನತ್ಯಂ ತವೆನ್ಮೊಳ್ ।
ಪತ್ತಿರೆ ಪೊತ್ತಾಯುಧಂಗಳಂ ಖಳಕುಳಮಂ ॥
ಕೆತ್ತುವ ಭುಜಂಗಳಂ ಸ್ಫುರು ।
ಷೋತ್ತಮನಂತಿವರಿನೀನ್ನೃಪಾಲಂ ನೆಗ*ಟ್ದಂ ॥೨೫

ಆನಾಲ್ವರೊಳಂ ಸಕಲವಿ |
ಹೀನಾರ್ಥರ್ಕಳೊಳವರಾದ್ಯನೆನಿಸಿ ಜನನದಿಂ ||
ಮಾನಧನದಿಂದೆಯುಂ ಸೀ |
ತಾನಾಯಕನಂತೆ ರಾಜಿಕುಂ ರಾಜನೃಪಂ ||೨೬

ಸರಿ ಸಗರಂಗೆ ಸಾಟಿ ನಹುಷಂಗೆಣೆ ನಾಭಿಗೆ ಸನ್ನಿಭಂ ಯುಧಿ |
ಷ್ಠಿರಜನಪಂಗೆ ಪಾಸಟಿ ಯಯಾತಿಗೆ ಜೋಡು ವಿಡೂರಥಂಗೆ ತಾಂ ||
ದೊರೆ ಭರತಂಗೆ ಪಾಟಿ ರಘುವಿಂಗೆನೆ ಬಲ್ಲ ಬುಧರ್ಕಳುರ್ಕು ಮೊ |
ಯ್ಸಿರಿ ಸಿರಿಸೊಂಪು ಪೆಂಪಿನೆಸಕಂ ಮಿಗೆ ರಾಜನೃಪಂ ವಿರಾಜಿಕುಂ ||೨೭

( ಲಯಗ್ರಾಹಿ )

ಕಾರುಗನ ಹಳ್ಳಿಯುವನಾರುಬಟೆಯಿಂ ನೆರೆಯೆ ಭೂರಮಣರಂ ಸದೆದ ಬೀರತನದೊಳ್ಪಂ | ಮೀರೆಯುಱುದುರ್ಬಿ ತನಗಾರುಮಿದಿರಿಲ್ಲೆನಿಸಿ ಭೂರಿ ಬಿರುದಾಂತೊಡನೆ ಸೂರೆವಡೆಯಂ ಕೊಂ || ದಾರೊ ಮಹಿಶೂರ ದೊರೆಯಾರೆ ನುತಿದಿರ್ಚೆ ಪೆಱಸಾರದೆ ಕಶಾಭಿಹತಿಯಿಂದವನ ಮೂಗಂ | ಬೇರುಱು ಯದಂತರಿದು ಸಾರಯಶವಂ ಜಗಕೆ ಪೂರಯಿಸಿ ರಾಜನೃಪಧೀರನಿಳೆ ಯಾಳ್ದಂ ||೨೮

ವ|| ಇಂತು ರಾಜರಾಜಂ ಜೈತ್ರಯಾತ್ರೆಯೊಳ್ ಕಾರುಗನ ಹಳ್ಳಿಯಂ ಕೊಳ್ಳೆಗೊಂಡು, ಕಳಲೆಯಂ ಕಳೆಗುಂದಿಸಿ, ಮೂಗೂರಂ ಮೂಗೆನಿಸಿ, ತಗಡೂರಂ ಬೆಗಡುವಡಿಸಿ, ತಾಯೂರಂ ಬಾಯ್ವಿಡಿಸಿ, ಪೆಡತಲೆಯಂ ಪುಡಿಗುಟ್ಟಿ, ಹೆಮ್ಮರಗಾಲವಂ ಹಮ್ಮಳಿಸಿ, ನಿಲುಸೋಗೆಯಂ ನೆಲೆಗೆಡಿಸಿ, ಹುರವಂ ಹುರುಳಱಿಸಿ, ಹುಲ್ಲನ ಹಳ್ಳಿಯಂ ತಲ್ಲಳಂಗೊಳಿಸಿ, ಬಿಳಿಕೆರೆಯಂ ಬೀಳ್ಕೆಯ್ದು, ಕೊತ್ತಗಾಲವಂ ತೊತ್ತಳದುಳಿದು, ತಳಕಾಡಂ ತಳವೆಳಗಾಗಿಸಿ, ಅಮ್ಮಚವಾಡಿಯಂ ಮೆಟ್ಟಿಱಿವುಗಿಸಿ ಯಾದೊರೆಗಳನಿಬರನಾಳ್ಗೊಂಡು, ಮಂಡಲಾಧಿಪತ್ಯದೊಳಿರೆ ; ಅತ್ತಲೆರದಿಮ್ಮರಾಜಂ ಬಿಗುರ್ತು ||೨೯

ಗೊಂಡೆಯ ನೆಣೆಗೊಂಡಿರೆ ಪೆನು |
ಗೊಂಡೆಯು ನೆಲೆವೀಡಿನಲ್ಲಿ ಮಂಡಿಸಿ ಧರಣೀ ||
ಮಂಡಲಮಂ ಪೊರೆಯುತ್ತುಂ |
ದಂಡಧರಂ ಕಾಪುಗೊಂಡ ಪೊಱಲಂ ಪೊಕ್ಕಂ ||೨೦

ಮೂವರುಮವರ ತನೂಜರ್ |
ಮೂವಣ್ಣಂಗೊಂಡು ತೆಲುಗಕನ್ನಡತಿಗುಳರ್ ||
ತೀವಿದ ನಾಡುಗಳಂ ತಾ |
ವೋವಲ್ಕೆಂದರ್ದರಂದು ಮೂಱುಂ ಪೊಱಲಂ ||೨೧

ವ|| ಇಂತೀ ಶ್ರೀರಂಗ ರಾಮ ವೆಂಕಟರಾಯರೆಂಬರ್ ಪೆನುಗೊಂಡೆ ಶ್ರೀರಂಗಪಟ್ಟಣ ಚಂದ್ರಗಿರಿಗಳಂ ನೆಲೆವೀಡುಗೊಂಡು ಆಳನಾಡುಗಳಂ ಪೊರೆಯುತ್ತು ಮಿರೆಯುವರೊಳ್ ||೨೨

ಸಿರಿವಾಯು ರಾಮರಾಜಂ |
ಸಿರಿಯಂ ಪಿರಿದೆನಿಸಲೆಳಸಿ ಕಡುನಿಡುವೆಯುಣಂ ||
ದೆಗಳಲ್ಕವನ ತನೂಜಂ |
ತಿರುಮಲರಾಜಂಗೆ ಭೋಜ್ಯಮಾದುದು ರಾಜ್ಯಂ ||೨೩

ವ || ಇವಂ ||

ಕಂದಂಗೆತ್ತೀವಿದ ಕಿಡು |
ದಂಡೆಯು ಮಧುರಾಪುರಾಂತಕಾಂತಾರದೊಳೇ ||
ಪೊಂದಿಪೆನೆಂದು ಪುಯಿಲ್ಕಳ |
ದಿಂದಂ ಪಡುಗಡೆಯ ರಂಗಪುರಕ್ಕೈತಂದಂ ||೨೪

ವ|| ಬರಲೊಡಂ ||೨೫

(ರಥೋದ್ಧತೆ)

ಅಂದು ರಾಜನೃಪನಿಂದೆ ನೊಂದು ಕೈ |
ಗುಂದಿ ನಿಂದ ಪೆಲರಾಯರೀ ದಿಗಿ ||

ಬಂದಪಂ ತೆಲುಗನೆಂದು ಬಲ್ಪಿನಿಂ ।
ಸಂದಿಸಲ್ಕವನನೊಂದುಗೂಡಿದರ್ ॥೩೮

ವ॥ ಬೞಿಕ್ಕನಿಬರುಮವನಡಿಗೆಱಗಿ ಕಪ್ಪಕಾಣ್ಕೆಗಳನೊಪ್ಪಿಸಿ ಬಿನ್ನಪಿಸಿದರ್ ॥

ಮುನ್ನಾವೆಲ್ಲರುಮಿತ್ತು ತೆತ್ತು ಪೞಿಯರ್ದೇವರ್ಗೆ ನೀಂ ಬಾರದಿ ।
ರ್ಪನ್ನಂ ತನ್ನೊಳೆ ತಾನೆ ಪೆರ್ಚಿ ಮಹಿಶೂರಾಣ್ಮಂ ಪೊಣರ್ವನ್ನಗಂ ॥
ಬನ್ನಂಬಟ್ಟೆವು ಬಣ್ಣಿಗೆಟ್ಟೆವವನಂ ಕಾಲ್ಗಟ್ಟಿಯೊಳ್ಗೆಯ್ದವೇಂ ।
ಮುನ್ನಂ ನೋಂತೆವೊ ನಿನ್ನ ಚೆನ್ನಡಿಗಳಂ ಬೆಂಕೊಂಡು ಗಂಡಪ್ಪವಿಂ ॥೩೯

ವ॥ ಇಂತು ಮೊರೆಯಿಟ್ಟು ಪುರುಡಂ ಪುಟ್ಟಿಸಿ ದಟ್ಟಗಟ್ಟಿಪುದುಮವನುಂ

ಪಲರುಮೊಳನಾಡ ದೊರೆಗಳ್ ।
ಮಲೆನಾಡಗರೊಡನೆ ಬೇಡಮೊರಸರುಮೆಸ್ಸಿ ॥
ಬಲದೊಡವೆರೆದಿರೆ ಧರೆಯೊಳ್ ।
ಮಲೆಪರದಾರೆಂದು ನಿಂದನಂದದಟಿಂದಂ ॥೪೦

ದೞಿಮುೞಿವಾಯ್ದು ಪೊಯ್ದಿಡುವ ಕೊಳ್ಳಿಗೆ ಝಳ್ಳಿಸಿ ಹಳ್ಳಿಪಳ್ಳಿಗಳ್ ॥
ತಳವೆಳಗಾಗೆ ಪೊಕ್ಕು ಬೆಳಗೆಯ್ಗಳನೆಕ್ಕಟಿಯೊಕ್ಕಲಿಕ್ಕೆ ಮು ॥
ಟ್ಟಿಲುಗೊಳೆ ನಾಡುಬೀಡಗರವಾರದೆ ಕೊಟ್ಟಿಗೆದೇಗುಲಂಗಳಂ ।
ದೞಿದಳವಿಂದವಂ ಕೆಸಱಗೊಂಟೆಯನೊತ್ತಿಗೆ ಪತ್ತಿ ಮುತ್ತಿದಂ ॥೪೧

ವಸುಮತಿ ಪೆತ್ತುದೋ ದೆಸೆಗಳೀಂದುವೊ ನೇಸಱುಗುಳ್ದುದೋ ಕಡಲ್ ।
ಮುಸಗಿ ನೆಗೞ್ಚಿತೋ ಮುಗಿಲುದಿರ್ಚಿತೊ ಪೊೞ್ತು ಪೊದೞ್ದು ಸೂಚಿತೋ ॥
ಪೊಸಯಿಸಿಯಾಗಸಂ ಸೆಲಕುಱುಳ್ಚಿತೊ ಪೆರ್ಚಿತು ಪೆರ್ಚಿತೆಂಬಿನಂ ।
ಕೆಸಱಯ ನುಂಗಲಂಗವಿಸಿತಾಚತುರಂಗಬಲಂ ತೆಲುಂಗನಾ ॥೪೨

( ವಸೆಸುಯೊರಂ )

ಕಟ್ಟುಱಗೊಳಟ್ಟಣೆಸಿ ಮುಟ್ಟಿ ನಡೆದಾರ್ಪಿಂ ।
ಮೆಟ್ಟಿ ನೆಲನಿಟ್ಟಡಿಯ ನೆಟ್ಟನಿಸಿಸಂ ಪಿಂ ॥

ಮೆಟ್ಟಿ ದೞನಟ್ಟಿಡರೆಯಟ್ಟಿಳಿವರಂ ಕೈ |
ಗೊಟ್ಟು ಪುಯಿಲಿಟ್ಟರೆನೆ ದಿಟ್ಟತನವೆಂತೋ ! ||೪೩

ವ|| ಇಂತಿವರ್ ಕಳ್ಗಲೆಗೊಳ್ವನಂ ಕೋಂಟೆ ಕಿಱಿದುಮಗೞಿಸಿದುಮಾದು ದಱಿಂ ಬೆದಱುವ ದೞಮನಳವುಗೊಳಿಸಿ ರಾಜನೃಪನನುಜರ್ ಬೆಟ್ಟದಚಾಮರಾಜ ಚೆನ್ನರಾಜರಿರ್ವರುಂ ||೪೪

ಪಡಿಗೋಂಟೆಗೆಯ್ದು ಕಡುಪಂ |
ಪಡಿಯುಗ*ಱ್ಗೆಯ್ದುಳವನಾರ್ಪುಕಡುಗೂರ್ಪಗಳಂ ||
ಪಡಿವಡೆಗೆಯ್ದಂದವರೊಳ್ |
ಪಡಿಬರಿಸಿದರಮಮ ! ವಿಷ್ಣುಜಿಷ್ಣುಗಳನ್ನರ್ ||೪೫

ಕಿರ್ಚುಂ ಗಾಳಿಯುಮೊಂದೇ |
ಪೆರ್ಚುಗೆಯೊಳ್ ಬೆರಸಿ ಪೞುವಿನೊಣಗಿಡುಮರನಂ ||
ಉರ್ಚುವವೋಲ್ ಪಾಗಲ್ದನೆ |
ಗರ್ಚಿದರಂ ಉರ್ಚಿ ಬರ್ದಿ*ಲದೆಡೆಗೆಡರಿಸಿದರ್ |೪೬

ಕವೆಗೋಲಿಂ ತ್ರಿವಿದಿಕ್ಕಿ ಕಕ್ಕಡೆಗಳಂ ಕೈಯಿಟ್ಟಿಯಿಂದಿಟ್ಟು ಮುಂ |
ಟ್ಟಿವರಲ್ ಪಟ್ಟಿಯದಿಂದೆ ಕುಟ್ಟಿ ಗದೆಯಿಂದಂ ಮೋದಿ ಕಾಯ್ದಣ್ಣಗುಂ ||
ಬವನೇ ಕಾಂಚಿಯುರುಳ್ಚಿ ಪಂದಿದಲೆಯಂ ಪುಲ್ಗಿರ್ಚಿನೊಳ್ ಸೀದುಮಂ |
ವನರಂ ಪಂದಲೆಗುಟ್ಟಿಯೊಟ್ಟಿದರದೆಂತೋ ಬೆಟ್ಟಿನಲ್ಕಟ್ಟಿಯಂ ||೪೭

ಅಹಿತಬಲ ವನಮನೀಪರಿ |
ದಹಿಸುತ್ತಿರೆ ಬೆಟ್ಟಚಾಮಚೆನ್ನನೃಪಾಲರ್ ||
ಸಹಜಬಲದೊಡನೆ ಬಂದರ್ |
ಮಹಿಶೂರಿಂ ರಾಜದೇವರಾಜರಜೇಯರ್ ||೪೮

ವ|| ಬಂದಿವರ್ ಮಱುವಲಂ ಕಿಱುಪಿರಿದೆಂಬೆಣಿಕೆಯುಂ ಪೆಱಸಾರ್ಚಿ ಪೆರ್ಚಿದ ರಕ್ಕಸನಡೆಗಿದಿರ್ಚುವಿಂದ್ರಾಚ್ಯುತರಂತೆಯುಂ, ತುಱುವಿಡಿವೆಡೆಯೊಳ್ ಕುರು

ಬಲವುಂ ಪುಗುವ ಭೀಮಾರ್ಜುನರಂತೆಯುಂ, ಸಂಕೆಯಿಲ್ಲದುದಱಿಂ ನಿಶ್ಶಂಕಮಾಗಿರ್ದ ತೆಲುಂಗಪಾಳೆಯಮುಂ ದಱದುಱನಾಯ್ತು ||೪೯

ಬಱಿಕೈದಂತುಟು ರಕ್ಕಸರ್ಕಳಂ ಕ |
ಟ್ಟುಱಿದಿಂ ರಾಘವರಿರ್ವರಿಂದಿವರ್ಬೇ ||
ಸಱಿದಾಂಧ್ರಾವನಿಪಾಲಮೂಲಸೈನ್ಯಂ |
ಬಱಿದಪ್ಪಂತೆ ಪುಯಿಲ್ಚಿ ಪೊಯ್ದು ಗೆಲ್ವರ್ ||೫೦

( ವಸಂತತಿಲಕ ವೃತ್ತಂ )

ನಿಟ್ಟೋಟದಿಂ ಪರೆದರಂದೊಳನಾಡವರ್ ಕ |
ಣ್ಗೆಟ್ಟಲ್ಲಿ ತಲ್ಲಣಿಸಿ ಮೂಗಱಿನಟ್ಟು ಕೆಟ್ಟುಂ ||
ಕಟ್ಟೇಱ್ದು ನಿಂದೊಡಲ ಬೂವಮನಯ್ದುಗೆಯ್ದುಂ |
ಬಿಟ್ಟರ್ಕೆಲರ್ವೊರಸಬೇಡತೆಲುಂಗಕೊಂಗರ್ ||೫೧

ವ|| ಇಂತು ಕೂಟವಡೆಯುಂ ಕೋಟಲೆಗೊಳಿಸಿ ದಾಂಟಿಸಿ ಕೋಂಟೆಯುಂ ಪೊಕ್ಕು ಪೆರ್ಕಳಿಸಿ ಸೋದರರಿರ್ವರನಾದರಿಸಿಯಲ್ಲಿ ನಿಲ್ಲದೆ ಬಲ್ಪಡೆಗೊಂಡು ನಾಲ್ವರುಂ ಬೆಂಬತ್ತಿ ಪತ್ತಿ ||೫೨

ಪಟ್ಟಣವರೆಗಂ ಪಗೆದಱಿ |
ಧಟ್ಟುಗಳಟ್ಟಣಿಸೆ ಬಟ್ಟೆ*ಬಟ್ಟೆಗಳೊಳಮಾ ||
ಟ್ಟಿಟ್ಟು ತಲೆಗುಟ್ಟು ಕವರ್ದರ್ |
ತೊಟ್ಟುಟ್ಟುದಱೊಡನೆ ಮೂಗನಂದತಿವೇಗಂ || ೫೩

ವ|| ಬಱಿಕ್ಕಾ ತೆಲುಂಗಂ ಸಂಗರದೊಳ್ ಬಂಗಂಬಟ್ಟುದರ್ಕೆ ಸುರ್ಕದೆ ಪರಿಣಮುೞಿದುದರ್ಕೆಯೆ ಪೆರ್ಕಳಿಸಿ ಪಟ್ಟಣದೊಳ್ ಕಟ್ಟರಸುಗೆಯ್ಯುತ್ತಿರೆ ಯಿತ್ತಲನುಜಾತರೊಡನೆ ರಾಜರಾಜನಾಲೋಚಿಸಿ ||೫೪

ನೆಟ್ಟನೆ ಪಿತೃಘಾತಿಯಿವಂ ।
ನಿಟ್ಟಿಪುದುಂ ನಿಂದ್ಯಮೆಮ್ಮವಂದಿಗರಿಂದೀ ॥
ಪೊಟ್ಟುಗನಂ ಪೊಱಲಿಂದರೆ ।
ಯಟ್ಟುವೆವೆಂದೊರೆದು ಘಟ್ಟನೊಡನಳವಟ್ಟಂ ॥೫೫

( ಪ್ರಹರ್ಷಿಣೀ ವೃತ್ತಂ )

ಅಂದಂದಿಂಗಿಱಿದಿಱಿನಂತೆ ನಾಡುಬೀಡೊಳ್ ।
ಪೊಂದಾಯಂ ಪುಸಿಪುಯಿಲಿಕ್ಕೆ ಪಟ್ಟಣಕ್ಕಂ ॥
ಗೊಂದೊಂದುಂ ಕ್ರಮದೊಳೆ ಕುಂದೆಯೇಱುವಂಗಂ ।
ಮಂದಂ ಮುಂದಱಿಯದೆ ದೈನ್ಯಮೊಂದಿ ನಿಂದಂ ॥೫೬

( ವಸಂತತಿಲಕ ವೃತ್ತಂ )

ಆಂ ಪೋಪೆನಿಂಗನಗೆ ನಂಬುಗೆಯಂ ಪೊದಳ್ದೀ ।
ಕಂಪಂ ತೊಲಂಗೆ ಪೊಱಲಿಂ ಮಗುಳ್ದೆತ್ತವಾರೆಂ ॥
ನೀಂ ಪಾಲಿಸಿಂ ಪೊಡವಿಯಾಗಸಮಿರ್ಪಿನಂ ಮೇಣ್ ।
ಪೆಂಪೊಂದಿಮೆಂದುಸಿರೊಡಂ ಪರಸುತ್ತೆ ಪೋದಂ ॥೫೭

ವ॥ ಇಂತವಂ ತನ್ನ ಯಶಃಕಾಂತೆಯೊಡನೆ ಕಾಂತೆಯುಮಂ ತೊಱೆದು ಪೋದುವರ್ಕೆ ರಾಜನೃಪಂ ಕೃಪಾವಿಷ್ಟನಾಗಿ ವೇಗದಿಂದವನ ರಾಣಿಯೊಡನೆ ನಾಡುಬೀಡುಗಳ ಪೀಡೆಯುಂ ಕೂಡಿಸಿಯವನೆಡೆಗೆ ಕಳುಪಿ ॥೫೮

ಪಟ್ಟಣದೈಸಿರಿ ಮುಗಿಲಂ ।
ಮುಟ್ಟೆ ಪೆಡಂಮೆಟ್ಟೆ ಪಗೆವರಗ್ಗಲಿಸೆ ಜಸಂ ॥
ಪಟ್ಟವಣೆಯೇಱೆ ಮೆಱೆದಂ ।
ಕಟ್ಟರಸೆನೆ ರಾಜಭೂಪನಪ್ರತಿರೂಪಂ ॥೫೯

ಚಿಗುರಿಡೆ ದೇಗುಲಂಗಳಗರಂ ಪೊಗರೇಱೆ ಪೊಱಲ್ಗಳೇಱ್ಗೆಯಿಂ ।
ಸೊಗಯಿಸೆ ನಾಡುಗಳ್ ನಲಿಯೆ ಕೆಯ್ಗಳೊಳಂ ಬೆಳೆ ಪೆರ್ಚೆ ಲೋಗರುಂ ॥

ಸೊಗವಡೆಯಲ್ಕುಱುತ್ತಿಯೆಱಕಂ ಮಱುಕಂ ನಲವೊಳ್ಪುವೊಪ್ಪುಲೀ |
ಜಗತಿಯನಾಳ್ದು ರಾಜನೃಪನೊಳ್ಪಸವಿಂ ಜಗಮಂ ಬೆಳರ್ಚಿದಂ ||೬೦

ವ| ಅವನಿಂ ಬೞಿಕ್ಕೆ ||೬೧

ಧರ್ಮಸುತನಿಂದೆಯುಂ ಮಿಗೆ |
ಧಾರ್ಮಿಕನೆನಿಸವನ ಮೊಮ್ಮನಂದದೊಳೊಗೆದಂ ||
ಬೇವರ್ಗಯ್ದಿಳೆದುದೊ ಪ್ರಜೆಗಳ |
ಕೂರ್ಮೆಯೆನಲ್ ಚಾಮರಾಜನಾದಿಬಿಡರಾಜಂ ||೬೨

ನೆಲೆವೆತ್ತ ಮುತ್ತಿಂ ಮಿಗೆ |
ನೆಲೆವೆತ್ತಂ ಚಾಮರಾಜನೆಳಗಱಿಲೆಯವೋಲ್ ||
ಪಲವಗೆವಣ್ಣಪ್ಪುದೇಂ ಸಲೆ |
ಬೆಲೆವಡೆದೀರಾಜವಂಶಕೀವಗೆ ಸಾಜಂ ||೬೩

ವ|| ಬೞಿಕ್ಕವನೆಳಸಿಂಗದಂತೆಯುಂ, ಪೊಸನೇಸಱಂತೆಯುಂ, ತ್ರಿವಿಕ್ರಮನಂತೆಯುಮುರ್ಕುವ ಶೌರ್ಯತೇಜಃಪರಾಕ್ರಮಂಗಳಂ ಸೆಗೞ್ದು, ದೆಸೆಗಳಂ ಗೆಲಲೆಳಸಿ ಮೊತ್ತಮೊದಲ್ ಮೂಡಣ್ಗೆ ನಡೆದು ||೬೪

ತಲಕಾಡು ತಲ್ಲಣಂಗೊಳೆ |
ಮಳವಳ್ಳಿಯನಳುರ್ದ ನಂಜರಾಜನ ಕುಳಮಂ ||
ಸೆಳೆದಂ ಬಳಸಿದ ಪ್ರಭುಗಳ |
ಬಳಮಂ ಜಗದೇವರಾಯನಗ್ಗಳದೞಮಂ ||೬೫

ಕೊಂಗದೊರೆವಂಗಡಂ ನಿಡು |
ಬಂಗಂಬಡೆ ಕುಟ್ಟಿ ಗಟ್ಟಿಮುದನಾರಿಯನಾ ||
ತಂ ಗರ್ವಮಿಱಿದು ನೀಡಿದ |
ಚೆಂಗೊಂಡಂ ಕೊಂಡನೆಂದು ಗಂಡರ ಗಂಡಂ ||೬೬

ವ|| ಆಗಜಮಂ ಕೊಂಡು ಬೞಿಕ್ಕೆ ||೬೭

ಪಡುಗಡೆಗಯ್ದು ವೋದಿ ಕೊಡಗಂ ಗುಡುಗಾಡಿಸಿ ಕೊಟ್ಟಿಗೋಂಟೆಯಂ |
ನಡ.ಗಿಸಿ ಕೇಡನಾಕಳಲೆನಾಡೊಳೊಡರ್ಚಿ ತೊಡರ್ಚಿ ತ್ರೋಟಿಯ:ಂ ||
ಪಡಿದಟವಾಂತು ಬಂದ ಮಲೆನಾಡಿನ ಸಿಂಗಳರಾಯನಂ ವೋಗಂ |
ಗಿಡಿಸಿ ಜಸಂ ಬೆಸಂಬಡೆಯೆ ಬಲ್ಲಿದನೀಪರಿ ಚಲ್ಲವಾಡಿದಂ ||೬೮

ರುದ್ರಗಣಾಂಕಂ ಘನಶ |
ರೋದ್ರೇಕಂ ತಣ್ಪುಗೊಂಡು ತಂದಿತ್ತು ಮಹಾ ||
ಭದ್ರಗಜಾಶ್ವಗವಾದಿಬ |
ಹುದ್ರವ್ಯಂಗೊಂಡು ಕೊಟ್ಟನನುಪದ್ರವಮಂ ||೬೯

ದೊರೆಸಿಂಗಸರಬನುಂಇದೊಳ್ |
ನರಸಿಂಗಪುರಕ್ಕೆ ನಡೆಯೆ ಕನಕವಸಂತಂ ||
ದೊರೆಕೊಂಡುದೊಡನೆ ಮತ್ತಂ |
ದೊರೆಕೊಂಡುದು ಕರಿಯುವೊಂದು ಕನಕವಸಂತಂ ||೭೦

ಪೞವಂ ಚತುರ್ಥವ ಕೀರ್ತಿನಲ್ ಬೆಳಗಿ ಮುಂ ಬೇಲೂರ ನಾಡೆಲ್ಲವ:ಂ |
ಕೊಟತೂರಂ ತು:ದೊಕ್ಕಲಿಕ್ಕಿಯೊಳಪೊಕ್ಕಿದ್ರಾಪಯಿಂಭಾಸಿರಂ ||
ದಟಮಂ ಕೆಸೆಱಗೆಯ್ದು ಕ್ಕೈದುಗಳನಿ:ಱ್ಟಾಪಾಗ್ರಸಾಮಗ್ರಿಯಿಂ |
ಬ:ಕಂ ಬಲ್ಲಹಿಗೆಲ್ಲವೆಣ್ಗೆ ಸಮೆದಿತ್ತಂ ಚಾಕಿಯಂ ಜೋ:ಕೆಯಿಂ ||೭೧

ಪಂದಲೆಯಿಂದಮೋ ಜಗಲಿ ನಿಗ್ಗವದಿಂದಮೆ ಕಂಬಮಿಟ್ಟಿಗಾ |
ವಿಂದಮೆಯುಡ್ಡವಾಸು ಕಣೆಯಿಂದಮೆ ಪಂಜರಗಟ್ಟು ಬಿಲ್ಲ ಜೇ ||
ಯಿಂದಮೆ ಕಟ್ಟುನೇಣ್ ಪಲಗೆಯಿಂದಮೆ ದಡ್ಡಿಯುಮೊಡ್ಡಮಾಗೆ ಚೆ |
ನ್ನೊಂದಿತು ಬೀರವೆಣ್ಕ್ರದುವೆಯೊಳ್ ಪಸೆಗಿಕ್ಕಿದ ಪಂದಲಂದದಿಂ ||೭೨

ವ|| ಅನಂತರದೊಳ್ ||೭೩

ಪರಿಮ ಪೊಸಕೋಂಟೆಯಂ ಮು |
ತ್ತಿರಲೊಡವಮೆನಂಜರಾಜನೆಂಬುವಿನಂ ನಿ ||

ಬ್ಬರದಿಂದೆ ನಾಗಮಂಗಲ ।
ದರಸು ಬೆನ್ನಟ್ಟಿ ಬಂದನಂಗುಸರಾಜಂ ॥೨೩

ರಾಯುವಜೀರನೆಂಬ ಪಿರಿದುಂ ಬಿರುದಾಂತಿದಿರಾಂಪರಿಲ್ಲವೆಂ ।
ಬೀಯುದಟಿಂದೆ ಮುಂದೆಸಿಸಲಗ್ಗದ ವಾರುವವೊಗ್ಗರಂಗಳಂ ॥
ದೀಯೆಳೆಯುಂ ಖುರೋಚ್ಚಲಿತಧೂಳಿಯಿನಾಗಸವುಂ ಮಹಾಭಟರ್ ।
ಭೋಯೆ.ನೆಲೆಯಾಮಹಾಧ್ವನಿಯೊಳೀ ದಿವಮುಂ ಜಡಿದೊರ್ಮೆ ಮುತ್ತಿದಂ ॥

ಕಂಡೊಡನೆಬ್ಬಿ ಬಲ್ಲೆಚಿಕಿದಿರ್ಚಿ ಕೆಳರ್ಚಿ ಪ್ರೋರ್ಚಿ ಪೊಯ್ದು ಬೆಂ ।
ಕೊಂಡುರೆ ಮುಂಡಮುಂ ಕುಣಿಸಿಯುಂಗುಸರಾಯನ ಗಂಡುಬೀರಮುಂ ॥
ಕಂಡಿಸಿ ಚೊಕ್ಕಳಕ್ಕೆಯೊಡನೊಂದಿದ ಪಟ್ಟದ ಭೋಜರಾಜನಂ ।
ಕೊಂಡನೆನಲ್ಕೆ ಚಂಡಿಸುವ ಗಂಡರದಾರ್ಗಳ ! ಚಾಮರಾಜನೊಳ್ ॥೨೫

ವ॥ ಆಗಳೀಚಾಮರಾಜಂಗೆ ॥೨೬

( ಉಪಜಾತಿ )

ಬಸವಟ್ಟದು ಚೆನ್ನಪಟ್ಟಣಂ ।
ಪೊಸತಾಂಧ್ರಂಗೆ ಪೊದಬ್ದಿದಿಟ್ಟಣಂ ॥
ಅಸಿದಾದುದವಂಗೆ ಮಂಗಲಂ ।
ಬೆಸದಿಂ ಪಿಂಗಿತು ನಾಗಮಂಗಲಂ ॥೨೭

( ದ್ರುತವಿಳಂಬಿತಂ )

ಪರಿದು ಸುತ್ತಣ ಪಾಳೆಯದೊಳಗಳ್ ।
ಪರಿಭವಂಗೊಳೆ ಸಿಂಗದ ಪಾಂಗಿನಿಂ ॥
ಮೊರಸಬೇಡರನೋಡಿಸಿ ಗನ್ನದಿಂ ।
ಸಿರಾವುತನುನ್ನತಿದಾಳ್ದಿದಂ ॥೨೮

ವ॥ ಆಸೂರ್ಕಿನಿಂದಮೆ ಮಿಕ್ಕು ಮೀಱಿ ಬರೆ ॥೨೯

ಥಟ್ಟುಗಳೆನ್ನ ದಿಟ್ಟಗೊಳೆ ನೆಟ್ಟನೆ ನಿಲ್ಲವು ಮುಟ್ಟೆ ಮುಂದೆ ಪಾ ।
ಯ್ದಿಟ್ಟಿಯನೇ ನಿಮಿರ್ಚಿ ಬಗೆ ಬೆರ್ಚದೆ ಚಚ್ಚರಮಿರ್ಪ ಬೀರರಂ ॥

ನಿಟ್ಟಸನೆಂಬ ಪಿಂಬಳಿದ ಗರ್ವದಿನುರ್ವಿದ ಶೀಲವಂತನಂ ।
ಜಟ್ಟಿಗದೊತ್ತಿ ನಲ್ಲಿ ತಲೆಗುಟ್ಟಿದನೊಟ್ಟಿದನಟ್ಟಿಯೊಟ್ಟಲಂ ॥೮೦

ವ॥ ಬಡನವನೊಡೆಯುಂ ಬಲದೋಳ್ದಲೆಯಾಳೞಿವುದರ್ಕೆ ಸುರ್ಕೆ ॥೮೧

ಚಾಮನೃಪಾಲನೊಳೊಡೆವೆರೆ ।
ದಾಮುೞಿಯಲ್ವೇೞ್ಪುದೆಂದು ನಿರವಿಸಿ ಮುದಿಯಂ ॥
ಸೀಮೆಯುೞಿಯೆ ತಂದಿತ್ತಂ ।
ರಾಮಯಲಿಂಗಾಖ್ಯಗಜಮನಶ್ವವ್ರಜಮಂ ॥೮೨

ವ॥ ಇಂತು ದೇಶಂಗಳಂ ಗೆಲ್ದು, ಪೊರ್ದಿದರ್ಗೊಲ್ದು, ಮುಳಿದರನುೞಿಯಿಸಿ, ಮಾಱಾಂತರನುೞಿಯಿಸಿ, ತಕ್ಕರಂ ಲಾಲಿಸಿ, ಮಿಕ್ಕರಂ ತೇಲಿಸಿ, ಬೀರರಂ ಪೆರ್ಚಿಸಿ, ಬಿಜ್ಜೆವಳರನರ್ಚಿಸಿ, ಪೞುಗಳಂ ಚುರ್ಚಿ, ಪಳ್ಳಿಗಳನಮರ್ಚಿ, ಪ್ರಜೆಗಳನೋವಿ, ಪಸುಗಳಂ ತೀವಿ, ಆಗರಮಂ ಬಳೆಯಿಸಿ, ಆರವೆಗಳಂ ಬೆಳೆಯಿಸಿ, ಕುಳಂಗಳಂ ನೆಗೞಿಸಿ, ಕೊಳಂಗಳನಗುೞಿಸಿ, ಸಂತತಂ ಸಂತಸವಡೆದಿರ್ದಂ ॥೮೩

ವ॥ ಬೞಿಕ್ಕವನ ಕಿಱುದಂದೆಯಾದ ರಾಜನೃಪನಂದನಂ ॥೮೪

ಧರೆ ಸೊಂಪೇಱೆ ಧರಾಮರರ್ ಪದಪಿನಿಂ ಪೆಂಪೇಱೆ ವಿದ್ವಜ್ಜನಂ ।
ನೆರೆದಿಂಪೇಱೆ ನೆಗೞ್ದ ಬೀರವಡೆಗಳ್ ಬಿಣ್ಪೇಱೆ ಮುಂ ಪೊರ್ದಿದರ್ ॥
ಪಿರಿದುಂ ಪೊಂಪುೞಿಯೇಱೆ ಪಟ್ಟವಣೆಯುಂ ತಾನೇಱಿದಂ ಸದ್ಗುಣಾ ।
ಕರನಂದಿರ್ಮಡಿರಾಜರಾಜನಖಿಲರ್ಗಾನಂದಮಂ ಬೀಱಿದಂ ॥೮೫

ತವೆ ದುಶ್ಶಾಸನಭೀತಿ ತರ್ಗೆ ಭರದಿಂದಂ ಭೀಷ್ಮಕರ್ಮೋದಯಂ ।
ನವೆದಾೞಂಬುಗೆ ಕರ್ಣಶಲ್ಯಕಥೆಗಳ್ ದುರ್ಯೋಧನಂ ಕುರ್ಗೆಯಾ ॥
ಹವದಿಂದಂ ವಿಜಯಾಭಿವೃದ್ಧಿ ಮಿಗೆ ಸರ್ವಾಭೀಷ್ಟಮುಂ ಸಾರೆ ಮಾ ।
ಧವನಿಂದಿರ್ಮಡಿರಾಜನೇಂ ಮೆಱೆದನೋ ತಾಂ ಧರ್ಮಜಖ್ಯಾತಿಯಿಂ ॥೮೬

ವ॥ ಬೞಿಕೆ ॥೮೭

ಲುಂಠಿತರಿಪುಕುಂಜರನು |
ತ್ಕಂಠಿತಗಿರಿವಿಪಿನದುರ್ಗವರ್ಗಾಕ್ರಮಣಂ ||
ಕುಂಠಿತಪರವಿಕ್ರಮನೆನೆ |
ಕಂಠೀರವನರಸರಾಜನಾದಂ ರಾಜಂ ||೮೮

ನೆಗಳ್ದನ್ನಂ ಬಿಡುಗಣ್ಣರನ್ನರಚಕನಾಸಂಪನ್ನದಿಂ ಜನ್ನದಿಂ |
*ನೆಗಳ್ದನ್ನಂ ದ್ವಿಜರಗ್ರಹಾರಕಲನಾಸನ್ಮಾನದಿಂ ಮಾನದಿಂ ||
*ನೆಗಳ್ದನ್ನಂ ಪ್ರಜೆಗಳ್ ಸ್ವಜಾತ್ಯುಚಿತ ತತ್ತತ್ಕರ್ಮದಿಂ ಶರ್ಮದಿಂ |
*ನೆಗಳ್ದಂ ಬೆಟ್ಟದ ಚಾಮರಾಜತನಯಂ ಸಾಮ್ರಾಜ್ಯದಿಂ ಪ್ರಾಜ್ಯದಿಂ ||೮೯

ಇರ್ಕೇರಿಬಸವಪಟ್ಟಣ |
ದುರ್ಕರಸಗೊಂದು ನೆವದೊಳಂದಿಂಗೆ ಪುಯಿಲ್ ||
ಪೆರ್ಕಳಿಸಿ ಪರಿಯುದಿರೆ ಭೃಶ |
ಕರ್ಕಶರೞಿಗೆಯ್ಮೆವಟ್ಟೆಗೊಡನಡಿಯಿಟ್ಟರ್ ||೯೦

ವ|| ಅವರೊಳ್ ||೯೧

ಕೆಂಗೆಯ ಹನುಮಂ ಕಿಱುನೆರ |
ವಿಂಗೆಳಸದೆ ವಿಜಯಪುರದ ಶಾಹನ ದೞಮಂ ||
ಬೆಂಗೊಂಡು ಬಳೆದ ದೂಳಿಯೊ |
ಳಂಗಿಸಿದಂ ಗಡಿಗಳವರ ಸಂಗರರಸಮಂ ||೯೨

ನಾಲ್ವತ್ತು ಸಾಸಿರಂ ಕಡು |
ಗಾಲ್ವೆತ್ತೊಳ್ವಾರುವಂಗಳಾಳ್ಮೆಲಕ್ಕಂ ||
ಸಲ್ವಾನೆ ಸಾಸಿರಂ ಬರೆ |
ಬಲ್ವಡೆಯಂ ತಂದನಮಮ! ಕೆಂಗಯ ಹನುಮಂ ||೯೩

ವ|| ಆದೞಿದೊಳ್ ||೯೪

ಕಿಱುಗಿವಿ ದೇಸೆವೆತ್ತ ಸಿಮೊಗಂ ಸಘುರುಸ್ವನನಾಸಿಕಾಪುಟಂ |
ಮಿಱುಗುವ ಕಂದಮುರ್ಬಿ*ದೆರ್ದೆ ಪೆರ್ದೊಡೆ ನುಣ್ಬೊಡೆ ಸಣ್ಣಗಾಲ್ಗಳುಂ ||
ನೆಱೆಗೊಳಗುರ್ಬುವೆಚ್ಚಳಮುದಂಚಿತವಾಲಧಿ ಸೂಕ್ಷ್ಮರೋಮದಿಂ |
ಮೆಱೆವುವು ವೇಗದಿಂ ಜಱೆವುವಾಘನವಾಜಿಗಳಂದ್ರನಾಹವಮಂ || ೯೫

ಇಕ್ಕಿದ ಪಕ್ಕರಕ್ಕೆ ಸಿಡುರ್ಝಲ್ಲಿ ತೊಡಂಕುವ ತೋಱುಗೊಂಡೆಯಂ |
ಸೆಕ್ಕಿದ ಖಂಡೆಯಂ ಬಿಗಿದ ಬಿಲ್ ಪೊದೆಮುಂಬಿದ ಬೋಳೆಯಂಬು ಕಂ ||
ದಕ್ಕಮ*ರ್ದಿಟ್ಟ ದಿಟ್ಟಸರಪೊಂಬಳೆಗಳ್ ಮೊಗರಂಬಮೊಂದು ಪೊಂ |
ಬಕ್ಕೆಯ ತೊಕ್ಕು ಮೆಯ್ಗಱೆಯೆ ಬಾಸಿಗದಿಂ ಮೆಱೆವತ್ತು ಸಪ್ತಿಗಳ್ ||೯೬

ನಿಬ್ಬರದೆ ಬರ್ಪ ಹಯಬಲ |
ದಬ್ಬರಣೆಗೆ ಕೊರ್ಬುಗಳಿದುದಿರ್ಕೇರಿಗೆ ಬ ||
ಲ್ಬೊಬ್ಬೆಗೆ ಸೀರೆಯುಮುಂ ತವೆ |
ತಬ್ಬಿಬ್ಬಂ ತಾಳ್ದಿ ತೊಱ್ದಿತಾಳ್ದನ ಸಿರಿಯಂ ||೯೭

ವ || ಒಡನೆ ನಡೆದು ||೯೮

ಝೋಂಪಿಸಿ ಮುಂಬರಿದಾರ್ದು ಝು |
ಳಂಪಿಸಿದೊಳ್ವಾಳ್ಗಳೊಡನೆ ಕಂಪಿಸೆ*ಯೆರ್ದೆಯಂ ||
ಕೆಂಪೆಯ ಗೌಡನೆನಿಪ್ಪ ಮಿ |
ತಂಪಚನಂ ಪೊೞಲನೀಱ್ದು ಪೊಱಗಣ್ಗೆಗೆದಂ ||೯೯

ವ || ಆಬೆಂಗಳೂರಂ ಕೊಂಡು ಪಟ್ಟಣಮಂ ಪತ್ತೆಸಾರುತ್ತಿರೆ ||೧೦೦

ಇವರಂತಲ್ಲು ಮಹೀಶೂ |
ರವರದಟದು ಬೇಱೆ ಮೀಱೆ ಪೋಪುದು ಮೋಸಂ ||
ತವುವುದು ಲೇಸೆಂದುಱೆ ಸಾ |
ರುವ ಹನುಮನ ಮಾತನೆಣಿಸದೆಯ್ತಂದನವಂ ||೧೦೧

ಮುಳಿದಂದಾರಣಧೂಳಿಧೂಳೆಳಗೆಱಿಂ ಪೂೞ್ವಂ ಪೊೞಲ್ಗೋಂಟೆಯಂ ।
ತುೞಿದಿೞ್ಕಿಡುವೆನುರ್ಕಿನಾರುವಗಳಂ ಭಂಡಾರಮಂ ಬೊಕ್ಕಸಂ ||
ಗಳನೀೞ್ವಂ ತುೞಿಲಾಳ್ಗಳಂ ಹನುಮ ನೀಂ ನೋಡುತ್ತಿರೆಂದಾರ್ದು ಕ ।
ಟ್ಟಳವಿಂ ನಿಟ್ಟುರವೊಂದಿ ಪಟ್ಟಣಕೆ ಕೈಯಿಟ್ಟಂ ಕರಂ ಬೆಟ್ಟದಂ ||೧೦೨

ಅಕಟಕಟಶ್ವಲೋಕಮಿದು ಬೇಱೆಯೊ ಮೇಣ್ ಬಿದಿ ವಿಶ್ವಗರ್ಭದೊಳ್ ।
ವಿಕಟಹಯಂಗಳಂ ಗಣಿಸಲೊಂದಿಸಿ ತಂದನೊ ತಾಂ ಹಯಾನನಂ ||
ಪ್ರಕಟಿಸಿ ನಿಂದನೋ ನಿಜಮನಃಪ್ರಿಯರೂಪದ ವಿಶ್ವರೂಪಮಂ ।
ಸಕಲಮುಮಾದುದಶ್ವಮಯಮೀಧರೆಯುಂ ದೆಸೆಯುಂ ಪ್ರಪಂಚಮುಂ ||

ಜರಿಯದೆ ಮಾಣದೀಧರೆ ಖುರಾಹತಿಯಿಂ ಪಟುಹೇಷಿತಂಗಳಂ ।
ಬಿರಿಯದೆ ಮಾಣವೆಣ್ದೆಸೆಗಳೀಭಟರುದ್ಭಟಸಿಂಹನಾದದಿಂ ||
ಸುರಿಯದೆ ಮಾಣವಾಗಸದೆ ತಾರಗೆಗಳ್ ಕಹಳಾರವಂಗಳಂ ।
ಬಿರಿಯದೆ ಮಾಣದೆಲ್ಲಗಳದಬ್ಧಿಯೆನಲ್ ಪಡೆಯೆೞಂ ಕಡಂಗಿತೋ ||೧೦೪

ನಡೆದುದು ನಾಡುಬೀಡುಗುಡಿಗೋಪುರಗಳ್ ಪುಡಿಯೇಱೆ ಭೋರೆನಲ್ ।
ಕಡಿವುದು ಪೊಕ್ಕು ಮಿಕ್ಕು ಕಿಱುಗೋಂಟೆಯ ಕಕ್ಕಸದುಕ್ಕಡಂಗಳಂ ||
ಪಡೆದುದು ಪೊಣ್ದು ಪೊಳ್ದರೆ ಮರುದ್ವೃಧಿಯೊಳ್ ಪಥಮಂ ಪೊಡರ್ಪಿನಿಂ ।
ಪಿಡಿದುವು ನಿಲ್ಲದಲ್ಲಿಯುಪಶಲ್ಯದ ಬಲ್ವೊಲದೆಲ್ಲೆಯೆಲ್ಲಮಂ ||೧೦೫

ಮುಸುಗಿತು ತುಂಬಿ ತುಳ್ಕಿಪೊಳೆ ಕಾರ್ಗಲವ್ವಳಿಪಂತೆ ಪಂತದಿಂ ।
ದೆಸಗಿತು ಸುತ್ತಮುತ್ತಿಗೆಯನೊತ್ತರದಿಂ ಮುಗಿಲೊಡ್ಡವಂದದಿಂ ||
ಮುಸುಱಿತು ಕೋಂಟೆಯಂ ಮುಸಗಿ ಜೇಂಬುೞುಗಳ್ ಪೊಸವುಟ್ಟಿಯಂತೆ
ಮೇಣ್ । ಕೊಸರಿತು ಕೊತ್ತಳಂ ಪುಲಿವೊಗಂ ಮುಗಿಲಟ್ಟಳೆಯಗ್ಗಳಂಗಳಂ||

ರಭಸದೆ ಕೋಂಟೆಯಿಂದಿಡುವ ಗುಂಡಿನ ತಂಡದ ಚಂಡಘಾತದಿಂ ।
ದೆ ಭಯಮನಾನದವ್ವಳಿಸಿ ಮೀಸೆಗಳಂ ಪುರಿಗೆಯ್ದು ಕಣ್ಗಳಂ ||

ದೆ ಭುಗಿಲಿಡುತ್ತೆ ಸೂಸೆ ಕಿಡಿಗಳ್ ಕಡುಪಿಂ ಮುಳಿದಾರ್ದು ಭೋಯೆನು |
ತ್ತಭಿಮುಖರಾಗಿ ನಿಂದರತಿಮುಷ್ಕರದಿಂದೆ ತುರುಷ್ಕರಲ್ಲದಾರ್ ||೧೦೭

ತಳ್ವರ್ ಕಳ್ವಳ್ಳನಾೞ್ವಾೞ್ತಿಯುನನಮುನನಡ್ವಾಹನಮುಂ ತೊಳ್ತರಂ ಮುಂ |
ಕೊಳ್ವಾಳೊಳ್ಗಂ ಮರುಳ್ಗೊಂಡವೊಲಿಳಿವೆಳಮುಕ್ಕಳ್ಗಳಂ ಮುಂಡೆಯೊಳ್ ತ ||
ಳ್ತೊಳ್ವಟ್ಟಂ ತ್ರೊಟ್ಟು ಜೋಡಿಟ್ಟೊಡವೆ ಪಿಡಿದ ಬಾಳೆಲ್ಲಮಂ ಮಲ್ಲ
ಕರ್ ಬಿ | ಟ್ಟಾದ್ಯುತ್ವತರ್ಗಂ ತಾವೆ ಪಂತಂದಳೆದಱವಗೞಂ ಪೊಱ್ವರೇಂ ಪೇೞ್ವೆ
ನಿನ್ನುಂ ||೧೦೮

ನೆಟ್ಟನೆ ನಡೆಯುತ್ತೆ ಪಡ |
ಲ್ವಟ್ಟರ ಪೇರಟ್ಟೆಗಳನೆ ಮೆಟ್ಟುಗೆಗೆಯ್ದು ||
ತಿಟ್ಟನೊಳಟ್ಟೇಣಿಗಳಂ |
ಕಟ್ಟುಱದಿಂ ದಿಟ್ಟರಡರ್ದ*ರಟ್ಟಳೆವರೆಗಂ ||೧೦೯

ಪೆಱುವ ಮಿತಪುಣ್ಯರನಡ |
*ರ್ದೇಱದವೋಲ್ ಕೆಡಪುವಮರದೂತರ ತೆಱದಿಂ ||
ತಾಱುಂತಟ್ಟುಂ ಕೆಡಪಿದ |
ರೇಱಾಳ್ಗಳನೇಱುವಾಳ್ಗಳೞುತರಮುತ್ತೇ ||೧೧೦

ಸುರಿದುರಿಮುಸಗುವ ಬಸೆಯುಂ |
ಪುರಿಮುೞಲಂ ಪೊಯ್ದು ಕಾೞಚಿ ಕಾಯ್ದುಂಬಲಿಗ ||
ಪ್ಪರೆಗಳ ಕರಗಿದರಗುಸ |
ಜ್ಜರಸಂಗಳನೆಱೆವು ಸಿಡಿದು ಸೀದುರುಳಿಸಿದರ್ ||೧೧೧

ನೂಂಕಿದರಿರ್ಕೆವೆಗೋಲಿಂ |
ದೌಂಕಿದರಿರಿದಿರಿದು ಕೊಂತದಿಂ ತಲೆಗೊಯ್ದರ್ ||
ಮಂಕಿಗಳಂ ಭೋಂಕನೆ ನಿಡು |
ಗೂಂಕುವ ಡೆಂಕಣಿಯ ಕಲ್ಗಳಂ ಕೆಡೆಗಿಸಿದರ್ ||೧೧೨

ಕೆತ್ತಿದರೆರ್ದೆರ್ಬೆ ಮಗ್ಗುಲ |
ನೆತ್ತಿದರೊಳದೊವಲನೊಡನೆ ಬಸಿಱಿಂ ಬಗಿವರ್ ||
ಕತ್ತರಿಸಿದರೆಲುದಲೆಗಳ |
ನಿತ್ತರವರ್ ತೋರ್ಕೆಗೊಳಿಸಿ ಮಿೞ್ತುಗೆ ತುತ್ತಂ ||೧೧೩

ತಲೆಯೊಡೆದೊಕ್ಕ ನೆತ್ತರೊಡವಾಯ್ದು ಮಿದುಳ್ ಕಡಿವೆತ್ತು ನೆತ್ತಿ ಕಣ್ |
ತೊಲಗಿ ತರಿಲ್ದು ಪಲ್ಸರಿದು ಬಾಯ್ದುಟಿ ಸೀೞ್ದು ಜಗುೞ್ದು ಪುರ್ಬು ಬೆ ||
ನ್ನೆಲುವುಡಿದುೞುಗಂಡು ಕೊರಲಿರ್ಬಗಿಗೊಂಡೆರ್ದೆ ನೆರ್ಗಿ ಮಗ್ಗುಲಿ |
ಕೆರ್ಲೆವಡೆದಂಡು ಪಿಂದೆಗೆದರಾಯುವನರ್ ಸವಿಯಲ್ತೆ ಬಾಳ್ತೆಗಳ್ || ೧೧೪

ವ|| ಇಂತೀಲಗ್ಗೆಯೊಳ್ ಪಯಿಂಛಾಸಿರ್ವರ್ ಪೞಿಪಟ್ಟೞಿವುೞಿದರುಂ ಕಟ್ಟೇಱುವಡೆದು ಕಟ್ಟೊಡೆದು ಪೆಡಂಮೆಟ್ಟುವಿನವಮಾರಣಧೂಳಿ ಪಾಳಿಗೆಟ್ಟು ಪಾಡೞಿದು ಪೊೞ್ಚಪೊಸತಂಕುಸಂಗೊಂಡ ಗಂಡಾನೆಯಂತೆ ಕಡುಗಿ ಸಿಡಿಮಿಡಿಗೊಂಡು ತಲೆಗೊಡಪಿ ಕೈಗಡಿದು ಬೞಿಕ್ಕೇೞುಂ ಸೂೞೊಳ್ ಪಡಿಬರಿಸಿ ಲಗ್ಗೆಯೋ[illegible]ಸಿ ಸೂೞ್ಸೂೞೊಳಮೋೞ್ಸಿರಮೊಣ್ಬಸಿರ ಲಕ್ಕಮುಕಾಳ್ಗಳೞಿವು ಮಿಕ್ಕರುಮುಳವಿ[illegible]ದು ದಿಕ್ಕುದಿಕ್ಕಿಂಗೆ ಪರಿದು ಬಲಮನಿತುಂ ಬಱಿದಾದುದಂ ಕಂಡು ಬೆರ್ಚಿ ಬಿಗುರ್ತು || ೧೧೫

ಮದವಿೞಿವತ್ತು ಮೈಮೆಯೞಿವತ್ತಿಳೆಯೊಳ್ ಬಳೆದತ್ತು ದುರ್ಯಶಂ |
ಪದೆದು ಪತಾಣಿ ಹಬ್ಬಿಸಿಗ ರೋಹಿಲ ಸೈದಬಲಂ ಮಲಂಗಿದ |
ತ್ತೊದವಿ ಪಲಾಯನಂಬಡೆವುದರ್ಕಮುದರ್ಕದ ದಿಕ್ಕುಗಾಣೆನಾಂ |
ಬಿದಿ ಗಡ ! ಬಲ್ಲಿದಂ ಜಗದೊಳೆಲ್ಲರಿನಲ್ತೆ ಖುದಾಮುಹಂಮುದಾ ! ||೧೧೬

ವ|| ಇಂತವಂ ಚಿಂತಿಸಿ ಕಣ್ಗೆಟ್ಟು ಸವಗಮಂ ಸೀೞ್ದು ಸೀಸಕಮಂ ಕಳೆದು ಕಾವಿಗಪ್ಪಡಂದಳೆವೆನೆಂದು ಪೂಣ್ವುದುಂ ||೧೧೭

ಬಲ್ಲಿದಮುಲ್ಲುಕರೆಲ್ಲರ್ |
ತಲ್ಲೞಿದಿಂ ಹನುಮನೆಡೆಗೆ ಹರಿತಂದಿಂ ನೀ ||

ನಲ್ಲದೆ ಗತಿಯಿಲ್ಲೆಮಗಿ ।
ನ್ನೆಲ್ಲಿಯುಮೆಂದೊರೆದು ಮಣಿದು ಮನಗರಗಿಸಿದರ್ ॥೧೧೮

ಧೀರಂ ವಜೀರನಿಂದು ಘ ।
ಕೀರಂ ತಾನಪ್ಪನಿವನ ತಪ್ಪಂ ಮನದೊಳ್ ॥
ತಾರದೆ ಪೆಱಸಾರದೆ ಮ‌ನ ।
ವಾಱಿ ದಯಾಸಾರದಿಂದೆ ಸಲಪಲ್ವೇಟ್ಕುಂ ॥೧೧೯

ಎಂದ ನುಡಿಗೇಳ್ದು ನಿರವಿಸಿ ।
ಯ‌ಂದು ಮನೆಂದಂದು ಬಂದು ಪಟ್ಟಣದೆಡೆಯೊಳ್ ॥
ವಂದಿಸಿ ಪೇ‌ಳ್ದಂ ಬಿನ್ನಣ ।
ದಿಂದಂ ಕಂಠೀರವಂಗೆ ಕೆಂಗೆಯ ಹನುಮಂ ॥೧೨೦

ಕಂಠೀರವ ನೀಂ ರಿಪುಗಜ ।
ಕಂಠಗಳದ್ರಕ್ತದಿಂದೆ ರಣಭೂತಮನಾ ॥
ಕಂಠಪರಿಪೂರ್ತಿವಡಿಸಿದೆ ।
ಯೇಂ ಠೌಳಗಳೊಳವೆಯೆ‌ನ್ನೊಳನ್ನುಂ ಮುನ್ನುಂ ॥೧೨೧

ಕನ್ನಡನಾಡಿನ ಬಿರುದೀ ।
ನಿನ್ನಡಿಯೊಳ್ ಕಟ್ಟತೆನ್ನವಂದಿಗರಂ ನೀಂ ॥
ನಿನ್ನಡಿಯೂ‌ಗಗೆಯ್ಮೆಗ ।
ಳನ್ನಿರವಿಸಿ ರಾಯನೆನಿಸಿ ರಾಜಿಸವೇಟ್ಕುಂ ॥೧೨೨

ರಣಧೂಳಿಕಾನನುದ್ಭಟ ।
ರಣಧೂಳಿಗೆ ಮಾಸಿತಖಿಲರಾಯರ ಜಸವಾ ॥
ರಣಧೂರ್ವಹನೀನಿನ್ನ ಚ ।
ರಣಧೂಳಿಯನಾಂತು ಸಿರದೊಳವನತನಾದಂ ॥೧೨೩

ಈಯೆಡೆಗೆ ಬಂದವಂ ಬೞಿ ।
ಯಾಯುಸದಿಂ ಬೆಂದನಿಂತು ಗಡಿಗಡಿಯುವರುಂ ॥
ವಾಯುಂಗಿಡಿಸದ ತೆಱದೊಳ್ ।
ರಾಯಸವುಂ ಬೇಟ್ಟನಿತ್ತು ಕಳುಪುವುದುಚಿತಂ ॥೧೦೪

ವ॥ ಇಂತು ರಾಯನನೊಡಂಬಡಿಸಿ ರಾಯಸದೊಡನೆ ಪಡಿಪಾವುಡವುಂ ಕೊಂಡು ಬೀೞ್ಕೊಂಡು ಕಾನನಂ ಕಂಡು ತಿಳುಪಿದಂ ॥೧೦೫

ಕೆಟ್ಟುದು ಕಜ್ಜಂ ಮುನ್ನವೆ ।
ಕೆಟ್ಟೊಡವೇಂ ರಾಯನೊಲ್ದು ರಾಯಸವಿತ್ತಂ ॥
ನೆಟ್ಟನೆ ನೀವೆೞ್ದೀಗಳ್ ।
ನಿಟ್ಟೋಟಂಬಟ್ಟು ನಿಮ್ಮ ನಾಡಂ ಕೂಡಿಂ ॥೧೦೬

ವ॥ ಎಂದಾಕಾನನೊಡಗೊಂಡು ಹನುಮನಾಯಕಂ ಪೋಪುದುಮಿತ್ತಲ್ ರಿಪುಮತ್ತಗಜಕಂಠೀರವನೆನಿಪ್ಪ ಕಂಠೀರವನರಸರಾಜಂ ತೇಜಂಬಡೆದು ದೆಸೆಗೆಲ್ಲವೆಳಸಿ ಮೂಡಣ್ಗೆ ನಡೆದು ॥೧೦೭

ಉಡುಗಿಸಿ ಕಾನಕಾನನಳವಂ ದಟವಂ ಬಳವದ್ಘಟಾಳಿಯಿಂ ।
ದೊಡನೆ ಪೊಡರ್ಪಿನೊತ್ತಿ ನೆಲವಂ ಗೆಲವಂ ಚಲವಂ ನೆಗಟ್ತಗೆ ॥
ಯ್ದೊಡರ್ದವನಾಳ್ವ ರತ್ನಗಿರಿಯುಂ ಸಿರಿಯುಂ ಬರಿಯುಂ ಗಳೆಂದು ನಾ ।
ಟ್ನುಡಿಯೆ ತೊಡಂಕಿ ಪಿಂಸಗರವುಂ ಕರವುಂ ಕರವುಂದು ತಾಳ್ದಿದಂ ॥೧೦೮

ಪಂಟಿಸಿ ಬಲ್ಪಿಂ ಕೆಂಗೆರೆ ।
ಗೋಂಟೆಯನಾವೀರಭದ್ರದುರ್ಗದ ನೆರವಿಂ ॥
ಗೆಂಟಿಪ ಡೆಂಕಣಿಕೋಂಟೆಯು ।
ನಂಟಿಸಿಯಾರಾಯಗೋಂಟೆಯುಂ ಲುಂಠಿಸಿದಂ ॥೧೦೯

ವ॥ ಬೞಿಕ್ಕೆ ತೆಂಕಣ್ಗೆ ನಡೆದು ॥೧೧೦

ಪ್ರಥಮದೊಳೇ ತೋಳೆಯಮಂ ।
ಪ್ರಥನದೊಳಾಕ್ರಮಿಸಿಯುೞಿಸಿದಂ ಗೊಳೆಯಮಂ ॥
ಮಧುರೆಯವರ ಪಾಳೆಯಮಂ ।
ಮಥಿಸಿದನಂದಾರ್ದು ನೆರೆದಣಿವುದಾಳೆಯಮಂ ॥೧೩೧

ವ॥ ಆಘಟ್ಟದೊಳ್ ಘಟ್ಟಮದನಾರಿ ನೆರೆ ದೊರೆಗಳಂ ತುೞಿವ ಗರ್ಬದಿನುರ್ಬಿ ಕೊಂಗರೊಳ್ ವಣಂಗಾಮುಡಿಯೆಂಬ ಬಿರುದಂ ಪಡೆದ ಕಡುಪಿಂದಿದಿರ್ಚ ಯವನುರ್ಕಂ ತೀರ್ಚುವಿನಂ ॥೧೩೨

(ಇಂದ್ರವಜ್ರಾವೃತ್ತಂ)

ಮುಂಬಾಗದೆತ್ತಂ ಮುಡಿಯುಂ ಬೞಲ್ದಂ ।
ಪಿಂಬಾಗಿ ಬನ್ನಂಬಡೆದೋಡುವನ್ನಂ ॥
ಬಾಂಬಳ್ಳದೊಳ್ಳಂ ಭರದಿಂದಮೀೞ್ದಂ ।
ಸಾಂಬಳ್ಳಿಯಂ ಝಳ್ಳಿಸಿ ಕೊಳ್ಳಿಯಿಂದಂ ॥೧೩೩

(ಅನುಷ್ಟುಪ್ಪು)

ನಿತ್ಯ ಸಂಗರನಿಷ್ಣಾತ ।
ಭೃತ್ಯಪುಂಗವಸಂಘದಿಂ ॥
ಸತ್ಯಮಂಗಲಸಂಪನ್ನಂ ।
ಸತ್ಯಮಂಗಲಮೊಂದಿದಂ ॥೧೩೪

ವ॥ ಬೞಿಕ್ಕೆ ಪಡುವಣ್ಗೆ ನಡೆದು ಕೊಡಗುನಾಡನಂಡಲೆದು ನಂಜುಂಡರಾಯನ ರಾಜಧಾನಿಯಂ ವೇಢೈಸುವಿನಮವನುಂ ॥೧೩೫

(ದ್ರುತವಿಲಂಬಿತಂ)

ಪರಿದು ರಾವುತಪಾಡೊಳದಿರ್ಚಿಯಾ ।
ಪರಿ ದುರಾಸದನಂ ಸದೆದೀೞ್ವಸಂ ॥

ಪಿರಿಯಪಟ್ಟಣವೆ.ೞಂ ಪೆಸರಿಂದಮೇ |
ಪಿರಿಯಪಟ್ಟಣವೊಳ್ಪ್ಪರುಳ್ಳಂದೆಯುಂ ||೧೩೬

ವ|| ವ.ತ್ತಮುವನುತ್ತರಕ್ಕೆ ನಡೆನು ||೧೩೭

ಗಮ್ಮನೆ ಕಡಬಮುನೀೞ್ದಂ |
ಹಮ್ಮಿನೊಳಗೆನೆಲ್ಲರಾಯರಿಂ ನೆಱೆ ನೀಳ್ದಂ ||
ಪಿಮ್ಮಾಯೆಯ ತುಱುಗೆಱೆಯಂ |
ತಾಮ್ಮಾಯದೆ ಬೇಂಟೆಗೆಯ್ವಿನಂ ತುರುಗೆರೆಯಂ ||೧೩೮

ವ|| ಇಂತು ನಾಲ್ದೆಸೆಯಂ ಗೆಲ್ದು ಸೊಗಮಿರ್ದು ನಿಚ್ಚಸೊಗವಂ ಪೊರ್ದುವ ಬರ್ದಿನೊಳ್ ||೧೩೯

ಆರಯೆ ಸಕಲಚರಾಚರ |
ಕಾರಣದಿಂದಲ್ಲದಿಲ್ಲವೀಸಂಸಾರೋ ||
ತ್ತಾರಣಮೆಂದಾರಾಯಂ |
ನಾರಾಯಣಚರಣಪರಿಚರಣಪರನಾದಂ ||೧೪೦

ದೇಗುಲಮಂ ಗೋಪುರಮಂ |
ಪಾಗಲ್ಗಳನಡಿಗೆಸೆಜ್ಜೆವಜ್ಜಣಮನೆ ಮುಂ ||
ತಾಗಿ ಪಲವುಕ್ಕೆವಂಗಳ್ |
ತೂಗುವ ಕೊಳಜಗಲಿಯೂರಮೆಯನೊಡರಿಸಿದಂ ||೧೪೧

ಪಲವಣಿವಚ್ಚಂಗಳುಮಂ |
ಪಲವುಂ ಪೊಂಬೆಳ್ಳಿರನ್ನದುಪಕರಣಮುಮಂ ||
ಪಲವುಂ ಕೆಱೆ ಪರಿಕಾಲಂ |
ಪಲವೂರ್ಬೆಳಗೆಯ್ವಾಲಂಗಳಂ ಪದೆದಿತ್ತಂ ||೧೪೨

ವ|| ಮತ್ತಮೇೞಂ ಅವಂ ತನ್ನಾತ್ಮೀಯಂಗಳನನಿತುಮಂ ತದಧೀನಂಗೆಯ್ದು ||೧೪೩

ವರಮತಿಯಿಂ ನರತತಿಯುಂ ।
ಪೊರೆದತಿಮಂತ್ರಣದಿನಖಿಲಲೋಕಶರಣ್ಯಂ ॥
ನರಸನೃಪಂ ಸುರಸಕೃಪಂ ।
ಸರಸಮುಪಾರೂಢಿಗೆಯ್ದು ಪೊರೆದಂ ದಿವಮಂ ॥ ೧೪೪

ವರಮತಿ ಚಿಕದೇವಕೃಪಾ ।
ಪರಿಪಾಲಿತನಪ್ಪ ತಿರುಮಲಾರ್ಯನ ಕೃತಿಯೊಳ್ ॥
ಪೊರದೆರಡನೆಯಾಶ್ವಾಸಂ ।
ಪರೆದುದು ಚಿಕದೇವರಾಜವಿಜಯದೊಳೀಗಳ್ ॥೧೪೫

ಪೊರೆಗೆಂದುಂ ಚಿಕದೇವರಾಯನಿಳೆಯಂ ಪುಣ್ಯಂ ಪೊದಳ್ದಿಪ್ಪುಗೆ ।
ಸಿರಿ ನಾಡೊಳ್ ನೆಲಸಿರ್ಕೆ ತಕ್ಕರೆಱಕಂದಾಳ್ದಿರ್ಕೆ ತಂತಮ್ಮೊಳ ॥
ಕ್ಕರಿಗರ್ನೇಹದೊಳೊಂದುಗೊಕ್ಕಲಿಗರೊಳ್ಪಿಂಪಕ್ಕೆ ಮೇಣ್ತಿಂಗಳೊಳ್ ।
ತರದಿಂ ಮೂಱುವೆಳೆಯಕ್ಕೆ ಮಿಕ್ಕುಪರಿಗಾಕಾವೇರಿಯುಂ ಕಾಲದೊಳ್ ॥೧೪೬

ಇದು ಯದುಶಿಖರಿಶಿಖರಾಭರಣಶ್ರೀಮನ್ನಾರಾಯಣಚರಣಪರಾಯಣ ಶರಣಾಗತ ರಕ್ಷಣವಿಚಕ್ಷಣ ಸಕಲಕಲಾಪ್ರವೀಣ ಬಿರುದಂತೆಂಬರಗಂಡ ಲೋಕೈಕವೀರ ಭೂರಿ ತುರುಷ್ಕಶುಷ್ಕವನದಾವಾನಲ ಮರಾಟರಘಾಟಮೇಘಘಟಾವಿಘಟನನಿರ್ಘಾಟಪ್ರಳಯಕಾಲಜಂಝಾನಿಲ ಪಾಂಡ್ಯಮಂಡಲಾಧಿಪವೇದಂಡವಿಲುಂಠನಕಂಠೀರವ ಮಾಳಿಪನೃಪಮದಮರ್ದನ ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪನಪ್ರತಿಮ
ವೀರನರಪತಿ ಶ್ರೀಚಿಕದೇವಮಹಾರಾಜ ಕೃಪಾಪರಿಪಾಲಿತ
ಶ್ರೀತಿರುಮಲೆಯಾರ್ಯ ವಿರಚಿತಮಪ್ಪ
**ಚಿಕದೇವರಾಜವಿಜಯ ಮಹಾಪ್ರಬಂಧದೊಳ್**
ಬೆಟ್ಟದಚಾಮರಾಜ ಚಾಮರಾಜ ರಾಜರಾಜ ಚಾಮರಾಜ ಇಮ್ಮಡಿ
ನರಸರಾಜಭೂಪಾಲಪ್ರಭಾವವರ್ಣನಂ
ದ್ವಿತೀಯಾಶ್ವಾಸಂ ಸಂಪೂರ್ಣಂ.

*

## ತೃತೀಯಾಶ್ವಾಸಂ.

---

ಶ್ರೀಯುಸ್ಮಿ ಶೈಲವುಂ ಪೊ ।
ತ್ತಾಯುಸವುಂ ಮಱೆದು ನೀಡಿ ಕೊರಲಂ ಮಲೆತೊಂ ॥
ಗೋಯುರದಿಂದಂ ನಿಟ್ಟಿಪ ।
ಮಾಯೆಯು ಪೇರಾಮೆ ಕುಡ-ಗೆ ನರಪತಿಗೊಳ್ವಂ ॥೧

ಸಮತಳಮಾದುದೊಂದದಱ ಮುಂಬರಿದುಂಗುಟಪ್ರಾಱು ನಿಂದುದೊಂ ।
ದಮರ್ದಿರೆ ಪಾದವೊಂದಿನಿಸು ಕೊಂಕಿನೊಳೊಳ್ನಡು ಬಿಂಕಮಾನೆ ಸಂ ॥
ಭ್ರಮದೆ ಕಡಂಗಿ ಸಿಂಗರದೆ ಪೊಂಗೊಳಲಂ ಪಿಡಿದೊಪ್ಪೆತೋಳ್ಗಳೊ ।
ಲ್ದಮರ್ದುಗುವ್ರೊಳ್ಸ್ಮಗಂ ತೊಳಗೆ ಸಲ್ಗೆ ನಿರಂತರಮೆನ್ನ ಚಿಂತೆಗಳ್ ॥೨

ಶ್ರೀಪತಿಭಕ್ತಿ ಮಹೀಪತಿ ।
ರೂಪಂದಳೆದಿಳೆಗೆ ಮಂದುದೆಂದೇ ಲೋಕಂ ॥
ರೂಪಿಸೆಯಾದಂ ಮದನಸ ।
ರೂಪಂ ಶ್ರೀದೇವರಾಜನೃಪನಧಿರಾಜಂ ॥೩

ಆದಶರಥನೃಪನಂದದೊ ।
ಳಾದರದಿಂ ಪ್ರಜೆಯು ಪೊರೆದು ಮುದುಪತಗೆಂಬೆ ॥
ತ್ತಾದೇವರಾಜನರಪತಿ ।
ಗಾದರ್ ನಾಲ್ವರರಾದಿಪೂರುಷರನ್ನರ್ ॥೪

ನಾಲ್ಕುಂ ನಿಗ್ಗಮಮುಂ ವಿಜೃಂಭಿಸುವಿನಂ ಜಂಭಾಸುಹೃತ್ಕುಂಭಿವೋಲ್ ।
ನಾಲ್ಕುಂ ತಕ್ಕ ಮೊಗಂ ಪಳಂಚುವಿನಮಂಭೋಜಾತಸಂಭೂತಿವೋಲ್ ॥
ನಾಲ್ಕುಂ ತೋಳ್ಗಳುಮೊಳ್ಗನೊಳ್ ನೆಗೞ್ವಿನಂ ಪೀತಾಂಬರಂಬೊಲ್ ಕರಂ ।
ನಾಲ್ಕುಂ ನಲ್ವರರ್ಕಳಿಂ ತೊಳಗಿದಂ ರಾಜೇಂದ್ರನುಂ ತಂದೆವೋಲ್ ॥೫

ನಾಲ್ವರುಮಗಲ್ದು ಪಿಂಪದಿ ।
ನಾಲ್ವರಿಸಂ ಬೇಱೆ ವೇಱೆ ಬನ್ನಂಬಡೆದಾ ॥
ಬಲ್ವಾೞ್ವಂ ಕಳೆಯಲ್ಕೀ ।
ನಾಲ್ವರುಮೊಂದೆನಿಸಿ ನಾಡೆ ನಾಡಂ ಪೊರೆದರ್ ॥ ೬

ಸಮನಿಸಿದುಪಾಯದೊಳ್ ಸಾ ।
ಮವಾಗಮಸ್ತೋಮದಲ್ಲಿ ಯುಕ್ತ ಸಮಸ್ತ ॥
ಶ್ರಮದೊಳ್ ಗ್ರಹವೊಂತಂತೀ ।
ಕುಮಾರರೊಳ್ ದೊಡ್ಡದೇವರಾಜಂ ನೆಗೞ್ದಂ* ॥೭

ಪದಪಿಂ ಮೆಯ್ವೆತ್ತ ಚಂದ್ರಾನ್ವಯದ ಮಹಿಮೆಯೋ ಗಂಡುರೂಪಾಂತ ಭೂಲೋ । ಕದ ಪೆಂಪೋ ಬೇಱೆ ವೇಷಂದಳೆದ ಯದುಕುಲೋತ್ಸಾಹವೋ ತಳ್ತ ಕರ್ಣಾ । ಟದ ಸೊಂಪೋ ಬಿಣ್ಪುವೆತ್ತೊಪ್ಪುವ ಸಕಲಜನಾನಂದವೋ ಎಂಬಿನಂ ಸಂ । ಮದದಿಂ ಶ್ರೀದೊಡ್ಡದೇವಂ ತಳೆದೆಸೆವನಿಳಾಚಕ್ರಮಂ ವಿಕ್ರಮಾಂಕಂ ॥೮

ವ॥ ಇಂತಿರ್ಪಿವನ ॥೯

ಮೊಗಮುಂ ಮೆಯ್ಯುಂ ಪೊಗರುಂ ।
ಮಿಗೆ ಸೊಗಸಂ ಪಡೆಯೆ ಕಂಡು ಕಳವಳದಿಂದ ॥
ನ್ಮೃಗವಿಂದುಕಾಮಸೂರ್ಯರ್ ।
ಜಗು*ೞ್ದರ್ ಕಱೆರೂಪುಗೇಡುನಿಡುಬವಣೆಗಳಂ ॥೧೦

ವ॥ ಮತ್ತಮಿವಂ ಧರ್ಮದೊಳ್ ಧರ್ಮಸುತನಂ ನೇಮದೊಳ್ ರಾಮಚಂದ್ರನಂ ದೊರೆಗೊಂಡು ತನ್ನಂ ಬೞಿಸಂದಾಳ್ಗೆಯ್ವ ಅನುಜರ್ವೆರಸು ಸಂತಸದೊಳ್ ತನ್ನ ಬೀರವಂ ಬಲ್ಪಗೆಗಳಱ್ಕೆಗಾಳೆಗದೊಳ್ ಬಿನ್ನಣಮಂ ಪೊರ್ದಿದರಂ ಪೊರೆವುದಱೊಳ್ ಔದಾರ್ಯಮನೋದಾಳಿ ಪಾರ್ವರೊಳ್ ಎಱಕಮಂ

ನಂಬಿದರೊಳ್ ದಯೆಯುನಾರ್ತರೊಳ್ ಐಸಿರಿಯುನಾಳ್ಗಳೊಗ್ಗಿನೊಳ್ ಸೊಬಗಂ ಕೈವಿಡಿದ ರಾಣಿಯರೊಳ್ ಕಡುಪಂ ಕಳ್ಳರೊಳ್ ಪುರುಡಂ ಪುಸಿವರೊಳ್ ಆಸೆಯುಂ ಜಸದೊಳ್ ಭಕ್ತಿಯುಂ ಪುರುಷೋತ್ತಮನೊಳ್ ಪುದುಂಗಿಸಿ ಪದುಳದೊಳಿರ್ಪಂ ||೧೧

ಕಿವಿಯಾಲಿ ಮೂಗು ನಾಲಗೆ |
ತೊವಲಿಂದುಲಿ ರೂಪು ಕಂಪು ಸವಿ ಸೋಂಕುಗಳಂ ||
ಸವಿದೊಡಮೇಂ ಯೋಗಿಯವೊಲ್ |
ಪವಣಾ ಕಡೆಗಣಿಸದಿರ್ಕುಮೀದೊಡದೇವಂ ||೧೨

ಈವಗೆಯೊಳ್ ಕರಣಂಗಳ |
ಗಾವಳಿಯುಂ ಕಳೆದು ನಿಱಿಸಿ ನೆಗೞ್ದ ವಿವೇಕಂ ||
ಭಾವದೊಳಾಱುಂ ಪಗೆಗಳ್ |
ತೀವದವೊಲ್ ದೊಡ್ಡದೇವನೋವಿದನೆಳೆಯುಂ ||೧೩

ವ|| ಮತ್ತಮಾವಗಂ ಬಿಜ್ಜೆಗಲ್ವುದುಂ ಬಿನಯಂಗೋರ್ಪುದುಂ ಚಾಗವನಾಗಿಪುದುಂ ಜಯಮಂ ಸಂಪಾದಿಪುದುಂ ಮೊದಲಾದೊಳ್ಗಯ್ತದೊಳ್ ಪೊತ್ತುಗಳೆಯುತ್ತೆ ||೧೪

ಪುಸಿಗೆ ಪಿಸುಣ್ಗೆ ಪೋರಟೆಗೆ ಮಾಯೆಗೆ ಹಿಂಸೆಗೆ ಕೋಪಕಕ್ಕೆ ಬೇ |
ವಸಕೆ ಮರುಳ್ತನಕ್ಕೆ ಕಳವಿಂಗೆ ಕನಲ್ಕೆಗೆ ಠಕ್ಕುಠಾಳಿಗಂ ||
ಬಸಗಡಿದೀಟ್ವ ಕಾಚ್ಛಸನದಟ್ಟುಳಿಗಂ ಪುಗದಂತಿರೆಲ್ಲರಂ |
ಪೊಸಯಿಸಿ ಕಾರ್ತವೀರ್ಯನೆಸಕಂಬಡೆದಂ ದೊಡದೇವಭೂವರಂ ||೧೫

ಸಸಿಯುಂ ನೇಸಱುಮೊಂದುವೆ |
ರಸಿದಂತೊಳ್ಜಸದೆ ತೇಜದಿಂ ದೊಡದೇವಂ ||
ಪೊಸಯಿಸಿ ತಣ್ಪಂ ಬಿಸುಪಂ |
ಮಸಗಿಸುಗುಂ ಪತ್ತಿದವರ ಪಗೆವರ ಬಗೆಯೊಳ್ ||೧೬

ಬಿನಯದ ಬಿತ್ತು ಬಿನ್ನಣದ ಪೆರ್ವೊಳ್ ಬಿಜ್ಜೆಯ ಬೇರ್ ವಿವೇಕದೊ
ಳ್ಗೊನರನುಗೆಯ್ತುದೊತ್ತರದ ದಾಂಗುಡಿ ನಲ್ಮೆಯ ಮೊಲ್ದಳಿರ್ ಜನಾ ||
ನುನಯದ ಮೊಗ್ಗು ನನ್ನಿಯಲರ್ಪಿನ ಕಾಯನುವಾತುವಣ್ಣು ಬಿ |
ಣ್ಗೊನೆಯೆನೆ ದೊಡ್ಡದೇವನೆಸೆದಂ ಗುಣಸಾಂದ್ರನುಪೇಂದ್ರವೈಭವಂ ||೧೭

ಬೆಟ್ಟನ ನೀರಟ್ಟನವ್ರೋ |
ಲಟ್ಟುಳಿಗಳ್ ಬೆಟ್ಟಿತಾದೊಡಂ ಮುನ್ನೆಲೆಯೊಳ್ ||
ನೆಟ್ಟನೆ ನಡುಗದೆ ಕದಡದೆ |
ಕಟ್ಟೆದಟಂ ದೊಡ್ಡದೇವನೆಸೆದಂ ದಿಟ್ಟಂ ||೧೮

ಸಿಱುಗುರುಳೊಳ್ಳಸಲ್ಮಿಮಿರ್ದ ಪುರ್ಬಲರ್ಗಣ್ಣು ಸುನೀಳ್ದ ನಾಸಿಕಂ |
ಮಿಱುಪ ಕದಂಪು ನುಣ್ಬವರಿಮೀಸೆ ಮುಗುಳ್ನಗೆ ತೊಂಡೆವಣ್ಣು ಬಾ ||
ಯ್ದೆಱೆಯುಱೆ ಮೀರಿ ತುಂಬುವೆಱೆಯಂ ಕಱೆಯೊಂಪದ ಚಾದದಿಂ ಮೊಗಂ |
ಮಱುಕದೊಳಿರ್ದ ನುಂಗುವುದು ಪೆಣ್ಗಳ ಪೊಂಗುವ ಕಣ್ಮನಂಗಳಂ ||೧೯

ಸಂಕಂ ಕೊಂಕುವ ಮುದ್ದುಮೊಗೆಱೆಗೊರಲ್ತಳ್ತರ್ಪ ಕಂದಂ ಕರಂ |
ಬಿಂಕಂ ತೆಂಗುವ ಗೂಢಜತ್ರು ಸುದೃಢಾಯದ್ಬಾಹುಕಾಂಡಂ ಮನೋ ||
ಜಂ ಕೈಗೆಯ್ಮೆಯನೊಲ್ದು ಕಲ್ವ ಋರಳೀವಿಸ್ತಾರವಕ್ಷಂ ನಿರಾ |
ತಂಕಂ ನೆರ್ಗಿಪುದಾಸೆಯುಳ್ಳನಿದಿರ್ಗೊಳ್ವಾಳ್ವಂಡಿರಂ ಗಂಡರಂ ||೨೦

ವ|| ಮತ್ತಮಿವಂ ||೨೧

ನಡುವಂ ಬಿಗಿದುಡೆ ದಟ್ಟೆಯ |
ನೊಡನರಿವನಿತಾಜನಕ್ಕೆ ಜಗುಳ್ಗುಂ* ಮುಡಿಗಳ್ ||
ಪೊಡವಂಟ್ಟಿಡಿವಿಡಿಯೆ ಪರರ್ |
ಪಡೆಗುಂ ಸೋರ್ಮುಡಿಯ ಗಂಟುಬಿಗುಪನದೆಂತೋ ||೨೨

ವ|| ಇಂತಿರ್ಪಿವನ ಸೌಂದರ್ಯಶೌರ್ಯಂಗಳಂ ಮನದೆಗೊಂಡು ||೨೩

ಗೋವಿಂದಂಗಾರುಕ್ಮಿಣಿ ।
ಭೂವಂದಿತೆ ಸೀತೆ ರಾಮಚಂದ್ರಂಗೆಂತೀ ॥
ದೇವಿಯುಮೃತಾಂಬೆ ತಾಂ ದೊಡ ।
ದೇವೇಂದ್ರಂಗಾದಳಂತು ನೋಂತಳದೆಂತೋ ॥ ೨೪

ಪಸದಿಂ ನೇಸರ್ಗದಿರ್ಗಳ್ ।
ಸಸಿಜೊನ್ನಂಗಳ್ ಪೊದಳ್ದು ಮಲರ್ಗಂಪುಗಳೊಂ ॥
ದೆಸಕವನೆಸಗೊಂಡೆಡೆವಿಡ ।
ದೆಸೆದರ್ ದೊಡದೇವಭೂಭೃದಮೃತಾಂಬಿಕೆಗಳ್ ॥ ೨೫

ಸ್ಮೃತಿ ನಿಗಮದ ಪುರುಳಂ ಸ ।
ನ್ಮತಿ ಪರಿಶುದ್ಧಾತ್ಮನಂ ಸುವೃತ್ತಿ ವಿವೇಕಾ ॥
ನ್ವಿತನಂ ಬಟುಸಲ್ವಂತಟು ।
ಸತಿಯಿವಳೀಪತಿಯು ಪದದ ನೆಟಲೆನೆ ನೆಗಟ್ದಳ್ ॥ ೨೬

ಇಂತಿವರಿರ್ವರುಮಿರೆಯಿರೆ ।
ಸಂತಸಮಂ ತಳೆದು ಕಳೆದ ಕಾಲಂಗಳನೇ ।
ತಾಂ ತಿಳಿಯದೊರ್ವಗಲ್ ಕಡು ।
ಚಿಂತೆಯನಾಂತಮೃತಮಾಂಬೆಯುಸಿಕಂಬಡೆದಳ್ । ೨೭

ಕೆಳದಿಯರಂದು ಪಿಂದೆಗೆದು ಮೋನದೊಳೊಂದಿರೆ ಬಟ್ದು ಒರ್ದೆಯ ।
ರ್ಕಳನುವಿನಿಂದೊಡಂಬಡಿಸೆಯುಂ ಬಗೆಗೊಳ್ಳದೆ ಗಲ್ಲವಿಟ್ಟ ಕೈ ॥
ದಳದೊಳುದಿರ್ಕೆ ಕಣ್ಬನಿಗಳಂ ಬಿಸುಸುಯ್ದು ಬಟಲ್ದು ಬೇವಸಂ ।
ಗೊಳುತಿರೆ ಪತ್ತೆಸಾರ್ದನರಸಂ ಸರಸಂ ಮಿಗೆಯೆಂದಿನಂದದಿಂ ॥ ೨೮

ವ॥ ಆಗಳರಸಿಯುಂ ॥ ೨೯

ತಳ್ವದೆ ತಾಂ ಮುನ್ನಂತಿದಿ ।
ರೆಳ್ದೆನೆಗಂ ನೋಡಿ ಬೇಡಬೇಡೆಂದರಸಂ ।

ತೊೞ್ಪಡಿದೆಱೆದುಯ್ದು ಪೊದ ।
ಳ್ದೊಳ್ಪಿನೊಳಿರ್ದರ್ ಬಗೆಯನಾರ್ದುಸಿರ್ದರ್ಗಂ ॥೩೦

ಮಂಜು ಮುಸುಂಕೆ ಕೊಂಕುಗೊನರಿಂ ಮಸುಳ್ದಂಡ ಬಿಸಪ್ರಸೂ
ನವೋ । ಪಿಂಜದೆ ಪೂಣ್ದು ಪೊಣ್ಮಿ ಪೊಗೆ ಸುತ್ತಿದ ಪುತ್ತಳಿಯೋ ಪಗಲ್ಪಿಸಿ ॥
ಲ್ಪಂಜಿನ ಸೋಂಕಿನಿಂ ಸೊರಗಿ ತಣ್ಗದಿರ್ಗುಂದಿದ ಚಂದ್ರನೋ ಎನಲ್ ।
ಮಂಜುಳೆ ನಿನ್ನ ಪೊಂಜಳೆಯೊಡಲ್ ಕಡುಬಾಡಿದೆಯಂಜೆ ಮಾಂಜದಿರ್ ॥೩೧

ಅರಸಿಯಿದೇನಿದೇದುಗುಡಮೇತೆಱದಿಂ ತಳಸಂದು ಚಿಂತಿಸಲ್ ।
ಪುರೆ (?) ಗುಡದೆನ್ನೊಳೆನ್ನವರೊಳಂ ನೆವವೊಂದಿನಿತಿಲ್ಲವಿನ್ನದಾ ॥
ರರಮನೆಯಲ್ಲಿ ರಾಣಿಯರ ಮೆಲ್ಲೆರ್ದೆಗಲ್ಲದ ಪೊಲ್ಲಗೆಯ್ಮೆಯುಂ ।
ಚೆರಸುವರಿಂತಿದೆಂಬ ಬಗೆಯಂ ಬಗೆದಿನ್ನೊರೆಯೇವಮನ್ನೆಗಂ ॥೩೨

ಸಗುಣೆ ನಿನಗುಚಿತಮಲ್ತೇ ।
ಬೆಗಡಿವಱಿಂವಗೆಡುದೋರ್ಪುದಂವವೆಯೆನ್ನಂ ॥
ಮೊಗನೋಡು ಮನ್ನಿಸಿನ್ನಸು ।
ನಗವೆಳಗಿಂ ಬಗೆಯ ಮರ್ಬನೆಱ್ಬಿಸಿ ಬೆಸಸಾ ॥೩೩

ಎನೆ ರಾಯನರಸಿಯನ್ನೆಗ ।
ಮಿನಿಸುಂ ಮೊಗನೆಗಪಿ ನೋಡಿ ಮಱೆಯುತೆ ನಸುನಾ ॥
ಣ್ಚಿ ನಯಂಗಳ್ ಬೆಲೆವಡೆ ಕ ।
ಣ್ಗೊನೆಯಿಂ ಕೆಲನಿರ್ದ ಕೆಳದಿಯಂ ನಿಟ್ಟಿಸಿದಳ್ ॥೩೪

ವ॥ ಆಯಿಂಗಿತವಱಿತೊಳ್ಗೆಳದಿಯಿಂತೆಂದಳದೆಂತೆನೆ — ॥೩೫

ದೇವರ್ ದಯೆಗೆಯ್ಯೆಡೆಯೊಳ್ ।
ದೇವಿಯರ್ಗೆಲ್ಲಂ ಕೊಱತೆ ಪೊಂಡ್ಯಸತಿಯರ ತೊಂಡ ॥
ಲ್ದೀವಿದ ಘನರತ್ನಂಗಳ್ ।
ಪೊವುಗೆಗಳ ಬಳಸುದೊಂಗಲೆಡೆಯೊಳ್ ತೋರ್ಕುಂ ॥೩೬

ವ|| ಆದೊಡಂ ||೩೭

ಮಿಕ್ಕಿಕರ್ಗಂ ಪಲವಗಲಿಂ |
ಮಕ್ಕಳ ಮೇಲಾಸೆ ತೋರ್ಕುಮಿದು ಚಿತ್ರಕ್ಕಂ ||
ಕಕ್ಕಸಮುಂ ಕಳವಳಮುಂ |
ವೆಕ್ಕಸಮುಂ ಬೞಿಕೆ ಬಳೆದು ಕಿಕ್ಕಿಱಿದಿರ್ಕುಂ ||೩೮

ಬಲ್ದೊಪ್ಪಂಬಡೆರೋಜೆವಚ್ಚ್ವಮನಿಡರ್ ಪೊಂಬಟ್ಟೆಯಂ ತಾಮುಡರ್ |
ಮೆಲ್ದೊಂಗಲ್ಕರಲಂ ತುಱುಂಬರೆಸಗರ್ ಮೆಯ್ಗನ್ನಾಕೆಱಂಗರಂ ||
ಗೆಲ್ದಂದೀಟ್ದ ಮಣೀಸರಂದಳೆಯರೆಂದುಂ ದೇವಿಯರ್ ಮೋಹ ಮನಂ |
ಜೋಲ್ದಿಂತಿರ್ದೊಡಮಿನ್ನೆಗಂ ವಿನಯದಿಂದಂ ಮಾಂಜಿದರ್ ದೇವರೊಳ್ ||೩೯

ಮಜ್ಜನಭೋಜನವೀಟಿ |
ಕಜ್ಜಳತಿಲಕಾದಿಕಲನೆಯೊಳ್ ಕರಮಲಸು ||
ತ್ತುಜ್ಜುಗಿಪರೊಡಂಬಡಿಪ ಸು |
ಹೃಜ್ಜನಮಂ ಮೀಱಲಾಱದಿತೆಱಮಿರ್ಪರ್ |೪೦

ವ|| ಇನಿತಲ್ಲದೆಯುಂ ||೪೧

ಅವಧರಿಪುದು ದೇವರ್ ಭಾ |
ಗವತದ ಕತೆಗೇಳಲೆಳಸಿಯಾವಾಯಾವಾ ||
ಧವನೆಳಮೊಯ ಕೈಮೆಗಳಂ |
ಕಿವಿ ಸೊಗಯಿಸೆ ಕೇಳ್ದು ತಾಳ್ದದರ್ ಕಳವಳಮಂ ||೪೨

ವ|| ಆಬಾಲಗೋಪಾಲನ ಲೀಲೆಗಳೆಂತೆನೆ — ||೪೩

( ಉಪಜಾತಿ ವೃತ್ತಂ )

ಎಳಗಲ್ಲದೊಳಟ್ಟ ದಿಟ್ಟಬೊಟ್ಟಂ |
ಕೆಳಗೊಂಡೊಪ್ಪುವ ಪಚ್ಚೆಗನ್ನವಚ್ಚಂ ||

ಮೊಳೆವಲ್ ಮೊಗವಟ್ಟನಾದದಿಂದೊಂ |
ದೆಳಗಂದಂ ಕೞೆಗುಂ ಜಗಕ್ಕೆ ಕಂದಂ ||೪೪

ನೆವಮಿನಿತಿಲ್ಲದೊಲ್ದು ನಗುವೊಳ್ಮೊಗದೊಳ್ ಮೊಳೆದೋಱ ಮುದ್ದು
ವಲ್ | ತವಕದೊಳಿರ್ದು ಬಾಯ್ದೆಱೆಯೊಳೂಂಡಡಿಯುಂಗುಟಮಿಟ್ಟದಂ
ಕರಂ || ಸವಿದದಱಿಂಪು ಪೆಂಪಿಡಿದಿರಲ್ ಬಿಡಲಾಱದೆ ಭಕ್ತಭೋಗ್ಯಮಂ |
ಪವಡಿಸಿ ತೊಟ್ಟಿಲಂ ಬಗೆಯುಮಂ ಸಿಸು ರಂಜಿಸುಗುಂ ಯಶೋದೆಯಾ ||೪೫

ಅಡಿಯೊಗೆನುರ್ಬಿಯುರ್ಬಿ ಸಿರಿದೋಳ್ಗಱುವಳ್ಳಗಳಂ ನಿಮಿರ್ಚಿ ಕೆಂ |
ಪಿಡಿದೆಳಗೈಮೆರಲ್ ಕಳದೊಡಂಬೆಗೆ ಸಿಲ್ಕದೆ ಗಳ್ಕನೊರ್ಮೆ ಕೈ ||
ವಿಡೆ ಮಣಿದಾಡಿ ಮುಂತಣೆಮು ಮುಂ ಜಗಮಂ ಪಡೆದಂತೆ ಸಂತಸಂ |
ಮಡಲಿಡೆ ಕೇಶವಂ ನಲಿಗುಮೇಂ ಗಡಮಾಗಿನಿದಾಯ್ತೊ ಶೈಶವಂ ||೪೬

ಮಗು ನಗೆದೋಱ ಕೆಕ್ಕರಿಸೆ ಭೊಂಕನೆ ತಾಂ ಕವಿತಂದು ಗೋಪಿ ನು |
ಣ್ಮೊಗದೊಳಮರ್ಚಿ ತನ್ನ ಮೊಗಮಂ ಸೊಗಮಂ ನಿಗಮಾಂತದಂತೆ ತಾ ||
ಳ್ದುಗುಮಿಗೆ ಕಂಪನಿಂಪುಮನಲಂಪುಮನಾಮನದಾಸೆ ಸಲ್ವಿನಂ !
ಮೊಗೆಮೊಗೆದೀಂಟಿಯೀಂಟಿ ಮಿಗೆ ಮುದ್ದಿಸುವಳ್ಗಡ ! ನೋಂತುದೆಂತುಟೋ ||

ಪರಿದೊಡನೆತ್ತಿ ತೊಟ್ಟಿಲಿನೊಡರ್ಚಿದ ಸೋಗಿಲೊಳಿಟ್ಟು ಬೇಗದಿಂ |
ಸೆರೆಬಿಗಿದಲ್ಕಱಿಂ ತೊಱಿದ ಬಿಣ್ಮೊಲೆಯಂ ಸಿರಮಾಯ್ಗಮರ್ಚಿ ಪಾ ||
ಲ್ಸರಿ ಸವಿಯೋಱ ಚಪ್ಪರಿದು ಪೀರ್ವಿನೆಗಂ ಕಡೆಮಾಯರಲ್ದು ಕ |
ಣ್ಮರಲಿನಿಸಂ ಮುಗುಳ್ದರೆ ಯಶೋದೆ ನಿರೂಪಿಸಿಯುರ್ಕಿ ಸೊರ್ಕಿದಳ್ ||೪೮

ಮುತ್ತಕಗೊಂಡ ಬಟ್ಟಕಿಱುಚಂಡಿಕೆಸುತ್ತಿದ ಪೊನ್ನಮೊಗ್ಗೆಗಳ್ |
ಮುತ್ತಿನ ಲಂಬಣಂ ತೊನೆವ ತೊಂಡಲ ಬಜ್ಜರಬೊಟ್ಟು ಫಾಲದೊಳ್ ||
ಕತ್ತುರಿನಾಮಮೊಳ್ಗವಿಗೆ ಪತ್ತಿದ ಚೌಕಳಿ ಜೋಲ್ವ ಮುತ್ತಿಗಾ |
ಯ್ವೆತ್ತು ಪೊದಲ್ದು ಪುಯ್ಯಲೆದ ಗೋವಳನೊಳ್ಮೊಗಮೀಗುಮೊಲ್ಮೆಯುಂ ||

ಕಿಱುದಳವಾಱಿಯೊಂದು ಮೆಱುಕಾಲುಮನೊಯ್ಯರದಿಂ ಪೊಪಟ್ಟು ತಾಂ|
ಪೆಱಸಿರಿವಜ್ಜೆಯುಂ ಸೊಬಗಿನಿಂ ಪೆಱಸಾರ್ಚೆ ತೆಮಳ್ಕೆ ಸೂಱಿಯುಂ |
ಮಿಱುಗುವ ಮುದ್ದುಮೆಯ್ಯ ಪುಸಿಗೂಸಿನ ಬೆಂಬಿಡದೊತ್ತಿ ಪತ್ತಿಯು ||
ಳ್ಕಿಱಿನುಱ್ ಸುತ್ತುಗುಂ ವ್ರಜವಧೂಜನದುತ್ತಮಚಿತ್ತವೃತ್ತಿಗಳ್ ||೫೦

ಆರಳೆಲೆವಚ್ಚದಿರ್ಕೆಱಿಗಿನೊಳ್ ತೊನೆದಾಡುವ ಲಂಬಣಂಗಳಂ |
ಕರವೊಲೆದೀಱ್ವನಂ ಪಱಿದು ಚಲ್ಲಿದ ಮುತ್ತುಗಳೊತ್ತೆ ಪಸ್ತಪಂ ||
ಕರುಹಮುನಲ್ಲಿ ನಿಂದು ಬೆದಕುತ್ತದನೊಯ್ಯನೆ ಕಂಡು ಕೊಂಡು ಮುಂ |
ಬರಿವೆಳಗೋೞವಳಂ ಚರಣದಂದುಗೆ ಘಲ್ಲನೆ ಚೆಲ್ಲವಾಡುವಂ ||೫೧

ಸುಱಿಗುರುಳೊಳ್ಳೊಸಲ್ ಮಿಸುಪ ಸಾವಿನ ಬೊಟ್ಟು ಪೊದಳ್ಪು ಗಲ್ಲದೊಳ್ |
ತೊಳಗುವ ದಿಟ್ಟಿಗಪ್ಪು ಬೆಡಗಿ ಮೊಳೆವಲ್ ನೆವಮಿಲ್ಲದುಣ್ಮೆ ತೋೞ ||
ರ್ಪೆಳನಗೆ ತಳ್ತ ಗುಜ್ಜುಗೊರಲಿಂದಿನಿಸುರ್ಬಿದ ತೆಳ್ವಸಿಱು ಮನಂ | ಗೊಳೆ
ತಳರ್ದೆಱ್ವ ಬಿಱ್ವ ಪುಸಿಮಾಯುಸದೊಳ್ ಸಿಸು ಸೊರ್ಕಿ ಸೊರ್ಕಿಕುಂ||೫೨

ತುಂಬಿದ ಪೊಂಗೊಡಂಬಿಡಿದು ಕಾಱಿಚಿ ಪೊನಲ್ವರಿವಚ್ಚನೀರೊಳೇ |
ಬಿಂಬಮನೊಲ್ದು ನೋಡಿ ಪೊಡೆಯುತ್ತಿರೆ ಸೀರ್ಪನಿಗಳ್ ಸಿಡಿಲ್ದು ಮೆ ||
ಯ್ದುಂಬಿರೆ ವಿಶ್ವರೂಪದೊಳಜಾಂಡದ ಮಂಡಲಿ ತೋರ್ಕೆಗೊಂಡುದಿಂ |
ತೆಂಬಿನಮುಂಬಿಕುಂ ಜಗದ ಮುಚ್ಚೆಗೆಯುಂ ಪುಸಿಗೂಸು ತಣ್ಪಿನಿಂ ||೫೩

ತಳರುತ್ತಂದೆಱ್ವ ಬೀೞ್ವಾಯುಸಕೆ ಪೊಡೆಯೊಳಿರೆಱ್ವಗಂ ನೋೞಯುದಂತಿ|
ರ್ಕುಱಿಗೊಂಡೊರಂತೆ ಪೊಂದಾವಡಪವಳದಮುಳ್ಳೆವಳಂಗಟ್ಟಿಯುಳ್ದಂ ||
ತಳೆದುರ್ಬಿಂದಂಗಳಂ ಮುಮ್ಮನೆ ನೆರೆಮನೆವೊಕ್ಕಲ್ಲಿ ಚೆಲ್ಲಾಡಿ ತನ್ನಂ |
ತೆಳವಕ್ಕಳ್ ಪೆರ್ಕಳಂಗೊಂಡೊಡವರೆ ಪೊಱಲಂ ಲೀಲೆಯೊಳ್ ದಾಱುಮಾಱ್ಕಂ||

ಉಡೆನೂಲೊಳ್ ಕೋದ ಪೊಂಗಂಟೆಯುನುಲಿಯುದವ್ರೊಲ್ ತಾಂಗಿಮೊರ್ಕ್ಕೆ
ಯೊಳೊಳ್ಪಂ | ದಡಿಸೊಪ್ಪೆಳ್ದೆಱದಂತೊಯ್ಯನೆ ಕಡೆಮಡೆಯೊಳ್ ಕಂದ

ಲಂ ಸಾರ್ದುದು ಮೆಲ್ಪಿಂ ॥ ಕುಡಿಯುತ್ತಾಗಳಪಿ ನೋೞ್ಪನ್ನೆಗಮುಗುೞ್ದು
ಮೊಸರ್ ಕಣ್ಗಳಂ ತೀವೆ ಕೈಯಿಂ । ತಡಕಲ್ತಾಂ ಪಿಂದೆ ನಿಂದೇನೆನುತಲಿಸು
ಗುಂ ತಾಯ ಮಾಯಾಕಿಶೋರಂ ॥೫೫

ಬಿಸಿಯಿಂ ಪಾಲ್ಗಂದಲಂ ಕೀೞ್ಗಳುಪಿ ಕಡೆಮೊಸರ್ಗಂದಲಂ ಪಲ್ಲಟಂಗೆ ।
ಯೆೞ್ದುಱವಿಂ ಮಕ್ಕಳ್ಗೆ ಪೊಯ್ವಾಲಿಡಿದೊಳಱೆಗಳಂ ಕಾಚಿ ಮೇಣ್ ಸುಣ್ಣ
ನೀರ್ ಮು ॥ ನ್ನೆಲೆಯೊಳ್ ತೋರ್ಪರಂತೆ ತುಂಬಿಟ್ಟೊಡನೊಡೆದು ಮೊಸ
ರ್ಗಂದಲುಂ ಕೋಣೆಗೆಲ್ಲಂ । ಗೆಲವಿಂದಂ ಚೆಲ್ಲಿ ಪಾಲಂ ಕುಡಿದು ನಲಿಗುಮಾ
ನಂದಬಾಲಂ ಸಲೀಲಂ ॥೫೬

ತಳದಿಂದೊಳ್ವೆಣ್ಣೆಯುಂ ಕೊಂಡೆಳಸಿದನಿತುಮಂ ನುಂಗಿ ಬೆಂಗೊಳ್ವ ಬಾಲ
ಕರ್ಗಳುಮಂ ಕಟ್ಟ್ಕೞಂ ದಣ್ಣನೆ ತಣಿಸಿದೊಡಂ ತೀರದಂತಿರ್ಪಿನಂ ಪೊಂ ॥
ಗಳೆಯೊಳ್ ಕಟ್ಟಿರ್ಪ ಕರ್ಗೊಡಗಕೆ ಮೆಲಿಸಿಯಾಮೆಲ್ದುದಂ ಕಕ್ಕಕಕ್ಕಂ ।
ದಬಿಲಿಂ ಪೊಯ್ವನ್ನೆಗಂ ಪಲ್ಗಿಱಿಯೆ ಪರಿಯುದಂ ಬೆಣ್ಣೆಗೆತ್ತೀೞುತಿರ್ದಂ ॥೫೭

ಮುದುಪನ ಮೀಸೆಯುಂ ಬಳೆದ ಗಡ್ಡಮುನಂಡಿಸಿ ಗಂಟನಿಕ್ಕಿ ರ ।
ನ್ನದ ಪೊಸಗೊಡುಗೀಲನುಡಿದೀೞ್ದು ಕಟಿಲ್ಬಿ ತೆರೞ್ಬಿ ಕೀರಮಂ ॥
ಪದುಳದೊಳಿರ್ಪ ತೊಟ್ಟಿಲೆಳವಕ್ಕಳನಾಂಕಿ ಚಿವುಂಟಿ ವತ್ಸಮಂ ।
ಪುದುಗಿಸಿ ತಾಯೊಳಾತೊಱೆವ ಬೇಳ್ಕ್ಮಲೆಯುಂ ಸವಿದುಬ್ಬಿ ಕೊಬ್ಬುಗುಂ ॥

ಈಗುಣಮೀಸೊಬಗೀಸಿರಿ ।
ಯೀೞ್ಗೈಮೊಗಳೆಸೆವ ಶಿಶುವನೆಳಸಿದ ಪರಿಯಿಂ ॥
ದೀಗಳ್ ಚಿಂತಾಲತೆ ಕೊನೆ ।
ಸಾಗುವಿನಂ ಬಗೆಯೊಳರಸಿಯರ್ ಬಸವೞಿವರ್ ।೫೯

ವ॥ ಇಂತು ನುಡಿವ ಕೆಳದಿಯ ಮೊಗದಾವರೆಯೊಳ್ ಕಡೆಗಣ್ದುಂಬಿಗಳಂ
ಸುೞಿಸಿ ॥೬೦

ಪೆಱದೊರೆನೊಸಲೊಳ್ ಮಿಱುಗುವ |
ಕಱಗೆಱ ತಾನೆಂಬ ನಂಬುಗೆಯನೆಸಗುವಿನಂ ||
ನಿಱುಗೊಂಡಲಸುವ ಪುರ್ಬಿಂ |
ಜಱಿದರಸಿಯರವಳ ಸುಡಿಗಳಂ ನಿಲಿಸುವಿನಂ ||೬೧

ನಸುನಾಣ್ಮಿನಿಸುಗಳೊಡವೆರೆ |
ದೆಸೆವಿನಿಯಳ ಮುದ್ದುವೊಗವ ಮೋಡಿಗೆ ಮನದೊಳ್ ||
ಮಸಗುತ್ತಿರೆ ಸಂತಸಮುದ |
ಊಸಕಂ ಪೊಱಸೂಸದಂತೆ ಚಿಂತಿಸಿಯುಸಿರ್ದಂ ||೬೨

ಎಲೆಯರಸಿ ಸಿಸುಗಳಾಸೆಯು |
ದಲೆವುಸು ಪೊದೆವುಣ್ಬು ತುಡುವ ಪುರುಳಿಲ್ಲದರಂ ||
ನೆಲನೊಡೆತನಮುಂ ಸಿರಿಯುಂ |
ನೆಲಸಿರ್ದೆಡೆಯಲ್ಲಿ ಬಲ್ಲ ತಪ್ಪುದು ತಪ್ಪೆಂ ||೬೩

ಆದೊಡಮೀಮಹಿಶೂರವ |
ರಾದಿಯಿನಖಿಲಾರ್ಥಸಿದ್ಧಿಗಾದರಿಸಿರ್ಪರ್ ||
ಯಾದವಗಿರಿನಾರಾಯಣ |
ಪಾದಂಗಳನದಱನಪ್ಪುದೆಲ್ಲಂ ಗೆಲ್ಲಂ ||೬೪

ತೊಲಗಿಸಿ ಚಿಂತೆಯುಂ ತೊಳೆದು ನಣ್ಮೊಗಮಂ ಪೆಱನಾಮಮಿಟ್ಟು ಕ |
ಮ್ಮಲರ್ಗಳ ಸೂಡಿ ಕನ್ನವುರಮಂ ತಳೆದೆಚ್ಚಿಯಲರ್ಚಿ ಕಣ್ಗಳಂ ||
ನಲವಿನೊಳಪ್ರದಾಂ ಯದುಗಿರೀಶನ ದಿವ್ಯಪದಾರವಿಂದಮಂ |
ಪಲವಗೆನೋಂಪಿಯಿಂದೊಲಿಸುವಂ ಪಡೆವಂ ತಡವಿಲ್ಲದಿಷ್ಟಮಂ ||೬೫

ವ|| ಇಂತು ಪಲವುಂ ನಲ್ಮಾತುಗಳಂ ಚೆಲ್ವೆಯನೊಡಂಬಡಿಸಿ ||೬೬

ಮುನ್ನೇೞ್ಟೇೞ್ತರದರಸುಗ |
ಳನ್ನೇಮದೆ ಪೂಜೆಗೊಂಡು ಮನೆದೇಗುಲದೊಳ್ ||

ಸನ್ನಿದವಾದ ಯದೂದ್ವಹ ।
ನನ್ನಿರವಿಸಿ ಮಣಿದು ಪೊಗಟ್ಟಿ* ಪೊಡೆಮಡುವಿನೆಗಂ ॥೬೭

ವ॥ ಆವಮಹಾರಾಯಂ ॥೬೮

ಸುರಪತಿದಿಲೀಪರಾಮರ ।
ಪರಿಜೊಂದಿರೆ ಗುರುವಸಿಷ್ಠವಿಶ್ವಾಮಿತ್ರರ ॥
ಬೆರೆದೊಂದೆನಿಸಿದರೇನನು ।
ಸರಿಸಿದನಳಸಿಂಗರಾರ್ಯನದ್ಭುತಚರ್ಯಂ ॥೬೯

ಕ್ಷಮೆಯಿಂದಂ ಕರುವಿಟ್ಟು ಶಾಂತಿರಸದಿಂದಂ ತಿೞಿವಿ ವಿಜ್ಞಾನದಿಂ ।
ಸಮದಂಗಂಗಳನೊಪ್ಪವಿಟ್ಟು ದಯೆಯಿಂ ಕೈಗೆಯ್ಸಿ ಸದ್ಭಕ್ತಿಯಿಂ ॥
ಸಮದಿಂತೀಯುಳಸಿಂಗರಾರ್ಯನೆಸೆಗುಂ ವೇದಾನ್ತವೇಷಾಂತರಂ ।
ಶಮಿತಾಭ್ಯಂತರಬಾಹ್ಯಚಾರಿಕರಣವ್ಯಾಪಾರಚಿಂತಾಂತರಂ ॥೭೦

ವ॥ ಇಂತು ತನ್ನೊಳ್ಗೊಳೆಯನಪ್ಪಳಸಿಂಗರಾರ್ಯನಂ ನಿರವಿಸಿ ಪತ್ತುವರಿಸಿ ನುಡಿದನದೆಂತೆನೆ— ॥೭೧

ತಿೞಿವಿದ ತಿಳನಿೞರಂ ಕೆಡೆ ।
ತಾವಡಿತೊಳ್ಗೆಯ್ಗೆ ಸೂಸಿಯುಬ್ಬಸಗಳವಂ ॥
ತೇವಮನೆಲ್ಲಂ ಕಳವೆಂ ।
ಭಾವಿಸಿ ಕೇಳಿಂದಿನೊಂದು ಪೊಸವಗಗತೆಯಂ ॥೭೨

ಕಣ್ಬಿಡಿಯೆನಲ್ ಗುಣಂಗಳ್ ।
ಪೆಣ್ಬಿರಿಜಂ ತಳೆದು ತೊಳಪುವೆಂಬಂತವ್ರೊಲೀ ॥
ತಣ್ಬಗೆಯ ರಾಣಿಯೊಲವಿಂ ।
ಪಣ್ಬಡೆಗುಂ ಕಲ್ಪಕಲ್ಪಸಂಕಲ್ಪಂಗಳ್ ॥೭೩

ಕಂದರ್ಗೆತ್ತಿರ್ಪವೃತ ।
ವೃಂದಿರನವರೆಮ್ಮ ತಂದೆತಾಯ್ಗೆತ್ತಿರ್ಪರ ॥

ಕಂದರನಿಂ ಪೆಱರಂ ಬಗೆ ।
ದಂದೆಳಸೆವು ಬಲ್ಲರೆಲ್ಲರೀನಡತೆಗಳಂ ॥೩೪

ವ॥ ಆದೊಡಂ ॥೩೫

ದೇವಿ ಪುರಾಣಂಗೇಳ್ದಳ ।
ಗೋವಳನಂದೆಸಗಿದಿಂಪುಗೆಯ್ಮೆಗಳಂ ತಾಂ ॥
ಭಾವಿಸಿ ಮನದೊಳ್ ಸೆಱಗೊಂ ।
ಡಾವಗೆಯೆ.ಳಸಿಸುವನೆಳಸಿ ಕಳವಳಗೊಳ್ವಳ್ ॥೩೬

ಎಂದೊಂದ.ಂ ಕಳೆಗುಂದದ ।
ಚಂದಿಗನಂ ಪೋಲ್ವ ಚೆಲ್ವರಾಣಿಯು ಮೊಗದೊಳ್ ॥
ಕಂವಂಗಳನೆಳಸುವ ಕತ ।
ದಿಂದಂ ಕಣ್ಗೊಂಡೆನಿಂದು ಪೊಸವಗೆಗೆಂದಂ ॥೩೭

ಭೂವೈಕುಂಠಪರಾಭಿಧಾನಮೆನಿಪಾಮೇಲ್ಗೋಂಟೆಯಂ ಸಾರ್ದು ಸ ।
ದ್ಭಾವಾತೀತಸಮಸ್ತಭಾಗವತರಂ ಸಂದರ್ಶನಂಗೆಯ್ದು ತ ॥
ತ್ಸೇವಾನಿರ್ಮಲಚಿತ್ತನಾಗಿ ಪಲವುಂ ನಲ್ನೋಂಪಿಯಂ ನೋಂತು ಮು ।
ತ್ತೀವಂಶಂ ನೆಗ*ೞ್ವಂತುಟಾಂ ಪಡೆವೆನುದ್ಯಲ್ಲೀಲನಂ ಬಾಲನಂ ॥೩೮

ವ॥ ಇಂತಾಲೋಚಿಸಿ ॥೩೯

ಅಂತವರಂ ಬೆರಸು ಕರಂ ।
ಸಂತಸದಿಂ ಸಾರ್ದು ಯಾದವಾದ್ರಿಯನೊಡವಂ ॥
ದಿಂತೆಂಬೆಣಿಕೆಗಳದ ದಟಿ ।
ಮಂ ತಪ್ಪಲೊಳಿರಿಸಿ ಪತ್ತಿದಂ ಮತ್ತಕಮಂ ॥೪೦

ಇದಿರಿದಿರ್ವಂದು ಬಂದು ಪಿರಿದುಂ ಪರಸುತ್ತೆ ಪಲರ್ಮ ದೇಶಿಕರ್ ।
ಪೊದುಗಿದ ನೇಹದಿಂ ಕವಿದು ಕಣ್ಮನಮುಂ ತಣಿವಂತೆ ನಿಟ್ಟಿಸು ॥

ತ್ತೊದವಿದ ಹರ್ಷದಿಂದೊಡವರಲ್ ಪುರದೊಳ್ ಬಲವಂದು ಬೀದಿಯಂ ।
ಯದುಗಿರಿನಾಥಸನ್ನಿಧಿಯನೆಯ್ದಿದನಾನಿಧಿಯನ್ನನನ್ನಿಗಂ ॥೮೧

( ಮಾಲಿನೀ ವೃತ್ತಂ )

ಯುಗಪದುದಿತಭಾಸ್ವತ್ಕೋಟಿಯಂ ತೋರ್ದು ತೋರ್ದಾ ।
ಸೆಗಳ್ಕೆಗಳದೊಪ್ಪಂಬೆತ್ತು ತಣ್ಪೇಱುವನ್ನಂ ॥
ಬಗೆದಮರ್ದಿನ ಮುನ್ನೀರೊಳ್ ಪಸುಂಗೂಂಡ ತೇಜಂ ।
ನೆಗೞ್ದುದು ಹೃತತಾಪಂ ಯಾದವಾದ್ರೀಂದ್ರರೂಪಂ ॥೮೨

( ಶಿಖರಿಣೀ ವೃತ್ತಂ )

ಶುಭೋದಾರಸ್ನಿಗ್ಧದ್ಯುತಿಮಹಿತಸಂಸ್ಥಾನವಿಸ್ಮೃತ ।
ಪ್ರಭಾಜಾಲಂ ನೀಲಂಬಡಿಸಿ ಮಸಗಿತ್ತೆತ್ತಿದೆಸೆಗಳಂ ॥
ವಿಭೂಷೋದ್ಧಂ ಚಾರುಶ್ರೀಸಿಟಿಲಸೀವಾಸಮುಚಿತಂ ।
ಖುಭುಕ್ಷಾಶ್ಮಂ ಚೆಂಬೊಂಗರಡಿಗೆಯ ಮುಚ್ಚುಳ್ದಿಗೆದಪೋಲ್ ॥೮೩

ಅಮರ್ದಂ ಪೀರ್ದು ಪೊದಱ್ದ ಕಾರ್ಮುಗಿಲೊ ಮೇಣ್ ಸೊರ್ಕೇಱು ಬಂದಾನೆಯೋ । ಕಮಲಾರಾಮಹರಿನ್ಮಣೀನಿಲಯಮೋ ತಳ್ತೆಳ್ದ ಕರ್ದಾಳ್ಯೋ ॥ ಕ್ಷಮೆ ಕಣ್ಗೆಚ್ಚಲಮರ್ಚಿ ತಣ್ಪುಪೊಳಪಂ ಕೊಂಡಿರ್ಪ ಕಣ್ಗಪ್ಪೋ ನಿ । ಸ್ಸಮನೀಲಾಕುಚಕುಂಭಕುಂಕುಮಕನತ್ತಸ್ತೂರಿಯೋ ಶೌರಿಯೋ ॥೮೪

ವ॥ ಎಂದಿಂತು ಸಮುದಾಯಶೋಭೆಯನನುಭವಿಸಿ ಬಣ್ಣಿಸಿದನದೆಂತೆನೆ:—

ಸಮಸಂದಾಸನಪದ್ಮಮಂ ಸೊಬಗಿನಿಂ ಕೀಳ್ಗೆಯ್ದ ಪಾದಾಬ್ಜಮು ।
ತ್ತಮನಾಗೇಂದ್ರಕರೋಪಮಾಸಹಮಹೋದಾರೋರುಕಾಂಡಂ ಕಟಿ ॥
ಕಮನೀಯಾಮಲಪೀತಚೇಲಮೆಸೆಗುಂ ಶ್ರೀಲಕ್ಷ್ಮವಕ್ಷಸ್ಸ್ಥಲಂ ।
ನಮದಿಷ್ಟಾರ್ಥಚತುಷ್ಟಯಪ್ರದಭುಜಾದಂಡಂ ಜಗನ್ಮಂಡನಂ ॥೮೫

( ಮಾಲಿನೀ ವೃತ್ತಂ )

ಪೊಳೆವ ಮಣಿಕಿರೀಟಂ ಭೂರಿತೇಜೋಲಲಾಟಂ ।
ಕುಳಿರ್ಗೊಳಿಸುವ ನೋಟಂ ಕೊಂಕಿದೊಳ್ಪುರ್ಬಿನಾಟಂ ॥
ಮೊಳೆವ ರುಚಿರಹಾಸಂ ಮೋಡಿಗೊಂಡಿರ್ಪ ನಾಸಂ ।
ತೊಳಪ ಮುಖವಿಕಾಸಂ ತುಂಬಿಕುಂ ಕಣ್ಗೆ ಲೇಸಂ ॥೮೭

ನಿಡುಮುಗುಳಂ ತೆಱಂಬೊಳೆವ ನುಣ್ಬಣೆ ನಲ್ದೆರೆನಾಮಮಿಂಪುತ ।
ಣ್ಪಿಡಿದೊಡನಕ್ಕಱಿಂ ಕವಿವ ದಿಟ್ಟಿ ಪಳಂಚುವದುಬ್ಬಗಂಡಮಿ ॥
ಟ್ಟೆಡೆವಡುವಬ್ಬವಲ್ ಬೆಳರ್ವ ಮೆಲ್ನಗೆ ಕೆಂಗುಡಿವಾಯ್ ಪೊದಳ್ದಕ ।
ನ್ನಡಿಗದಪಿಂ ಮೊಗಂ ಕಱಿಗುಮೇಂ ಗಳ ! ಕಣ್ಗಳ ಮಂಗಳಂಗಳಂ ॥೮೮

ತುಂಬಿದ ಕಂದಮೋರಣದ ಜತ್ರು ಪೊದಳ್ದಱ ನೀಳ್ದ ತೋಳ ಪಾ ।
ಱಂಬಳೆ ಸಂಕು ಪೊಂಗಜೆ ಬಿಗುರ್ಪಿನ ಬೀಯಮುರಲ್ದ ಪೇರುರಂ ॥
ಪೊಂಬೊಗರ್ವಟ್ಟೆ ಲಕ್ಷ್ಮಿಯೊಡವುಟ್ಟಿದ ನಲ್ವಣಿ ತೆಳ್ವಸಿಱ್ ಮನಂ ।
ಗೊಂಬುದು ಯಾದವಾಚಲವಿಹಾರಿಯ ಶೌರಿಯ ಚಿತ್ತಹಾರಿಯಾ ॥೮೯

ಕುಱಿಸುಱಿಪೊರ್ಕುೞಿಕೊರ್ಗೊಳಿಸಿ ಸುತ್ತಿದ ಪಟ್ಟೆಯ ದಟ್ಟ ಪಕ್ಕಮಂ ।
ಕೆಳೆಗೊಳೆ ಸೆಕ್ಕಿದೊತ್ತರದ ಬಜ್ಜರವಂಕಿ ತೊಡಂಕುಸೊನ್ನೆನೂಲ್ ॥
ತಳತಳೆನಿಪ್ಪ ಸಣ್ಣಪೊಸಪೊನ್ನುಡೆ ಬಿಣ್ದೊಡೆ ಬಿಂಕವೆತ್ತ ಮೆ ।
ಲ್ದಳಿರಡಿ ಕೆಂದಳಂ ತೊಳಗುಗೆನ್ನೆರ್ದೆಯೊಳ್ ಯದುಶೈಲನಾಥನಾ ॥೯೦

ಚೆನ್ನಡಿ ಬಿಣ್ದೊಡೆ ಬಡನಡು ।
ಪೊನ್ನುಡೆನೂಲ್ ಪೊಳೆವ ಕಾಂಚಿ ತೆಳ್ವೊಡೆ ಸಿರಿವ ॥
ಣ್ಣೆನ್ನೆಗಱ್ದೆರ್ದೆ ನಿಡುನಾಲ್ತೋಳ್ ।
ಳೆನ್ನೆರ್ದೆಗೊಂಡಿರ್ಪ ಮೊಗದಿನೆಸೆವಂ ಚೆಲ್ವಂ ॥೯೧

ಮಣಿಮುಕುಟಮೊಳ್ಪುಸಲ್ವೆಱ ।
ಯಣಿನಾಮಂ ಕುಳಿರ್ವ ದಿಟ್ಟಿ ನಸುನಗೆ ನಳತೋ ॥

ಳಿಣೆಗಳದೆರ್ದೆನಡುತೊಡೆಗಳ್ ।
ಕಣೆಕಾಲ್ ಮೆಲ್ಲಡಿಗಳಿಂದೆ ಮೆಱೆವಂ ಚೆಲ್ವಂ ॥೯೦

ವ॥ ಇಂತು ಪಾದಾದಿಕೇಶಾಂತಮುಮಂ ಕೇಶಾದಿಪಾದಾಂತಮುಮಂ ಅನುಭವಿಸುತ್ತೆ ಚಿತ್ತವೃತ್ತಿ ತತ್ತಾದಾತ್ಮ್ಯಮಂ ಪಡೆವಿನಂ ॥೯೧

ಗದಗದಿಪಾಲಿ ಕೈದೆಗೆದು ನಿಂದೆಮೆ ತಣ್ಣನೆ ಪಾಯ್ವ ಕಣ್ಣನೀ ।
ರೊದವುವ ಗದ್ಗದಂ ನೆಗೆವ ಪೊಂಪುಳಯುಣ್ಮುವ ಸ್ವೇದೆಯಿಂದೆಯುಂ ॥
ಪದವಱದೊಂದು ಪೊಚ್ಚ ಪೊಸದೇಸೆ ಪುದುಂಗೊಳೆಯೊಪ್ಪುವಿರ್ಪಿನಂ ।
ಯದುಗಿರಿಯಾಳ್ದ ಚೆಲ್ವನವನೊಳ್ ಮಿಗೆ ಸನ್ನಿಧನಾದನನ್ನೆಗಂ ॥೯೨

ವ॥ ಆಸರ್ವಭೂತಸುಹೃತ್ತಮಂ ಹೃತ್ಕಮಲದೊಳ್ ನೆಲಸಿ ನುಡಿಸಿದನದೆಂತೆನೆ — ॥೯೩

ಮುಂ ದಶರಥವಸುದೇವರ್ ।
ಕಂದರ್ಕಳನೆಳಸಿಯೆನ್ನ ಕಾಲ್ವಿಡಿವನ್ನಂ ॥
ನಂದನನಾನಂದದೊಳಾ ।
ನಿಂದುಂ ನಿನ್ನಣುಗನೆನಿಸಿ ಧರೆಯಂ ಪೊರೆವೆಂ ॥೯೪

ಭಾವಿಸಿ ಭಜಿಸುವ ಭಕ್ತರ ।
ತಾವಿನೊಳಪ್ಪೊಂದು ಹರ್ಷಮೆಲ್ಲಿಯುಮಿಲ್ಲಾ ॥
ಮೂವಡಿನಾಡೊಳಮಿಲ್ಲನೆ ।
ಯೇವಣ್ಣಿಪೆನೆನ್ನ ಮುಖದ ನನ್ನಿಯ ನೆಲೆಯುಂ ॥೯೫

ವ॥ ಅದಱಂ ॥೯೬

ನಿನ್ನೆರ್ದೆಪೊಕ್ಕು ನಿನ್ನ ಮಗನೆಂದೆನೆ ನಾಡುಗರುಣ್ಮೆ ಹರ್ಷದಿಂ ।
ನಿನ್ನೊಡನಾಡಿ ನಿನ್ನ ಕುಲಮಂ ಬೆಲೆವೆರ್ಚಿಸಿ ನಿನ್ನನುಜ್ಞೆಯಿಂ ॥
ದನ್ನೆಗಟ್ಟಿದಲ್ಲಿ ಪಲ್ಲವಿಪ ದುಷ್ಟರ ಶಿಷ್ಟರ ಶಿಕ್ಷೆರಕ್ಷೆಯುಂ ।
ನನ್ನಿಯೊಳಾಳ್ವೆನೀನೆಲನನದ್ಭುತದಿವ್ಯವಿಚಿತ್ರಶಕ್ತಿಯಿಂ ॥೯೭

ವ|| ಇನ್ನುಮೆರ್ದೆಯೊಳ್ ಸನ್ನಿದನಾಗಿ ಮನ್ನಿಸಿ ನುಡಿದ ನಾರಾಯಣನ ನನ್ನಿವಾತಿಂ ನಿರ್ವೃತನಾಗಿ ಕಣ್ದೆರೆದು ||೧೦೦

( ಮಂದಾಕ್ರಾಂತಾ ವೃತ್ತಂ )

ಈಗಳ್ ಭಾಗ್ಯಂ ಬಳೆದುದು ಜಗಕ್ಕೀಗಳಾಮ್ನಾಯಮುಣ್ಮಿ |
ತ್ತೀಗಳ್ ಕಾಲಂ ಕೃತಮೆನಿಸಿದತ್ತೀಗಳುರ್ಬಿತ್ತು ಧರ್ಮ ||
ತ್ತೀಗಳ್ ಕೆಯ್ಗಳ್ಪುಲಿಸುದಳೆದತ್ತೀಗಳಗ್ಗಂ ಪೊದಟ್ಟು |
ತ್ತೀಗಳ್ ಸರ್ವಂ ಸಫಲಮೆನಿಸಿತ್ತೀಗಳಾಯ್ತೆಲ್ಲ ಗೆಲ್ಲಂ ||೧೦೧

ವ|| ಎಂದು ಸಾಷ್ಟಾಂಗಂ ನಮಸ್ಕರಿಸಿ ತೀರ್ಥಪ್ರಸಾದಂಗೊಂಡು ಕೃತಾರ್ಥತೆವೆತ್ತರಮನೆಯಂ ಸಾರ್ದೊಳಖಿಲಗದೊಳ್ ಮಿತಪರಿಜನಂಬೆರಸು ಕುಳ್ಳಿರ್ದಿನಮುಳಸಿಂಗರಾರ್ಯಂ ||೧೦೨

ಬಿನ್ನಪಮೊನ್ನದೊಂದು ಕೇಳಿದಾಲಿಸಿ ಮನ್ನಿಪುದೊಲ್ಮೆಯಿಂದಮೀ |
ನಿನ್ನಿರವಿಂತು ಬೇಱೆ ಪಿರಿಯುಕ್ಕೆವಮಂ ಪೊಱೆಗೊಂಡ ದೇಸೆಯಿಂ ||
ಮನ್ನತವಾದುದಿಂದು ಕುಲದೇವತೆ ಸನ್ನಿದವಾಗಿ ಸಂದುದೋ |
ತನ್ನನೆ ನಿನ್ನ ಕೈಬಸದೊಳೊಪ್ಪಿಸಿ ತಪ್ಪದೆ ಬಂದಿವಂದುದೋ ||೧೦೩

ವ|| ಎಂಬುದುಂ ರಾಯನುಮತಿಹರ್ಷದಿಂದಾವೃತ್ತಾಂತಮನಿತುಮನೆಕ್ಕಟಿಯುಸಿರ್ದು ಸಂತಸಮುಂ ಪೆಚ್ಚುಗುಡುವುದುಂ; ಅಳಸಿಂಗರಾರ್ಯಂ ||೧೦೪

ನೆವಮಿಲ್ಲದಿರ್ದ ಹರಿಕೃಪೆ |
ಪವಣಿಲ್ಲದೆ ಪಾಯ್ದು ಕವಿಯೆ ಪರಿಹರಿಸುವರಾರ್ ||
ಭುವನದ ಪುಣ್ಯದ ಪುಂಜಂ |
ಸವನಿಸಿ ಪುರಿಯೇಱೆ ಬಿರ್ಚಿ ಸಡಿಲಿಸುವರದಾರ್ ||೧೦೫

ವ|| ಎಂದಿಂತು ನುಡಿವುದುಂ ಸಂತಸದಿನರಸನವರಂ ಬೀಳ್ಕೊಟ್ಟಂತವುರಂಬೊಕ್ಕಲ್ಲಿ ||೧೦೬

ಇದಿರ್ವಂದರಸಿಯ ಸರಸಿಜ |
ಮೃದುಕರಮಂ ತಳ್ಕೈಗೊಂಡು ಪಕ್ಕಗೆ ವಂದ ||
ಗ*ದ್ಗದ ಸಂತಸದಿಂದುಸಿರ್ದಂ |
ಯದುಗಿರಿನಾರಾಯಣಾಂಘ್ರಿಕರುಣೋದಯಮಂ ||೧೦೭

ಮಾನಿಧಿ ಸಿಲ್ಕಿತೆಂಬ ಮನದೇವತೆ ಮನ್ನಣೆವಾತನಾಡಿತೆಂ |
ಬೀನೆಲನೆಲ್ಲಮಂ ನೆಗ*ಟ್ದ್ದ ಬೆಳ್ಗೊಡೆಯೊಂದಱೊಳಾಳ್ದವೆಂಬ ತಾಂ ||
ಜಾನಿಸಿ ಚಿತ್ತದೊಳ್ ಪೊಳೆವ ಮೂರುತಿ ಕಣ್ಗಿನಿದಾಗಿ ತೋಱಿತೆಂ |
ಬೀನೆಲೆ ಸಂತಸಂ ಮನದೊಳರ್ಮಡಿಸಿತ್ತವರೊರ್ವರೊರ್ವರಾ ||೧೦೮

ವ|| ಇಂತು ಸಂತಸಮಿರ್ದು ||೧೦೯

ಮೞವಗಲುದಯದೊಳರಸಂ |
ತುೞಗಿರೆ ಕಡುಹರಿಸಮಿರುಳ ಕನಸಂ ನೆನಸಂ ||
ದೞಪಲಳಸಿಂಗರಾರ್ಯರ |
ನುೞದಿಂದಂ ಕರೆಯಲಟ್ಟಿದಂ ಪಡಿಯಱರಂ ||೧೧೦

ವ|| ಅಂತರಸನಾಣತಿವಿಡಿದಾಪಡಿಯಱರ್ ತುರಿಹದಿಂದಳಹಿಯಸಿಂಗರಾರ್ಯಗ ಸಿರಿವಾಳಗೆವಾಗಿಲಂ ಸಾರ್ವಲ್ಲಿ ||೧೧೧

ಓದುವ ಋಕ್ಕು ಕಲ್ಪ ನಿಗಮಾಂತಯುಗಂ ತಿಳಿವರ್ಥಪಂಚಕಂ |
ಭೇದಿಸಿ ಕಾಣ್ಬ ತತ್ತ್ವದಿರವುಣ್ಮಿಪ ಬಣ್ಣಿಗೆವೆತ್ತ ಬಿನ್ನಣಂ ||
ಸ್ವಾದಿಪ ತೀರ್ಥಮಂಚಿಸುವ ವೈಷ್ಣವಲಾಂಛನಮಿಂತಿವೆಲ್ಲವಂ |
ಸಾದರಮೀಕ್ಷಿಸುತ್ತೆ ಚರರಾಸಿರಿವಾಳಗೆವೊಕ್ಕು ಸೊರ್ಕಿದರ್ ||೧೧೨

ಬಿನಯಂ ಬೇರ್ವರಿಜಾಂತುದೋ ಸುಚರಿತಂ ಕೈಕಾಲ್ಗಳಂ ತಾಳ್ದುದೋ |
ತನುವಂ ಪೆತ್ತುದೊ ಸತ್ವಶುದ್ಧಿ ಕೃಪೆಯೊಂ ವೇಷಾಂತರಂಗೊಂಡುದೋ ||
ಜನಭಾಗ್ಯಂ ಗಱಗಟ್ಟಿತೋ ಎನಿಸಿ ಸೌಮ್ಯಪ್ರೀನೃಸಿಂಹಾರ್ಯರಿ |
ರ್ಪಿನಮೆಯ್ತಂದವರಂಘ್ರಿಗಾಪಡಿಯಱರ್ ಮೆಯ್ಯಿಕ್ಕಿ ಬಿನ್ನೈಸಿದರ್ ||೧೧೩

ಆರ್ಯಾಗ್ರಣಿ ನಿಮ್ಮಂ ನೃಪ ।
ವರ್ಯರ್ ಬರವೇಳ್ದರೀಗಳೆನಲಳಹಿಯಸಿಂ ॥
ಗಾರ್ಯಂ ಕೇಳುತೆ ಪೊಱಮ ।
ಟ್ಟಾರ್ಯಗಣಂಬೆರಸು ಭರದೆ ಸಿರಿವಾಳಗೆಯಂ ॥೧೧೪

ಏಱಿ ಕನಕದಂಡಿಗೆಯಂ ।
ನೂಱಾಱೊಡನೆಯ್ದೆ ಮಂದಿಯಿಂದ್ರಭವನಮಂ ॥
ಸಾರುವ ಸುರಗುರುವಂತಿರೆ ।
ಸಾರಿದನಾರಾಯಬೀದಿಯಿಂದರಮನೆಯಂ ॥೧೧೫

ವ॥ ಅಂತು ಸಾರ್ದಲ್ಲಿ ॥೧೧೬

ಪಲವುಂ ನಾಡ ನರೇಶ್ವರರ್ ಕುದುರೆ ಕೂರಾಳಾನೆಗಳ್ ತೇರ್ಗಳಾ ।
ಬಲಮುಖ್ಯರ್ ಭಟಮಲ್ಲಮಾಗಧನಟರ್ ವೇಶ್ಯಾಜನಂ ವಂದಿಗಳ್ ॥
ಸಲೆ ವಿದ್ವಾಂಸನಿಯೋಗಿಗಾಯಕಕವೀಂದ್ರರ್ ವೈಣಿಕರ್ ವಂದಿಸಲ್ ।
ನಲವಿಂ ರಾಯನ ಸಂಮುಖಕ್ಕೆ ನರಸಿಂಹಾಚಾರ್ಯನಂದೆಯ್ದಿದಂ ॥೧೧೭

ವ॥ ಅಂತೆಯ್ದಿಯರಸನಂ ಸಾರ್ದು ॥೧೧೮

ಇಂದಿರನಂ ಸುರಗುರುವೆ ।
ಯ್ತಂದಾಶೀರ್ವಾದಿಸುವಂತಿರಳಹಿಯಸಿಂಗಾ ॥
ರ್ಯಂ ದೇವರಾಯನಂ ಪಲ ।
ವಂದದ ಪರಕೆಗಳನಿಂತು ಪರಸಿದನನುವಿಂ ॥೧೧೯

ಧರೆಯಂ ಪಾಲಿಸು ದೇವರಂ ಭಜಿಸು ಪಾರ್ವರ್ಗೀ ಪ್ರಜಾವರ್ಗಮಂ ।
ಪೊರೆ ತತ್ತತ್ಕುಲಧರ್ಮದೊಳ್ ಸ್ವಜನಮಂ ಪೆಂಪೇಱಿಸೊಲ್ದಾರ್ತರೊಳ್ ॥
ಕರುಣಂಗೆಯ್ ಪಿರಿಯರ್ಗೆ ಮೊಗ್ಗು ಜಸಮಂ ಕೈಕೊಳ್ ಸರೋಜಾಕ್ಷನಂ ।
ದೊರೆಗೊಂಬೊರ್ವ ಕುಮಾರನಂ ಪಡೆದು ತಾ ಶಿಷ್ಟರ್ಗಭೀಷ್ಟಾರ್ಥಮಂ ॥

ವ॥ ಎಂಬುದುಂ ರಾಯಂ ಸಂತಸಂಗೊಂಡಾದೇವರ ನೆನಪುಮೀಭೂದೇವರ

ನೆನಪುಂ ಸರಿವಂದಿರ್ಪುದೆಂದೆಣಿಸುತ್ತಾದರದಿಂದಳಹಿಯಸಿಂಗರಾರ್ಯರಂ ಗದ್ದುಗೆ
ಯೊತ್ತಿನಲ್ಲಿ ಕುಳ್ಳಿರಿಸಿ ಸೊಲ್ಲಿಸಿದಂ ||೧೨೧

ಅಳಹಿಯಸಿಂಗರಾರ್ಯ ಬುಧವರ್ಯ ಸುಚರ್ಯ ಕೃತೇಷ್ಟಕಾರ್ಯ ಕೇಳ್ |
ಇಳೆಯೊಳಗೆಮ್ಮವೋಲ್ ಪ್ರಚುರಪುಣ್ಯರದಾರೊಳರಾರ್ಗೆ ಮತ್ತೆ ತಾಂ ||
ಜಲರುಹನಾಭನೊಲ್ದು ಮಗನಾದಪನೀವಗೆ ನಿಲ್ಕೆ [ ನಿಮ್ಮೊಳಾಂ ] |
ತಿಳಿಪುವುದೊಂದು ಪೇರೊಸಗೆಯುಂಟುಱ ಲೇಸಿನ ಕೂಡೆ ಲೇಸುಗಳ್ ||

ವ|| ಇಂದಿನಿರುಳ್ ಕನಸಿನೊಳ್ ದೇವಂ ||೧೨೩

ತನಯರೊಳಾಸೆಗಳ್ ತಣಿವುವೇ ಪೆಱವೇನೊಳವೆನ್ನ ಬೇಳ್ಪುದಂ |
ಬಿನಮನುಗೊಂಡು ಬಿನ್ನವಿಸಿದಂ ಕೆಳೆಯಂ ಗಳ ! ಸಿಂಗರಾರ್ಯನೆಂ ||
ದೆನಿಪ ಘನಂಗಮೀವುದನುಮಕ್ಕಳನೆಂಬುದುಮಂಬುಜೇಕ್ಷಣಂ |
ಮನವೊಲಿದಿತ್ತನೆಂದೊರೆದು ನಿಟ್ಟಿಸಿದಂ ಬಳಸಿರ್ದ ಭಕ್ತರಂ ||೧೨೪

ವ|| ಎಂಬುದುಮಳಹಿಯಸಿಂಗರಾರ್ಯಂ ||೧೨೫

ನಿಮ್ಮೊಳಗೆಂಬಿಲ್ಲದೆ ಬೆರೆ |
ದಮ್ಮಂ ದೊರೆಗೆತ್ತು ಲೋಗರಾಳ್ಗೆಯ್ವರ್ ಪಿಂ ||
ಮುಮ್ಮೆಯ್ಮೆಗೊಳಿಸಿ ದೇವತೆ |
ಯುಮ್ಮನವಾಂತ್ತಯನೊಡಚರ್ಗುಂ ಚೆಚ್ಚರದಿಂ ||೧೨೬

ವ|| ಎಂಬುದುಂ ರಾಯಂ ನಗುತ್ತೆ ಮತ್ತೆ ಮಾದೇಗುಲದ ವೃತ್ತಾಂತಮಂ
ಬಿತ್ತರಿಪುದುಮಿವಂ ||೧೨೭

ಯದುವಂಶಂ ಪಿರಿದಾಯ್ತು ಕನ್ನಡದ ನಾಡುರ್ವಿತ್ತು ದೇವವ್ರಜ |
ಕ್ಕುದಯಂ ತೋಱಿತು ಪೂರ್ವರೇಳ್ಗೆ ನೆಗೆದ್ದತ್ತೊಕ್ಕಲ್ಗಳುರ್ಕಿತ್ತು ಸಂ ||
ಪದವೊಳ್ಪಜ್ಜೆವಳರ್ಗೆ ಪೆರ್ಚಿತು ಮಹೀಶೋರಾಣ್ಮರೀಚಕ್ರಮಂ |
ಪದಪಿಂ ಪಾಲಿಪ ಕಾಲಮೀಗಳೊದವಿತ್ತಿಂದಬ್ಧಿನಾನಂದದೊಳ್ ||೧೨೮

ವ|| ಇಂತಿಷ್ಟಾಲಾಪಂಗಳಿಂದಿರ್ಪಿನಮನಿತಱೊಳ್ ಪಡೆವಳರೊಡೆಯಂ

ಬಂದು ಪೊಡವಿಪರೊಡೆಯನಡಿಗೆಱಗಿ ಪಡೆಯನಿತುಂ ದೇವರಾಣತಿವಿಡಿದು ಪಟ್ಟಣದ ಪಯಣಕ್ಕೆ ಸನ್ನದ್ಧಮಾಗಿರ್ಕುಮೆಂದು ಬಿನ್ನವಿಪ್ಪುದುಮರಸಂ ಅಳಹಿಯಸಿಂಗರಾರ್ಯರಂ ನೋಡಿ ನೀವುಂ ಭರದಿಂ ಪಯಣಮಾಗಿರ್ಪುದೆಂದು ಸಿರಿವಾಳಗೆಗೆ ಬೀೞ್ಕೊಟ್ಟು ಯಾತ್ರಾದಾನಮನಿತ್ತು ಪೊಱಮಟ್ಟು ಪೆರ್ದಱಿಮನೊಡಗೊಂಡು ಪಟ್ಟಣಮಂ ಸಾರ್ದರಸುಗೆಯ್ಯುತ್ತಿರ್ದನದೆಂತೆನೆ.—॥೧೨೯

ಮಾರ್ದವಮಂ ದ್ವಿಜರೊಳ್ ಸೌ ।
ಹಾರ್ದಮನೊಳ್ಗೆಳೆಯರೊಳ್ಗನೊಳ್ ಮನ್ನಣೆಯಂ ॥
ಪೊರ್ದುಗೆಯವರೊಳ್ ಪುದುಗಿಸಿ ।
ಬೇರ್ದಳೆಯಿಪನಿಂಪುಗೊಳಿಸಿ ರಾಜನಿಲಿಂಪಂ ॥೧೩೦

ತನ್ನವರೊಳ್ ಸೌಜನ್ಯಮ ।
ದೆನ್ನರ್ ತಾಮಕ್ಕೆ ಕೂರ್ತರೊಳ್ ಸೌಶೀಲ್ಯಂ ॥
ನನ್ನಿಗರೊಳಾರ್ಜವಂ ಮಿಗೆ ।
ಮನ್ನಿಸುಗುಂ ಸರಸಭಾವನೀದೊಡದೇವಂ ॥೧೩೧

ಚಂಡಿಪರೊಳ್ ಶೌರ್ಯಂ ಸುಗಿ ।
ದಂಡಿಪರೊಳ್ ಕರುಣಮಿಟ್ಟ ಕಟ್ಟಾಜ್ಞೆಯನು ॥
ದ್ದಂಡಿಪರೊಳ್ ಕ್ರೌರ್ಯಂ ನೆಲೆ ।
ಗೊಂಡಿರೆ ದೊಡದೇವನವನಿಮಂಡಲಮಾಳ್ಗುಂ ॥೧೩೨

ನೋಡುವರೊಳ್ ಸೌಂದರ್ಯಂ ।
ಬೇಡುವರೊಳ್ ಸೊಂಪುಮೀಱಿದೌದಾರ್ಯಂ ಕೂ ॥
ಡಾಡುವರೊಳ್ ಮಾಧುರ್ಯಂ ।
ನೀಡುಂ ಕೂರ್ಗೊಳಿಸೆ ನೆಗ*ೞ್ಗುಮೀನೃಪವರ್ಯಂ ॥೧೩೩

ವ॥ ಮತ್ತಮವಂ ॥೧೩೪

( ಮಂಜುಭಾಷಿಣೀ ವೃತ್ತಂ )

ರವಿಯಂತೆ ವಿಷ್ಣುಪದಸಂಶ್ರಯೋಜ್ಜ್ವಲಂ ।
ಪವಿಯಂತೆ ದುರ್ಧರಶಿಭೃದ್ವಿಭೇದನಂ ॥
ಕವಿಯಂತೆ ಪುಣ್ಯಜನಪಕ್ಷಪಾತಿ ಗಾಂ ।
ಡಿವಿಯಂತೆ ಕೃಷ್ಣಕರುಣೈಕಭಾಜನಂ ॥೧೩೫

( ಮಂಜುಭಾಷಿಣೀ ವೃತ್ತಂ )

ಹರಿಖಡ್ಗದಂತೆ ರಿಪುಭೇದಿ ನಂದಕಂ ।
ವರಚಕ್ರದಂತೆ ರುಚಿರಂ ಸುದರ್ಶನಂ ।
ಕರಪದ್ಮದಂತೆ ದರಚಕ್ರಲಾಂಛನಂ ।
ಚರಣಾಬ್ಜದಂತೆ ಮಹಿತಂ ಸುವಿಕ್ರಮಂ ॥೧೩೬

ವ॥ ಮತ್ತಮಾರಾಯಂ ಪರಮಾತ್ಮನಂತೆ ಸಕಲಜನಹೃದಯಂಗಮನುಂ, ವಿಷ್ಣ್ವವತಾರದ ಮತ್ಸ್ಯನಂತೆ ವೇದೋದ್ಧರಣನಿಪುಣನುಂ, ಕೂರ್ಮನಂತೆ ಕುಲಗೋತ್ರನಿರ್ವಾಹಕನುಂ, ಯಜ್ಞವರಾಹನಂತೆ ಮಹೀನಿರ್ವೃತಿಕರನುಂ, ನೃಸಿಂಹನಂತೆ ಹಿರಣ್ಯದಾನಾನುರಕ್ತಕರನುಂ, ವಾಮನನಂತುದ್ವೃತ್ತಬಲಿಬಂಧಕನುಂ, ಜಾಮದಗ್ನ್ಯನಂತೆ ದುರ್ದಾಂತರಾಜನ್ಯದಮನನುಂ, ರಾಘವನಂತೆ ಸತ್ಯಸಂಧನುಂ, ರೌಹಿಣೇಯನಂತೆ ಬಲಭದ್ರನುಂ, ಕೃಷ್ಣನಂತ ಚಕ್ರಧರನುಂ, ಕಲ್ಕಿಯಂತ ಸಕಲಮ್ಲೇಚ್ಛವಿಚ್ಛೇದಕರನುಮೆನಿಸಂಗುಂ ॥೧೩೭

( ಮಂಜುಭಾಷಿಣೀ ವೃತ್ತಂ )

ಸಿರಿವಂತನಾಗಿಯುಮನಂತವಿಕ್ರಮಂ ।
ಪರಮೇಶನಾಗಿಯುಮಶೇಷಪಾಲಕಂ ।

ಪರಮೇಷ್ಠಿಯಾಗಿ ಕಲಿತ್ರೈಕಮುಖ್ಯನುಂ ||
ಸುರನಾಥನಾಗಿ ಕುಲಗೋತ್ರವರ್ಧನಂ ||೧೩೮

ವ|| ಮತ್ತಮಚಲನಾಗಿಯುಮಕಠಿನಸ್ವಭಾವನುಂ, ರತ್ನಾಕರನಾಗಿಯುಂ ಜಾಡ್ಯರಹಿತನುಂ, ಭಾಸ್ವಂತನಾಗಿಯುಂ ಸೌಮ್ಯನುಂ, ಜೈವಾತೃಕನಾಗಿಯುಂ ದೋಷಾನುಷಂಗರಹಿತನುಂ, ಜಿಷ್ಣುವಾಗಿಯುಂ ಬಲೋಲ್ಲಾಸಕನುಂ, ಶುಚಿಯಾಗಿಯುಂ ಶುದ್ಧವರ್ತ್ಮನನುಂ, ಸಮವರ್ತಿಯಾಗಿಯುಂ ಸಂಜೀವಕನುಂ, ಪುಣ್ಯಜನನಾಗಿಯುಂ ವಿಬುಧಸೇವ್ಯನುಂ, ಪ್ರಚೇತನಾಗಿಯುಂ ದಾಕ್ಷಿಣ್ಯನಿರತನುಂ, ಪವನನಾಗಿಯುಂ ಸುಸ್ಥಿರನುಂ, ರಾಜರಾಜನಾಗಿಯುಂ ರಮಣೀಯಬೇರನುಂ, ಮಹೇಶನಾಗಿಯುಂ ಕ್ರತುಪಾಲನುಮೆನಿಸಿಕರ್ಮ ||

ಆರಾಮಚಂದ್ರನಂತಿರೆ |
ಭೂರಮಣಂ ಸತ್ಯಧರ್ಮದಿಂದಂ ಪೊರೆಯ ||
ಲ್ಕೀರಾಜ್ಯವೆಲ್ಲಮಂ ಪ್ರಜೆ |
ರಾರಾಜಿಕುಮಚ್ಚು ಜೊಂದಿಯೆರಸರನ್ನಂ ||೧೪೦

ಪುರುಳಂ ಪಡೆದೊಳ್ಗಯ್ಮೆಯೊ |
ಳೆಚವರ್ಗಿತ್ತುಟ್ಟು ತೊಟ್ಟು ಪೆಂಡಿರ್ ಮಕ್ಕ ||
ಳ್ವೆರಸು ಹರಿದಿನದ ಹಬ್ಬದ |
ಪರಿಪರಿಯುಕ್ಕೆವಮನೆಸಗಿ ಪದುಳದೊಳಿರ್ಕುಂ ||೧೪೧

ವ|| ಮತ್ತಂ ಬಿಲ್ಗಳಂತೆ ಕೋಟಿಸಾರರುಂ, ಸರಲ್ಗಳಂತೆ ಲಕ್ಷದಾನಾಸಕ್ತರುಂ, ವೈನಾಕದಂತೆ ಪಕ್ಷಪಾತವಱಿಯದವರುಂ, ಧರ್ಮಶಾಸ್ತ್ರಂಗಳಂತೆ ವೇಗುಲಸರಿಕಾಲ್ಕೆಱಕಟ್ಟಕೊಳಬಾವಿಯಾರಮೆಯಜಪಟ್ಟಗೆಗಳಂ ನೆಗ

ಬ್ಬುವರುಂ, ತಿಂಗಾಳಯಂತಾವಗಂ ದಾಕ್ಷಿಣ್ಯಶಾಲಿಗಳುಂ, ಪಗಲಂತೆ ಮಿತ್ರಾನುವರ್ತಿಗಳುಮಾಗಿರ್ಪರ್ ||೧೪೨

ವ|| ಅಂತುಮಲ್ಲದೆಯುಂ ವೀರರೆನಿಸಿಯುಂ ವಿನಯವಂತರುಂ, ನಲ್ಮಾತುಗರಾಗಿಯುಂ ನನ್ನಿಗರುಂ, ಚೆಲ್ವರಾಗಿಯುಂ ಪರದಾರವಿಮುಖರುಂ, ತಿರಿಕುಳಗಳ ಬರವಂ ಬಯಸಿಯುಂ ಪೆಱರಾ ಬಯಸದರುಂ, ಬಯಸಿದೊಡವೆಗಳಂ ಪುರುಳ್ಗಳಂ ಪಡೆಯುತ್ತುಂ ಧರ್ಮಪರರುಂ, ಅಳವಿಗರಾಗಿಯುಂ ಪಾಪಭೀರುಗಳುಮೆನಿಸಿರ್ಪರ್ ||೧೪೩

ವ|| ಅಂತುಮಲ್ಲದೆಯುಂ ದೀಪದೊಳ್ ಸ್ನೇಹಹಾನಿಯುಂ, ಚಕ್ರವಕ್ಕಿಯೊಳಗಲ್ಕೆಯುಂ, ರಸ್ನದೊಳ್ ಪರೀಕ್ಷೆಯುಂ, ನೈದಿಲೊಳ್ ಮಿತ್ರದ್ವೇಷಮುಂ, ತಾವರೆಯೊಳ್ ರಾಜದ್ವೇಷಮುಂ, ಅಸಿಯೊಳ್ ಕೋಶಾಸಕ್ತಿಯುಂ, ಕೈಪಿಡಿಯೊಳ್ ಕಱಿಯುಂ, ಅಲರೊಳ್ ಕಟ್ಟುಂ, ವಾರ್ಧಿಕದೊಳ್ ದಂಡಗ್ರಹಣಮುಂ, ಗಾರುಡದೊಳ್ ದ್ವಿಜಿಹ್ವಸಂಗ್ರಹಮುಮಲ್ಲದಿವರೊಳ್ ತೋಱದು ||೧೪೪

ಈಪರಿಯಿಂದಂ ಪ್ರಜೆಯಂ |
ಕಾಪಿಡುತುಂ ಕಾರ್ತಯುಗಚರಿತ್ರಂ ಜಗದೊಳ್ ||
ವ್ಯಾಪಿಸೆ ದೊಡದೇವೇಂದ್ರಮ |
ಹೀಪಂ ಸೊಗವಾಳ್ದಪಂ ಜಗನ್ಮಣಿದೀಪಂ ||೧೪೫

ಕೆಳೆಯಿಂ ಚಿಕದೇವೇಂದ್ರಂ |
ಬಳೆಯಿಸೆ ನೆಗೞ್ದೆಸೆವ ತಿರುಮಲಾರ್ಯನ ಕೃತಿಯೊಳ್ ||
ತೊಳಗಿ ತೃತೀಯಾಶ್ವಾಸಂ |
ಬೆಳಗಿತು ಚಿಕದೇವರಾಜವಿಜಯದೊಳಗೆ ||೧೪೬

ಶುಭಮಕ್ಕೆ ಸುಜನಕನಿಶಂ ।
ಸಫಲಂ ತಾನಕ್ಕೆ ಸಕಲಧನಿಕರ ಧನಮುಂ ॥
ಪ್ರಭುಮಕ್ಕೆ ಭವ್ಯಶೀಲಂ ।
ವಿಭವಂ ಮಿಕ್ಕಿರ್ಕೆ ವಿಶ್ವವಿದ್ವಜ್ಜನಕಂ ॥೧೪೭

ಇದು ಯದುಗಿರಿಶಿಖರಾಭರಣಶ್ರೀಮನ್ನಾರಾಯಣಚರಣಸಂಚರಣಪರಾಯಣ ಶರಣಾಗತರಕ್ಷಣವಿಚಕ್ಷಣ ಸಕಲಕಲಾಪ್ರವೀಣ ಬಿರುದಂತೆಂಬರಗಂಡ ಲೋಕೈಕವೀರ ಭೂರಿತುರುಷ್ಕಶುಷ್ಕವನದಾವಾನಲ ಮರಾಟರ್ಘಾಟವೀಘಾಟ್ಟಾವಿಘಟನನಿರ್ಘಾಟ ಪ್ರಳಯಕಾಲಜಂಝಾನಿಲ ಪಾಂಡ್ಯಮಂಡಲಾಧಿಪವೇತಂಡವಿಲುಂಠನಕಂಠೀರವ ಮಲೆಪನೃಪಮದಮರ್ದನ ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪನಪ್ರತಿಮವೀರನರಪತಿ ಶ್ರೀಚಿಕದೇವಮಹಾರಾಜ ಕೃಪಾಪರಿಪಾಲಿತ

ಶ್ರೀತಿರುಮಲೆಯಾರ್ಯ ವಿರಚಿತಮಪ್ಪ

ಚಿಕದೇವರಾಜವಿಜಯ ಮಹಾಪ್ರಬಂಧದೊಳ್

ದೊಡದೇವರಾಜಗುಣವರ್ಣನ ಪುತ್ರಾಭಿಲಾಷ

ಶ್ರೀಕೃಷ್ಣಲೀಲಾಶ್ರವಣ ಯಾದವಾಚಲಗಮನ

ಶ್ರೀನಾರಾಯಣವರಪ್ರದಾನ

ಪ್ರಜಾಪಾಲನಾದಿವರ್ಣನಂ

ತೃತೀಯಾಶ್ವಾಸಂ ಸಂಪೂರ್ಣಂ.

## ಚತುರ್ಥಾಶ್ವಾಸಂ.

—:():—

ಶ್ರೀಯೆರ್ದೆಗೊಂಡಿರೆ ಮುನ್ನಿಳೆ ।
ದಾಯೆಳೆಯಂ ನೆಗಪಿ ದಾಡೆಯಿಂ ನಲಿಯಿಸಿದಾ ॥
ಮಾಯಾವರಾಹನಖಿಲ ।
ಶ್ರೀಯುಮನೊಲ್ದೀಗೆ ವೀರನರಪತಿಗೀಗಳ್ ॥೧

ಪೆಱವುಗೆಯಂತೆ ಪಿಂತೆ ಪವಣಾದುದು ಪಾದಯುಗಕ್ಕೆ ಭೂದಿವಂ ।
ಪಾವನಪಾದ್ಯಮಂ ತಳೆದ ಪೊಂಬಡಿಗಂಬೊಲದಾಯ್ತು ಮೇರು ಕೈ ॥
ದೀವಿದ ಶಂಖಚಕ್ರಮೆನೆ ಶಂಕಿತಮಾದುವು ಚಂದ್ರಸೂರ್ಯರಾ ।
ದೇವನುರುಕ್ರಮಂ ಬಳೆಯೆ ಕೀಚಕದೈವನ ವಿಕ್ರಮಂಗಳಂ ॥೨

ಎತ್ತರದಿಂದೀಪರಿ ಮನೆ ।
ವಾರ್ತೆಯವೊಲ್ ವಸುಧೆಯೆಲ್ಲಮಂ ಗೆಲ್ಲದೊಳೀ ॥
ಪೊರ್ತಂ ಪೊರೆಯುತ್ತುಮದೊಂ ।
ದರ್ತಿಯೊಳನುವೆತ್ತು ನೆಗರ್ದ್ದನಾದೊಡದೈವಂ ॥೩

ವ॥ ಇಂತಿರ್ಪಿನಂ ಕಿಱಿದುಂ ದಿನದೊಳ್ ॥೪

ಸಸಿಯುಂ ಪೂರ್ಣ್ಣಮೆ ಪೊಂಗುವ ।
ಪೊಸನೇಸಱನಾಂತು ಮೂಡದೆಸೆ ಮಸಗುವವೊಲ್ ॥
ಬಸಿವೊರ್ಕ್ಕು ಬಣ್ಣಮೇಱುವ ।
ಬಿಸಜಾಕ್ಷನಿನಮೃತಮಾಂಬೆ ಪೆಱಪಿಡಿದೆಸೆದಳ್ ॥೫

ಪೊಱಲಾರಳ್ ತೊಡವುಗಳಂ ।
ಪೊಱುವಳ್ ಪೊಡೆಗೊಂಡ ವಿಶ್ವಗರ್ಭನನೊಳ್ಪಂ ॥
ಕಿಱುವೊಱೆಯನಾನಲರಿಯದ ।
ಕಿಱುವಳ್ಳಿಗೆ ತನ್ನ ಕಾಯ್ತು ಬಲ್ಗಾಯ್ ಪೊಱೆಯೇ ॥೬

ಪೊಡೆವೆಡೆಗೊಂಡ ಮಾಧವನ ಪಾಸಿನ ಪಾವಿನ ಬೆಳ್ಪು ತಳ್ತ ಪಾ |
ಲ್ಗಡಲ ಪೊವಟ್ಟು ಬಟ್ಟೆಱ್ ಕರೋದ್ಧೃತಶಂಖದ ಕಾಂತಿ ಚಿತ್ತದೊಳ್ ||
ಪಡೆದಮೃತಾಂಶುರೋಚಿ ಪೊಱಸೂಸಿ ಪೊಗೞ್ತೆಗೆ ವಂದ ಚೆಂದಮಂ |
ಪಡೆವುದು ಕಣ್ಮನಕ್ಕಮೃತವಾಂಬೆಯು ಮೆಯ್ವಿಡಿವಚ್ಚಬೆಳ್ವಾಗರ್ | ೭

ಕುಡಿದು ಕೊರಲ್ವರಮುಮರ್ದಂ* |
ಕಡುಬಿಡೆಯಂ ಬಡೆವು ನಡೆವ ಪೊಸಬೆಳ್ಮುಗಿಲಂ ||
ತಡಿಯಿ ಡುವಳೊಯ್ಯನೊಯ್ಯನೆ |
ಕಡೆಗಣಿಸುವಳಮೃತವಾಂಬೆಯಂಚೆಯು ಸಂಚಂ ||೮

ಬಿಸುಪನಡಂಗಿಸಲ್ಕೆ ಮಣಿಹಾರಮಿದಾಗದು ಶತ್ರುಕುಂಭಿಕುಂ |
ಭಸಮುದಿತಾತಿನಿರ್ಮಲಮಣೀಸರಮಂ ತರವೇಳ್ಪುದೆಂಬಳೀ ||
ಬಸಿಱುಯರೊಳ್ಪನಿಂ ಬಯಸುವರ್ ಬಸಿಱೊಳ್ ನೆಲೆಗೊಂಡ ಬಾಲನೊಂ |
ದೆಸಕವ ಪಾಂಗಿನಿಂದಿಳೆಯೊಳೆಂಬರ ನಾಲ್ಕಡಿಯುಕ್ಕೆ ನಿಕ್ಕುವಂ ||೯

ಕೆಳದಿಯರೇತಕೀಚಮರವಾಲಧಿಗೀಪರಿ ಬೀಸುತಿರ್ಪರಿಂ |
ಕೆಳದಿಯು ರಾಯರೊಳ್ ಪೊಣರ್ದು* ಬಲ್ಮೆಯೊಳೀಟ್ದು ಬೆಳರ್ತ ಚಾಮರಂ |
ಗಳನಿರದಿಲ್ಲಿ ಡಾಳಿಸುಗೆ ಬಂದಿಗೆ ಸಿಲ್ಕಿದ ತಮ್ಮನಲ್ಲರಂ |
ಕೊಳಲನುವೇೞ್ವ ವೆಂಗಟಗೆರಾಯರ ರಾಣಿಯರಬ್ಜಪಾಣಿಗಳ್ ||೧೦

ಅನಿತುಂ ತಪ್ಪಂ ಸೈರಿಪ |
ಳನುವಾತಂ ಪೇೞ್ವೊಳನಿಬರ್*ಗಭಯಮನೀವಳ್ ||
ಪೊರೆವಳ್ ನೇಹದೆ ನೀಚಂ |
ಜನಮನಿತುಂ ಜೀವಿಪಂತೆ ಜಗದೊಡೆತನದೊಳ್ ||೧೧

ಅರಸಿಯರೀಬಯಸುವ ಪೊಸ |
ಪರಿಯಿಟ್ಟಿಂ ಪರಿಜನಕೆ ಮತ್ತಮೇನರಮನೆಗ ||

ಚ್ಚರಿಯುಂ ಪಸರಿಸೆಯರಸಂ ।
ಹರಿಸಂ ಮಿಗೆ ಸಾರ್ದು ನುಡಿದನೊಳ್ವಾತುಗಳಂ ॥೧೨

ತಳೆದುದು ನಿನ್ನ ತಳ್ಪೊಡೆ ಜಗದ್ಗುರುವಂ ಪೊಱಯುರ್ವಿಗೆತ್ತರದೇಂ ।
ಬೆಳಗಿತು ಬೆಳ್ಳುಗಂ ರಿಪುವಧೂವದನಂ ಮಿಗೆ ಮಾಸಲಾದುದೇಂ ॥
ತೊಳಗಿತು ಸೇರೆಗಳ್ ಮಲೆಪರಾಣಿಯುರಕ್ಷಿಗೆ ಮುರ್ಬು ಪರ್ವಿತೇಂ ।
ಬಳೆದುದು ಸುಯ್ವೊಲರ್ ಪಗೆಯು ಪೆಂಡಿರ ಸುಯ್ಗಳ ಬಟ್ಟೆ ಕಟ್ಟಿತೇಂ ॥೧೩

ನಡೆಗಳ್ ನಿನ್ನವು ಮೆಲ್ಪಂ ।
ಪಡೆದುವು ನಿಟ್ಟೋಟವಾಯ್ತು ಪಗೆವರ ಪೆಂಡಿ ॥
ರ್ಗಡವಿಯೊಳಚ್ಚರಿಯಾಗಿದೆ ।
ನುಡಿ ನಾಣ್ಚಿದಿರೆತ್ತು ಮೊಗಮನಿತ್ತಲೆ ನೋಡಾ ॥೧೪

ನೆಲಕೆ ನೆಗೞ್ತೆವೆತ್ತೆಸೆವ ಜೋಯಿಸಿಗರ್ ಬಗೆವಂದು ವಂದು ತಾಂ ।
ಪಲಬರುಮೊಂದುಗೂಡಿ ನುಡಿವರ್ ಪೊಡೆಯೊಳ್ ಸಿಸು ಪುಟ್ಟುಗುಂ ಗಡೀ ॥
ಕಲಿಕಲುಷಂಗಳೆಲ್ಲಮುಮಡಂಗಿ ಕೃತಂ ಜಿತವಾಗಿ ರಂಜಿಕುಂ ।
ಜಲರುಹನೇತ್ರನೆತ್ತಿದನೊ ಪತ್ತಱ ಮೇಲವತಾರಮಿಂತಿದಂ ॥೧೫

ಅರಸನುಮರಸಿಯುಮೀಪರಿ ।
ಸರಸಂ ಮಿಗೆ ಪೋದ ಪೊೞ್ತನಱಯದೆ ಕಳೆಯು ॥
ತ್ತಿರೆ ಪಡಿಯಱವೆಣ್ಣೊರ್ವಳ್ ।
ಭರದಿಂ ಬಂದೊಸಗೆಯೊಸಗೆಯೆಂದುಸಿರ್ವಿನೆಗಂ ॥೧೬

ಅಲರ್ವ ಮೊಗಂ ಮರಲ್ವ ಬೆವರ್ಗಳ್ ಬೆಮರುಕ್ಕುವ ಮುದ್ದುಗಲ್ಲಮಂ।
ಡಲೆವಿನಿಸುಂ ಜಗುೞ್ದೆಸೆವ ಕನ್ನವುರಂ ತೆರೆಗೊಂಡು ಪಾಯ್ವ ಸು ॥
ಯ್ವೊಲರಿರದುರ್ಬಿ ತೞ್ಗಡಗೆಯಿಂ ಮಿಗೆ ಮಿಱುಮುರೋಜಕುಂಭಮುಂ ।
ಜಲಜಕರಾಗ್ರದೊಳ್ ಮೆಱೆಯೆ ವೇತ್ರಮುದ್ದಂ ಪ್ರತಿಹಾರಿ ತೋಱವಳ್ ॥

ಕದುಬಂ ಕಳೆ ಕಡುಚಕದುರೆ |
ಪದುಳಂಬಡೆಯೊಸಗೆಯೇನದಂ ಬಿತ್ತರಿಸೆಂ ||
ಬುದುನಾಪಡಿಯುಜ್ವಲ ಬಿನ |
ಯದೊಳೆಱೆವಳ್ ರಾಯರಾಣಿಯರ ಕಿವಿಗಮರ್ದಂ ||೧೮

ಪಳನ ಡಿಯುಂ ಪರ್ಚಿದ ಮುನಿ |
ಗೆಳೆ ಪೊಗೞ್ವನಂದು ಕುವರನಾದವೊಲಾದಂ ||
ಸಿಳಯುಗೆ ನಿಖಿಲಗುಣದೊ |
ಳ್ಗೆಳೆಯಂಗಳಸಿಂಗರ ರ್ದ್ಯರ್ಯಂಗೀಗಳ್ ||೧೯

ವ|| ಎನೆ ಕೇಳ್ದವರ್ರರುಂ ತಮ್ಮ ತನಯುಸ ರೆಭ್ಯೇದಯ ಕ್ಕಿದರುಶೋೕವ ಯ ಮೆಂದೆಣಿಸಿ ಪೂರ್ಣಮನೋರಥದಿಂದೊಸೆಗೆವೇಳ್ದುಳ್ ಪೂರ್ಣಪಾತ್ರಮನಿತ್ತು ಕಳುಪಿದರ್ ; ಬೞಿಕ್ಕೆ ರಾಯಂ ಕೆಳೆಯನಂ ಬರಿಸಿ ||೨೦

ಉಕ್ಕೆವವರಿರ್ವರ್ಗಂ |
ಸಕ್ಕಸವಂಗೊಂಡು ತೋಱಿ ಸಂತಸದಿಂ ಲೆ ||
ಕ್ಕಕ್ಕವುರದ ಪೊಂಗಳನೊಳ |
ಬೊಕ್ಕಸದಿಂ ತೆಗೆದು ಪಸೆದು ಪಾರ್ವರ್ಗಿತ್ತರ್ ||೨೧

ವ|| ಬೞಿಕ್ಕೊರ್ವರ್ಗಲ್ ||೨೨

ಇರೆಯಿರೆಯೀಪರಿಯಂತಃ |
ಪುರದಿರವಂ ತಿಳಯಲೆಂದು ಕಳುಪಿದ ಕುವರಂ ||
ಪರಿತಂದು ಮಣಿದು ರಾಯನ |
ಪರಿಸರದೊಳ್ ಪಕ್ಕವಯ್ದಿಯೆಕ್ಕಟಿವೇಳ್ದಂ ||೨೩

ಪಾವ ! ಪರಾಕು ಚಿತ್ತವಿಪುದಾಂ ತಿಳದಂತುಟು ಬಿನ್ನಪಂಗಳಂ |
ಭೇದಿಸಿ ನೋಡಿ ಕಜ್ಜದಿರವಂ ಪಡಿಗಟ್ಟಿದ ಪಾಂಗಿದಲ್ತು ನೀ ||

ನೇ ದಯೆಗೆಯ್ದು ಕಂಡುದನಿವಂ ಮಱೆವೊಂಜುವನಲ್ತು ಬಾಲನೆಂ |
ದಾದರದೀಗಳಾಲಿಪುದು ಸೇವಕಶೇವಧಿ ಸತ್ಕೃಪಾನಿಧೀ ||೨೪

ದಾದಿಯರುಂ ಬರ್ದೆಯರುಂ |
ಬೀದಿಯ ಮನೆಯೊಳ್ ಪೊಗೞ್ತೆವೆತ್ತೊಪ್ಪುವ ಮು ||
ತ್ತೈದೆಯರುಮಂತಃಪುರದೊಳ್ |
ಗಾದರದಿಂದೊಂದುವೆರಸಿ ಸಂದಣಿಸಿರ್ಪರ್ ||೨೫

ಪಿರಿಕಿಱಿವಲ್ಲದ ಪವಣೊಳ್ |
ಸಿರಿವನೆಯುಂ ಸೊದೆಯ ತೊಡೆಪದಿಂ ಬೆಳರಿಸಿ ಚಕ ||
ಪ್ಪರಮಂ ಬೆಳ್ವಟ್ಟೆಗಳಿಂ |
ಪರುಠವಿಸಿವರಚ್ಚಮುತ್ತಿನೊಳ್ಗಚ್ಚುಗಳಿಂ ||೨೬

ವ|| ಅಲ್ಲಿ ರಾಣಿಯರ್ ||೨೭

ಐಕಿಲ್ವೆಟ್ಟಿನ ಮಂಜುಗಲ್ಲಗವಿಯೊಳ್ ತಳ್ತಿರ್ದ ಚಂದ್ರಾಶ್ಮದೊಳ್ |
ನಾಕಸ್ತ್ರೀಸಹಿತಂ ಭವಾನಿ ಕಡೆವಾಗಳ್ ಪಾಲ ಮುನ್ನೀರೊಳಾ ||
ಲೋಕಖ್ಯಾತವ ಮಾತೆ ಲಕ್ಷ್ಮಿಯೆನೆ ಸಂದಿರ್ದಪ್ಸರೋಬೃಂದದಿಂ |
ದಾಕಾಲೋಚಿತಮಂಗಲಾನುಸರಣವ್ಯಾಸಂಗದೊಳ್ ಪೊಂಗುವರ್ ||೨೮

ವ|| ಆಗಳಲ್ಲಿ ಬಳಸಿರ್ದ ಬರ್ದೆಯರ್ ||೨೯

ಪಿಂ ಕೌಸಲ್ಯೆ ಕುಮಾರನಂ ಪಡೆಯಲಿರ್ಪಾಗಳ್ ನಗುತ್ತೀತೆಱಂ |
ಬಿಂಕಂದಾಳ್ದಿದಳೆಂದು ಕೇಳ್ವರವಳಿಂದಂ ದೇವಕೀದೇವಿ ಮು ||
ತ್ತಂ ಕೈಗೆಯ್ಯುತೆ ಸಂತಸಂ ಸರಸಮೊಳ್ಪಾತುಕ್ಕೆವಂಗೊಂಡಳೆಂ |
ದುಂ ಕೇಳ್ದಿರ್ದೆವು ಕಂಡೆವಿಂದಮೃತಮಾಂಬೇ ನಿನ್ನ ನಾಮಿನ್ನೆಗಂ ||೩೦

ಸೋಜಿಗಮಾಗಿದೆ ಸೊಸಿವಿಸೆ |
ಮೂಜಗದೊಳಮಿಲ್ಲಮೆಮ್ಮ ಪಿರಿಯರಮನೆಯೊಳ್ ||

ರಾಜರಸರ ಮುದುಪರಸರ |
ತೇಜದ ರಾಣಿಯರೊಳಲ್ಲವೀಪರಿಪದುಳಂ ||೨೧
ಬಲ್ಲರ್ ಬರ್ದೆಯರೀಪರಿ |
ಗೆಲ್ಲಂ ಮನದಲ್ಲಿ ನೆಗೞ್ ಸೊಲ್ಲಿಸುತಿರೆ ಬಂ ||
ದಲ್ಲಣಿಗೆಗೊಂಡು ಪೊಣ್ಮುತೆ |
ಕೊಲ್ಲಣಿಸುವರುೞಿಬಿ ನುಡಿವರೂೞಿಗವೆಣ್ಗಳ್ ||೨೨

ಕಳವೆಯುರಲ್ಗಳಂ ಬಿೞಿಯ ಸಾಸುವೆಯುಂ ಬೆಳ*ರ್ವಣ್ಣದೊಳ್ಮರ |
ಲ್ಗಳನೊಡಗೊಂಡು ಚೆಲ್ಲಿವೊಳಲಂಗಳದೊಳ್ ಪುಗವೇಡ ಕಾಲದೂ ||
ಳ್ಗಳೆಯುದರ್ಗಳ್ಪೊದಿಸಿಮಘಾಸಹವಿಷ್ಣುಸಹಸ್ರನಾಮಮಂ |
ತಳರಿಸಿಮುಚ್ಚಬೇವಿನೆಲೆದೋರಣದಿಂ ನೆಲೆವಾಗಿಲ ಬಾಗಿಲೆಲ್ಲಮಂ ||೨೩

ಇಕ್ಕುಗೆ ಪಾವುಸೋಲ್ಪಸುನೆಯ್ವೊರಸೀಗಳ್ ಧೂಪಮಂ ಸಮಂ |
ತುಕ್ಕೆವಮುಣ್ಮೆ ಸೋಬನಮನ್ಮೈದೆಯರಾದರದಿಂದೆ ಪಾಡುಗಿ ||
ರ್ಕ್ಕದೊಳಂಕಿತಂಗೊಳಸುಗೀಮನೆಗಗ್ಗದ ಶಂಖಚಕ್ರಮಂ |
ರಕ್ಕೆಗೆ ತರ್ಕೆ ಗಳ್ಕನಡಿಗಪ್ಪುರಮಂ ಯದುಶೈಲನಾಥನಾ ||೨೪

ತುಂಬಿದ ಗುಂಬಮಂ ಪೊಱಪೊಸಂತಿಲ ಪಕ್ಕದೊಳಟ್ಟು ಪೂಜೆಗೆ |
ಯ್ಸಿಂ ಬರಿಸಿಂ ಭಿಷಕ್ಕುಗಳನೌಷಧಿಮಂತ್ರಮಣಿಪ್ರಯೋಗದೊ ||
ಳ್ಪಂ ಬಗೆವಂದರಂ ಕರಿಸಿಮೀಗಳ್ ಜೋಯಿಸಿಗರ್ ಪುರೋಹಿತರ್ |
ನಂಬಿದ ಪಾರ್ವರಿಂತಿವರನೆಲ್ಲರನೆಂಬರದೊರ್ವರೊರ್ವರೊಳ್ ||೨೫

ಊೞಿಗಗುವರನ ನುಡಿಗೇ |
ಳ್ದಾಳೋಚಿಸಿ ಬರಿಸಿ ಜೋಯಿಸಿಗರನಿಬರನಾ ||
ವೇಳೆಯ ಗುಣಸಂಪತ್ತಿಯ |
ಕೇಳುತೆ ಹಿತಜನದ ಕೇಳಮೇಳದೊಳರ್ದಂ ||೨೬

ವ|| ಇಂತಿರ್ಪಿನಂ ||೨೭

ನುಣ್ದುಱುಬು ಪೆಱನೊಸಲ್ ನಿಡು ।
ಗಣ್ದೀಸೆಯು ನೋಟವೆುಸೆಯೆ ಮಸಗುವ ರಾಗಂ ॥
ಪಣ್ದಳೆದುದೆನಿಸೆ ಬಾಯ್ದೞ ।
ಪೆಣ್ದೇವತೆಯಂತೆ ಬಂದಳರಮನೆಯಿಂದಂ ॥೩೮

ಪೊಗರೇಱುವ ವೊಗಸಿರಿಯುಂ ।
ಬಗೆಗೊಳಸುವ ಬಗಸೆಗಣ್ಣ ಬಣ್ಣಗೆವೆಳಗುಂ ॥
ಮಿಗೆಯೊಸೆಗೆವೆಱಲೀಪರಿ ।
ಸೊಗಟ್ದಯ್ದಿದ ತನ್ನ ಭಾಗ್ಯದೇವತೆಗೆತ್ತಂ ॥೩೯

ವ॥ ಇಂತು ರಾಯಂ ಹರ್ಷದೃಷ್ಟಿಯಿಂ ಪುಷ್ಪವೃಷ್ಟಿಗಱೆಯುತ್ತಿರೆ
ಪತ್ತಸಾರ್ದು ಪಣಿದೆಟ್ದು ಪೊನ್ನಪುತ್ತಱಯಂತೆ ಚಿತ್ತರಗಂಬಮಂ ನೆಮ್ಮಿ॥೪೦

ಕಡುನೇಹಂ ಕವಿದಿರ್ಪ ದಿಟ್ಟಿಯುಮರ್ದಂ* ಪಿಱವಾಸೆಯಿಂ ತತ್ತಱಂ ।
ಬಡುತಿಪ್ಪೊಳ್ಗವಿ ಮಿಕ್ಕುಮೀಱುವ ಮನಂ ಸೊರ್ಕೞ ರಾಯಂಗವ ।
ಕ್ಕಡೆವಾಯೊಳ್ತರೆಸೂಸೆ ಮೆಯ್ಯೊಳಡಿದಾನಂದಂ ಮರಲ್ಗಣ್ಣ ನೀ ।
ಳ್ಗಡೆಯೊಳ್ಸೋಡಿಯು ಕೂಡೆ ಪಾಯೆ ನುಡಿದಳ್ ಶುದ್ಧಾಂತವೃತ್ತಾಂತಮಂ ॥

ರಾಮಂ ದಶರಥನರಪತಿ ।
ಗಾಮಾಧವನಂದು ಶೌರಿಗುದಿಸಿದ ತೆಱದಿಂ ॥
ಶ್ರೀಮಂತನುದಿಸಿ ನೆಗಟ್ದಂ* ।
ಸ್ವಾಮಿಗೆ ಸುಗುಣಾಭಿರಾಮನಭಿನವಸೋಮಂ ॥ ೪೨

ವ ॥ ಎಂಬುದುಂ ॥೪೩

ಸವಿವಾತಿನಮರ್ದುಪರಿಕಾಲ್ ।
ಕಿವಿವಾಯಿಂ ಪೊಕ್ಕು ಮಿಕ್ಕು ಬಗೆಗೆಱವೊಡೆಯೊಳ್ ॥
ಪವಣಿಂ ಮೀಱ ಪೊನಲ್ವಾರಿ ।
ದವನೀಂದ್ರನೊಳಂಕುರಿಸಿತ್ತು ಸಂತಸಸಸಿಖಮುಂ ॥೪೪

ಅಮರ್ದಿನೊಳಟ್ಟಿದನೋ ಸೊದೆಯುಣ್ಮಂ ಮನವಾಱೆ ಪೀರ್ದನೋ ।
ಅಮರರನಾಳ್ದನೋ ಸರಸಿಜೋದರದೊಳ್ ನೆಗೞ್ದನೋ ॥
ಅಮಮ ! ಸೊಗಂ ಮಿಗುತ್ತಿದೆಯಿದೇಂ ಜಗದೀಶನಾದನೋ ।
ಕುವರನ ಜನ್ಮದೊಂದೊಸಗೆಯೀವಗೆ ಸೊರ್ಕುವಮಾೞ್ಪುವೋ ॥೪೪

ಪಿರಿಯೊಸಗೆವೇೞ್ದ ರಾಣಿಯ ।
ಪರಿಚಾರಿಕೆಗಿತ್ತು ರನ್ನಪೊನ್ನೊಡವೆಗಳಂ ॥
ಪರಿತವಿಸಿ ಕಳುಪಿದಂ ಮ ।
ತ್ತೊರೆದರ್ ಜೋಯಿಸಗರೊಲ್ದು ಜಾತಕದಿರವಂ ॥೪೬

ದ್ರೇಕ್ಕಾಣಮುಚಿತಮುದಱಿಂ ।
ಮಿಕ್ಕಿರ್ಕುಂ ಹೋರೆ ಲಗ್ನಮಂಶಂ ತ್ರಿವಿಧಂ ॥
ತಕ್ಕುದು ... ... ತಾನೆಲೆ ।
ಲೆಕ್ಕಿಪರಾರೀಕುಮಾರಜಾತಕಗುಣಮಂ ॥೪೭

ವ॥ ಮತ್ತಂ ॥೪೮

(ಉತ್ಸಾಹವೃತ್ತಂ)

ಒರ್ವರೊರ್ವರೊಂದುಮೊಂದು ಚೆಂದಮಾಗಿ ಪೇೞ್ದೊಡಂ ।
ಸರ್ವರಾಜಯೋಗಮೊಂದುಗೂಡಿ ತೋಱೆ ನಿಶ್ಚಿತಂ ॥
ಸಾರ್ವಭೌಮನಕ್ಕುಮೀಕುಮಾರನೆಂದು ಗರ್ವದಿಂ ।
ದುರ್ವಿಯುರ್ವಿ ಪೇೞ್ದರುರ್ವಿದೇವರುರ್ವರೇಶನೊಳ್ ॥೪೯

ವ॥ ಇಂತು ದೈವಜ್ಞರ್ ಪೇೞ್ವುನಮುಳಸಿಂಗರಾರ್ಯಂ ಪ್ರೌಢೋಕ್ತಿಯೊಳ್ ಸಾಹಿತ್ಯಪರಿಪಾಟಿಯಿಂ ಪೇೞ್ದನದಂತೆನೆ :—॥೫೦

ಜನನಂ ಪಾರ್ಥಿವವರ್ಷಮಾದ ಶತದಿಂ ಸತ್ಪಾರ್ಥಿವಂ ದಕ್ಷಿಣಾ ।
ಯನದಿಂ ದಕ್ಷಿಣಚಕ್ರವರ್ತಿ ಸಮಸಂಧಿಪಾರ್ಶ್ವಯುಜ್ಮಾಸದಿಂ ॥

ದನುಬದ್ಧಾಶ್ವಚನುಊಸಹಸ್ರನವದಾತಂ ಪಕ್ಷವಾದೊಪ್ಪಿದಿಂ ।
ದನಿಶಾಭ್ಯಂತರಬಾಹ್ಯಶುದ್ಧನೆನಿಕುಂ ಬಾಲಂ ನೃಪಾಲೋತ್ತಮಾ! ॥೫೧

ಶ್ರಿವೈಷ್ಣವೋತ್ತರಂ ತಿಥಿ ।
ಯೀವಿಧದಿಂದಖಿಲವೈಷ್ಣವೋತ್ತಮನಕ್ಕುಂ ॥
ಭಾವಿಸೆ ವಾಸರವೈಂದವ ।
ಮೀವಗೆಯಿಂದಖಿಲಚೇತನಾಹ್ಲಾದಕನುಂ ॥೫೨

ಗ್ರಹಧರ್ಮವುಣ್ಮಲೀಸಿಸು ।
ಬಹುಕನ್ಯಾದನಮೀವನೆಂದೆಳೆಗಱಪಲ್ ॥
ಗ್ರಹಪತಿ ತಾನುಂ ಕನ್ಯಾ ।
ಸಹಿತಂ ದಾನಾರ್ಥಿಭಾವವನುಂ ಬಿತ್ತರಿಕುಂ ॥೫೩

ಮುಂ ಭರತನಹುಷಮುಖರೀ ।
ಕುಂಭಿನಿಯುಂ ಪೊರೆದ ತೆಱದಿನಿಮುಗು ಮಿಗೆಯು ॥
ಜ್ಜೃಂಭಿಸುಗೆಂದಭಿಷೇಚಿಸೆ ।
ಕುಂಭಂಗೊಂಡಿರ್ಕುಮಮೃತಧಾಮನುಂ ಸೋಮಂ ॥೫೪

ತಾಂ ಗೆಯ್ವದಲ್ಲದಾಶ್ರಿತ ।
ರಿಂ ಗೆಯ್ಸುಗುಮೀಕುಮಾರನಖಿಲಮಹಾದಾ ॥
ನಂಗಳನೆಂದಭಿನಯಿಸೆ ಸ ।
ಮಂಗಳಬುಧಕವಿಗಳೀಱ ಮೆಱೆವರ್ ತುಲೆಯುಂ ॥೫೫

ಜೀವಿಪುದೆ ಗೌರವಂ ತನ ।
ಗೀವಿಧದಿಂ ಮಿಥುನಭಾವವೊಂದಿರಲೆಂದಾ ॥
ಜೀವಂ ವೃಷಕರ್ಕಟಮು ।
ಧ್ಯಾವಸ್ಥಿತನಾದ ನೆವದೊಳಳ್ಕಂ ತೋರ್ಕುಂ ॥೫೬

ಮಂದಂಗಿನ್ನುರುವಧಿಕಾ |
ರಂ ದೊರಕದು ಕಾಣಿಮೆಂದು ತಿಳಿಪುವ ತೆಱದೊಳ್ ||
ಮಂದಂ ಮೇಷಾಧಿಷ್ಠಿತ |
ನಿಂದಾಗ್ರಹಪತಿಕುಮಾರನಾಗಿಯುಮಿನಿಕುಂ ||೫೭
ತರ್ಕಿಸೆ ತಾಮಸ*ರ್ಗಿಂ ಭೃಶ |
ಕರ್ಕಶಗತಿಯುಲ್ಲದಿಲ್ಲವೆಂದಱಿಪುವವೋಲ್ ||
ಕರ್ಕಟದೊಳ್ ಮಕರದೊಳಂ |
ದಿರ್ಕುಱಿಗೊಂಡಂತೆ ರಾಹುಕೇತುಗಳೆಸೆವರ್ ||೫೮
ಪ್ರೌಢನಳಸಿಂಗರಾರ್ಯಂ |
ರೂಢಿಗೆ ಬರ್ಪುಂತುಟುಸಿರ್ದ* ಬನ್ನಣೆನುಡಿಯೊಳ್ ||
ಪ್ರೌಢಿಗೆ ಪಿಱ್ಗತ್ತುರಸಂ |
ಗಾಢೋತ್ಸುಕನಾದನಾತ್ಮಜಾಲೋಕನದೊಳ್ ||೫೯
ಸ್ತಿಮಿತತೆವಡೆದಿರ್ಪ ಕಡಲ್ |
ಸಮೀರಣನಿನುರ್ಕುವಂತೆ ಸಮಯಂಬೇೞ್ದು ||
ರಮಣೀಕರವೇತ್ರಲತಾ |
ಭ್ರಮಣದೆ ತಡೆಯೊಡೆದುದರಸನೊಡ್ಡೋಲಗದ ||೬೦

ವ|| ಬೞಿಕ್ಕೆ ರಾಯಂ ಮಿತಪರಿಜನದೊಡನಂತಃಪುರಮಂ ಪೊಕ್ಕು ಸೂಲ ಮನೆವಾಗಿಲ ಪೊಱಜಗಲಿಯೊಳ್ ಮಿಸುಪ ಮಿಸುನಿಮಂಚದೊಳ್ ಕುಳ್ಳಿರ್ದನಂ ||೬೧

ಆದರದೊಳ್ ತೋಱಿದಳಂ |
ದೈದೆ ಪೊಸಂತಿಲ್ಗೆ ಸನಿಯದೊಳ್ ಕುಳ್ಳಿರ್ದ ||
ಕೈರ್ದಳದಮೇಲೆ ಮಲಗಿಸಿ |
ಮೇದಿನಿಯೊಳ್ ನೆಗೞ್ದ ನೇಸಱನೆ ಪಸುಮಗುವಂ ||೬೨

ತಳತಳಸುತ್ತೆ ಕೆಂಪಡರ್ದು ಮೂಡಿದ ಪುಣ್ಣಮೆಚಂದನಂತೆಯುಂ |
ನಳನಳಸುತ್ತೆ ಬಂದ ಸುರಭೂಜದ ಚಂದಳಿ*ರ್ದೊಂಬೆಯಂತೆಯುಂ ||
ಕಳಕಳಸುತ್ತೆ ಕರ್ವುಡುವಿನುಣ್ಮಿದ ಕೋಕನದೌಘದಂತೆಯುಂ |
ತೊಳಗಿತು ಚೆಂಬೊಗರ್ವಿಸುಗುವೀಮಗು ಕೆಂಗುಡಿಬೊಂಬೆಯಂತೆಯುಂ ||

ಮುಂಬಿಸಿಲಿಂ ಮೊಳತುದೊ ಮೋಹಂ |
ಕೆಂಬರಲಿಂ ಕಡೆದು ಕಂಡರಿಸಿ ತೆಗೆದುದೊ ತಾಂ ||
ನೆಂಬಿನಮೊಳಗ್ಗೈಕಾಲ್ಗಳ್ |
ತುಂಬಿಸಿತಾರಾಜವರನ ರಾಗಾಂಬುಧಿಯಂ ||೬೪

ಕಿಱುಗುರುಳೊಳಿ ನೀಳ್ದ ನಸುಮುಚ್ಚಿದಗಲ್ದ ಸೋಗೆಗಣ್ |
ತುಱುಗೆವೆ ತುಂಬಿತೋರ್ಪೆಳಗದಂಪರೆಬಿರ್ಚಿದ ಮುದ್ದುಮುದ್ದುವಾಯ್ ||
ಮೆಱೆ*ವೆರ್ದೆ ನೀಳ್ದ ಕೈ ಚವರಬಜ್ಜಗತಾವರೆಸಂಕುಬಾಮ್ಕರಂ |
ಮಿಱುಗುವ ಕೆಂದಳಂದಳೆದ ನಂದನ ಕಂದನೆ ಬಂದು ನಿಂದನೋ ! ||೬೫

ವ.| ಇಂತು ನಿಟ್ಟಿಸಿದರಸಂಗೆ ||೬೬

ಅಲುಗದ ತುಱುಗೆವೆ ನಟ್ಟೆಡೆ |
ದೊಲಗದ ಕಡುನೇಹದಿಟ್ಟ ಒಟ್ಟೈಡುವನೀರ್ ||
ತಲೆಯೋಱುವ ಸಾತಸದಿಂ |
ನೆಲೆದೋಱಿದುವಂ ದು ನಂದನಾಲೋಕನದೊಳ್ ||೬೭

ಕರಗಿದ ಚಿತ್ತವೊತ್ತರದ ಪೊಂಪುಳಿ ತಣ್ಣಸುಸೇದೆ ಕಂಪವೊಂ |
ದಿರೆಯು*ಲರ್ಗಣ್ಗಳಿಂ ನುಡಿಸುವಂತೆಯುಮುಣ್ಮಿಱ ತಳ್ಕೆಗೆಯ್ದು ಮೆ ||
ಯ್ಸಿರಿ ತಣಿವಂತೆ ... ಸೊದೆಯುಂ ಸವಿದಿಂಟುವಂತೆಯುಂ |
ಹರವಸದಿಂದೆ ಕಣ್ಗೊಳಿಸಿದಂ ಸುಕುಮಾರನನಾಕುಮಾರನಂ ||೬೮

ಕೆಳೆಯುನಳಸಿಂಗರಾರ್ಯಂ |
ಬಳೆದಳೆದಾನಂದ ... ... ... ||

ಳೆಳೆಗೊಂಡದಿಟ್ಟಯಿಂ ಕ |
ಣ್ಗೊಳಸುತೆ ಕುಱುಪಿಟ್ಟನಖಿಲಶುಭಲಕ್ಷಣಮಂ ||೬೯
ಅರೆವಿರಿದ ಕೆಱೆಯ ಕೆಂದಾ |
ವರೆಯುಂ ಕೆಳೆಗೊಂಬ ಮೊಗದೊಳೆಮೆದುಱುಗಲ ಸಾ ||
ಲ್ಕಱದೆನಿಸಿ ... ... ... |
ವರಮಿರ್ಕುಮಿದೊಂದು ರಾಯಲಕ್ಕಣಮಕ್ಕುಂ ||೭೦
ಈವಾಯ್ದೆಱೆಯಿಂದೊಯ್ಯನೆ |
ತೀವುವ ಕಪ್ಪುರದ ತಾವರೆಯ ತನಿಗಂಪಂ ||
ಭಾವಿಸಿ ಸವಿವಂತಿದೆ ಪೊಸ |
ಠೀವಿಯೊಳೊಂದಿನಿಸುಮೀರ್ದ ನಾಸಾವಂಶಂ ||೭೧
ನೀಳ್ದಸೆವೆಳಗೈಕಾಲ್ಕಳ್ |
ತಾಳ್ದಿರ್ಪುವು ಕೆಂದಳಂಗಳೊಳ್ ನಲ್ಗೆಱೆಯಂ ||
ತೂಳ್ದು ತುರುಷ್ಕರನನಿಬರ |
ನಾಳ್ದಳೆಯಂ ಬಾಂಗವಂತು ನೋಱಿಂ ಬರಿಸಂ ||೭೨
ಕುವರಂ ಪುಟ್ಟಿದನೆಂಬು |
ತ್ಸವಮಿದು ದೇವರ್ಗೆವಾತ್ರಮಲ್ತೀಯಮಗಂ ||
ಭುವನದ ಜನಮನಿತರ್ಕಂ |
ವಿವರಿಸೆ ಸಚರಾಚರಕ್ಕಮಕ್ಕುಂ ಮಿಕ್ಕುಂ ||೭೩

ವ|| ಅದೆಂತೆನೆ :—||೭೪

ಪಿಂ ಪಳರಾಯುರಂದುಡಿಸಿದಾಜಸವಟ್ಟೆಗಳುಟ್ಟು ಮಾಸಿ ಪೋ |
ಯ್ತಿಂ ಪಡೆವಂ ಬೆಳರ್ತು ಬೆಲೆವೆತ್ತಸೆವೊಳ್ಜಸವಟ್ಟೆಯಂ ಕರಂ ||
ಸೊಂಪಿಡಿದಿರ್ಪಮಿನ್ನದಱನೆಂಬವೊಲೀದೆಸೆವೆಣ್ಗಳೆಣ್ಬರುಂ |
ಪೆಂಪಿನೊಳಿರ್ಪರೀಪರಿಯೊಳುಜ್ಜ್ವಲನಿಷ್ಕಲುಷಪ್ರಸನ್ನೆಯರ್ ||೭೫

ವ|| ವೃತ್ತಂ ||೭೬

ಮುಂಬರಿದಿರ್ಕುಮಾರಕನರಾತಿನರಾಧಿಪದುರ್ಗವರ್ಗಮಂ |
ಕೊಂಡೆಡೆಯಲ್ಲಿ ಮುಂತೆಯೆ ನಗಾಹತಿಯಂ ಕುಪಿತೀರ್ಪನೆಂದು ಹ ||
ರ್ಷಂಬಡೆದರ್ಘ್ಯರಾಗ್ನಿ ಬಲದಿನಿಸಂ ಪೋಗೆಸುತ್ತಿದಂತೆ ಕೈ |
ಕೊಂಬುದು ಹವ್ಯಮಂ ಬಯಸಿಯುಣ್ಬ ಸುರರ್ ತಣಿವೇಳ್ವವಂತೆವೋಲ್ ||೭೭

ಕಳೆದೊಳಗಡಹಂ ಪೊಳೆಗಳ್ |
ತಿಳಿವುವು ಸಜ್ಜನರ ಮನಕೆ ಸರಿಸಾಟಿಯೆನಲ್ ||
ತೊಳಗಿದುವು ಪೆರ್ಚಿಯುಜ್ಜಲ್ಗಳ್ |
ತಳತಳಸಾತ್ವಿಕಮನೊದೆವ ಸತ್ತ್ವದ ತೇಜದಿಂ ||೭೮

ಫಳಕಂ ತ್ರಿವರ್ಗಮುಂ ಕೈ |
ಗೊಳಕುಂ ತತ್ಸಾಧನಂಗಳುಂ ಸಂಗತಿಯಿಂ ||
ತಿಳಿವಲ್ಕೆಂದೀರೀತಿಯು |
ನಳವಂ ಕಡೆಗಣಿಸಿತತ್ತು ಬೆಳಸುಂ ಪುಲಿಸುಂ ||೭೯

ಅನ್ಯರನೆಣಿಪನೆ ಕೇಡಿಯು |
ನನ್ಯಾಯನಪ್ರೇಮದಿಂದಮುದಿಸಿದನಿರ್ಗಳ್ ||
ಧನ್ಯಮಿದಾದುದು ಭುವನಂ |
ಧನ್ಯರೊಳಂ ಧನ್ಯರಾದವಾವುಂ ತಾವುಂ ||೮೦

ವ|| ಇಂತಿವನ ಪ್ರಗಳ್ತಿಗೇಳ್ದು ||೮೧

ಅಂತವ್ವರಂ ಪೆರಸರಸಂ |
ಸಂತಸಮಂ ತಾಳ್ದಿ ತೊಳ್ದು ಪಿತೃಗಳ ಋಣಮಂ ||
ದಂತಿಹಯಗೋಧನಂಗಳ |
ತಿಂತಿಣಿಯಿಂ ತಣಿಸಿ ಪೌರ್ವರಂ ಮನ್ನಿಸಿದಂ ||೮೨

**ವ|| ಬಳಿಕ್ಕಂ ಮೌಹೂರ್ತಿಕರ ಕೂರ್ತು ಪೇಳ್ದ ನಲ್ವಗಲೊಳ್ ||೮೩**

ಮುನ್ನೆಸಗಿದ ನಾಂದೀಮುಖ ।
ಮನ್ನೆಗಮಾಪಿತೃಋಣಕ್ಕೆ ಬಡ್ಡಿಗೆ ಸರಿಯಾ ॥
ಪಿನ್ನೆಗಮೆಸಗಿದೊಡೈಸೆಮ ।
ಗಿನ್ನಪ್ಪಭ್ಯುದಯಿಕಂಗಳನ್ವರ್ಥಂಗಳ್ ॥೮೪

ವ॥ ಎಂದೆಣಿಸಿ ನಾಂದೀಪೂರ್ವಕವಾಗಿ ನಾಮಕರಣಮಂ ನಿರ್ವರ್ತಿಸುತ್ತೆ ॥

‡ ಜನನನುರಂಜಿಕುಂ ಪ್ರಕೃತಿಯೆಲ್ಲಮನಾಕತದಿಂದೆ ರಾಜನೀ ।
ಭುವನದೊಳ್ ... ... .... ... ॥
... ... ... ... .... ಯೊ ।
ಪ್ಪವ ಚಿಕದೇವರಾಜವೆಸರೀಕ್ಷಣಮನ್ವಿತವಾಯ್ತು ಸಾಧಕಂ ॥೮೫

ಮಱೆವಾಂಪಿವೊಡಂ ವ್ಯೆಮೆಯಿ ।
ನಱುತರುಪೇಂದ್ರಾವತಾರ [ನೆಂದು ಪೊಗೞ್ವರ] ...
ನೆಱೆದಿರ್ಪ ನಿಖಿಲಗುಣದಿಂ ।
ಕುಱುತೆಱೆವರ್ ಚಿಕ್ಕದೇವರಾಜಾಹ್ವಯದಿಂ ॥೮೬

ವ॥ ಬೞಿಕ್ಕೆ ಳಸಿಂಗರಾರ್ಯನ ಕುವರಂಗಂ ರಾಯ-ಗುವರನ ಕೆಳತನಕ್ಕೆ ತಕ್ಕ ಪೆಸರನಿಡಲೆಳಸಿ ॥೮೭

ಗರಿಮೆಯುಮಾಪ್ಪುಂ ಸಿರಿಯುಂ ।
ದೊರೆಗುವರರನ ಕೆಳೆತನಕ್ಕೆ ಬೇೞ್ಪ ಗುಣಂಗಳ್ ॥

---

‡ "ಆವೆಸರ ಪುರುಷಂ ಪರಿಸೆ ಸಕಲಲೋಕರಂಜಕನಾದುದಱಿಂ ರಾಜನೆಂದುಂ, ಆವಗಂ ಲೀಲೆಯುಂ ಗೆಲ್ಲಮುಂ ಬಳ್ಳದತೆಯುಂ ಪೊಗೞ್ತೆಯುಂ ಸಂತಸಮುಂ ಸೊರ್ಕುಂ ಕಳೆಯುಮುಂಟಾಗಿರ್ಪುದಱಿಂ ದೇವನೆಂಬುಂ, ಇವನಿತುಂ ಚಿಕ್ಕಂದಿನೊಳೆ ಆಸಂಗೊಡುವುದಱಿಂ ಚಿಕ್ಕದೇವರಾಜನೆನಿಸುಗುಮೆಂದುಂ, ಉಪೇಂದ್ರನವತಾರಮಪ್ಪುದಱಿಂ ಸಾಜಮಾದ ಪೆಸರೆಂದುಂ ಬಿಜ್ಜೆವಳರ್ ಪೆರ್ಗಳಂಗೊಳ್ವರ." ಪು. ೫೭ 6-12

ಎಂದು ಚಿಕದೇವರಾಯ ವಂಶಾವಳಿಯಲ್ಲಿದೆ.

ನೆರೆದಿರೆ ನಿರಿವಿಸಿ ರಾಯಂ ।
ತಿರುಮಲೆಯಾ [ರ್ಯಾಖ್ಯೆಯಂ ಪಲಂ] ಸೆಗೞಿಸಿದಂ ॥೮೪

ವ॥ ಬಱಿಕ್ಕೆ ದಿನಕ್ರಮದೊಳ್ ದಿಟ್ಟದೋಸಂ ತಟ್ಟದಂತೆರಡುಂ ಮೆಲ್ಗಲಂಪುಗಳೊಳಟ್ಟ ಕಾಡಗೆಬೊಟ್ಟುಂ ಕೊರಲೊಳ್ ಕಟ್ಟಿದ ಪಂಚಾಯುಧಮುದ್ರಾಂಕಿತಮಾದ ಕಿಱುದಾಲಿಯುಂ ಪಣೆಯೊಳ್ ಕಾಪುಗೊಳಿಸಿದ ನಾರಾಯಣನ ಕಪ್ಪುರದ ಪಾವರೇಣುಬಿಂದುವುಮಂದಂಬಡೆಯೆ, ತನ್ನೊಳ್ ತಾಂ ನೆವವಿಲ್ಲದೆ ನಗುತ್ತುಂ ಮುದ್ದುಕಾಲ್ಗಳಂ ನೀಡುತ್ತುಂ ಮಲಂಗಿರುವ ಪಾಂಗಂ, ತನ್ನ ಕುಲವರ್ಧನನಪ್ಪ ಕುಮರನಂ ಕಾಪಿಡಲ್ಕೆಂದು ರಾಗಾವಿಲನಪ್ಪ ಚಂದಿರನೆಯ್ದೆ ತಂದನೆಂಬ ಸಂದೆಯಮಂ ಸಮನಿಸುತ್ತೆ ನಿಲ್ವಿಯುಂ ನಿಲ್ಕದಂತೆ ಜೋಲ್ವ ರನ್ನ ಸೆಂಡನಂಡಲೆವುದರ್ಕೆಳಮಳ್ಳ್ದೋಳ್ಗಳನಡಿಗಡಿಗೆ ನೆಗಪುವುದಱಿಂದುದಯಾಚಲಶೃಂಗದೊಳ್ ಪತಂಗಮಂಡಲಕ್ಕೆ ಕೈನೀಡುತ್ತಿರ್ಪ ಮಱಿಸಿಂಗಮಂ ಪೋಲ್ವ ಚೆಲ್ವಂ, ಅಂತಪುರದ ಕಾಂತೆಯರೊರ್ವರೊರ್ವರ ಕೈಯಿಂದೊರ್ವರೊರ್ವರಾಂತೊಳ್ವಾಂಸೆಯುಂ ತೆರ್ದೆಯೊಳಂಬುಗೊಳಿಸಿ ಸಂತಸದೊಳ್ ನುಡಿಸುವಿನಮಲರ್ದು ಬಿಸುಪದಂತೆಸೆವ ಚೆಂಬಾಯಿಂದಿನಿರಸದಂತೆ ನಸುಜೊಲ್ಲು ಸುರಿಯೆ ತೊದಳ್ನುಡಿವ ಸೊಗಸಂ, ಪಳಿಕಿನೆಡೆಗೋಡೆಯ ಮಱೆಯೊಳಿರ್ಪರಸಂಚೆವೆಱಿಯುಂ ಪಿಡಿಯಲ್ಕೆ ನೀಡಿದ ಕೈ ಸೋಂಕದೊಡಂ ಪಡಿನೆೞಲು ಕಂಡಂಜೆಯುದಿತ್ತಲುಮತ್ತಲುಂ ಪರಿಯುತ್ತಿರೆ ತಾನುಂ ಪರಿಪರಿದು ಬೆಂಬಿಡದೆ ಮೊಗಸಾಲೆಯ ಪ್ರಾಂಜಗಲಿಯ ಪಚ್ಚೆಗಂಬದ ಮುಂಬಾಗದೊಳ್ ಬಜ್ಜರಂಗಳಂ ಸಮೆದಂಚೆವೆಱಿಯಂ ಪಿಡಿದೆಱೆವೆಂದು ಕೋಟಲೆಗೊಂಬ ಸಂಭ್ರಮಮಂ, ಬೆಮರ್ಗಣ್ಗಳಂ ನುಣ್ಕೆಯ್ಯುಂ ಸಣ್ಣಗಾಲ್ಗಳುಮಾಗಿ ತನ್ನ ಕೊರಲ ಕಿಱುಗಂಟೆಯ ದನಿಗೆ ಬೆರ್ಚಿದಂತೆ ನಿಂದೆಡೆಯೊಳ್ ನಿಲ್ಲದೆ ನೆಗೆವೆರಲೆಯ ಮಱಿಯ ಪಿಂತಣೆರಡುಂ ಕಾಲ್ಗಳಂ ಪಿಡಿವೆನವಧಟಂ ಕಂಡು ದಾದಿ ಕಮುಬಿನೊಳ್—ಬೇಡಬೇಡೆಲೆ ಕಂದ ಬೇಡಬೇಡೆನ್ನಾನೆ ಬೇಡೆನ್ನ ಮಱಿಸಿಂಗವೆ ಬೇಡೆಬೇಡೆನುತ್ತೆ, ಬಱಿವಿಡಿ...

ತುಱುಬಿನೊಡಮುವಳ ಕೈಗೆ ಸಿಲ್ಕದಂಗಳದೊಳ್ ಬಳಬಳಸಿ ಬವಣೆಗೊಳಿಸಿ ಬಳಲಿಸುವ ಬಲ್ಪಿಂ, ಎರಡಂ ನಿಟಿಲದೊಳ್ಗಳಂ ನಿಱಿದಿ ಕರೆವ ಪಲವುಂ ರಾಯುರ ಸಾಲ್ಗಳಂ ಕಡೆಗಣ್ಗಳಂ ಕಡೆಗಣಿಸಿ ಕೌತುಕದಿಂದೊಂದೆ ಸಾಲೊಳ್ ಕವಿವ ದಿವ್ಯಾಸ್ಥಾನದ ಪಲವುಂ ಜನದ ನೇಹದಿಟ್ಟಿಗಳನಿಸದ ಪೂವಟೆವೊಳ್ ನನೆದೊಡ್ಡ್ಯಾದೊಳ್ ತನ್ನ ರನ್ನದ ಸಿಂಗವಣೆಯುಂ ಸೇಱು ನಿಲ್ವಿಂದವುವಂ ಸಿರವಿಸಿ ರಾಯಂ ||೮೯

ಇಂದ್ರನನೆಡೆಗೊಂಡಂ ಮನು ।
ಜೇಂದ್ರಂ ವಿಭವಂಗಳಿಂದೆ ತೊಳಗುವ ಚಿಕದೇ ॥
ವೇಂದ್ರನ ಸೊಬಗಂ ನಿಟ್ಟಿಸ ।
ಲಿಂದ್ರನ ದೊರೆಗೆಳಸಿದಂ ದೃಗಾವಳಿಯಿಂದಂ ||೯೦

ವ|| ಇಂತು ಸಂತಸದೊಳ್ ಬಳೆವ ರಾಯುಗುವರನೊಸನೆ ಕಳೆಗುವರನು ಮೊಣೆವೊಟ್ಟಲೊಳ್ ಬಳೆವ ತಳರ್ನಡೆಯೊಳಂ ತೊದಳ್ನುಡಿಯೊಳಂ ಬೞಿಸಂದು ಪಲವುಂ ಬಾಲಲೀಲೆಯೊಳಂ ಪಡಿಸೆಱುಂತಿರ್ಕುಂ ||೯೧

ವ|| ಇವರಿರ್ವರ್ಗಂ ರಾಯಂ ||೯೨

ಆವೃತನಿಜವರ್ಣೋಚಿತ ।
ವೈದಿಕಸಂಸ್ಕೃತಿವಿಶುದ್ಧಗಾತ್ರನಿರ್ಮಲಚಿ ॥
ತ್ತಾದರ್ಶದೊಳನುಗೊಳಿಸಿದ ।
ನಾದರದಿಂದಖಿಲಕಲೆಯನಧ್ಯಾಪಕರಿಂ ||೯೩

ಓದಿಸುವರೊರ್ವಗಲ್ ಬಂ ।
ದಾದರದಿಂ ರಾಯುಗುವರನಕ್ಷರವಂ ಕ ॥
ಲ್ತೋದುವ ಸೈಸಂ ಪ್ರರುಳಂ ।
ಭೇದಿಸಿ ಪೇರ್ವರವನರಸನೊಳ್ ಬಣ್ಣಿಸಿದರ್ ||೯೪

ಆನಾವಕ್ಕರವನಾವತಾಣದೊಳದೆಂತೆಂತು ಪ್ರಯುಕ್ತಂಗಳಂ ।
ದಾವಿರ್ಭಾವಮನಾಂತುವಂತು ಸೊಬಗಿಂಪುಂಬಕ್ಕಾರಣಂಗೆಯ್ದು ಮ ॥
ತ್ತಾವರ್ಣಾವಲಿಯೊತ್ತರಂಬಡವೆ ನಿಡುಂ ಚಿತ್ತಂಗೊಳ್ಳುದಂ ।
ತಾನಂ ಶ್ರೀಚಿಕದೇವನಂತೆ ಪುರುಳೆಲ್ಲಂ ಪ್ರಾಣ್ಮನಂತೋದುವಂ ॥೯೫

ಪದಪದವಕ್ಕರಕ್ಕರದ ವಾಕ್ಯದ ವಾಕ್ಯದ ವಿಶ್ರಮಂ ಲಯಂ ।
ಪುದಿದ ಬೆಡಂಗಿನಿಂ ಪುರುಳದಿರ್ದ ಪಳಕ್ಕನೆ ವಿಂಚಿ ತೋಱ ತ ॥
ತ್ತದುಚಿತನಾಗಿ ಸೊಂಪು ಕಳೆ ಪ್ರೌಢಿಮೆಯುಣ್ಮುವ ನಚ್ಚಾರಂಗಳಂ ।
ದೊವವೆ ರಸಂಗಳೊಡಚಿನಡೆವೋಂದುವನಿ ಚಿಕದೇವಭೂವರಂ ॥೯೬

ಪುರುಳಂ ಕೇಳ್ದದರೊಳ್ಪನೂಹಿಸಿಯುಮೊಪ್ರಹಗೆಯ್ದು ತಾತ್ಪರ್ಯದಿಂ ।
ದಿರವಂ ಸಿಚ್ಚತಗೊಂಡದಂ ಮಱೆಯದಿರ್ಪಾಧಾರಣಾಶಕ್ತಿಯುಂ ॥
ಪರರಂ ಬೋಧಿಸುವಾಪಿನೊಳ್ ತಿಳಿಪಿನಂ ಸಂಕ್ಷೇಪವಿಸ್ತಾರವಿಂ ।
ಯೊರತುಂ ಮಾರ್ಗಮುಮನಾರ್ಗಮುಮೆಂಬೆ ಚಿಕದೇವೇಂದ್ರಂಗೆ ಕೈವಂದಪೋಲ್॥

ಮನಗೆ ಪುರುಳನೆಯ ಭಾವಂ ।
ರಸವೊಸರ್ವಿನವೊಳ್ಪಿನಿಂ ವೇಱುವ ಚೆಂದಂ ॥
ಪ್ರಸಯಿಸೆ ಪುರುಳಂ ಪೆರ್ಚಿರ್ದಂ ।
ದೆಸಕಮುಮಿ ಚಿಕ್ಕದೇವರಾಯಂಗಕ್ಕುಂ ॥೯೮

ತರ್ಕಂಗಲಿಸುವರುಂ ಮಿಗೆ ।
ಪೆರ್ಕಳದಿಂ ರಾಯನೆಡೆಗೆ ಪೊರ್ದಿರ್ದ ಚುವರಂ ॥
ತರ್ಕಾತರ್ಕಿಯೊಳೆಸೆಗುವ ।
ಕರ್ಕಶನಿತಿಕಾತಿಸೂಕ್ಷ್ಮಮತಿಚಾತುರ್ಯಂ ॥೯೯

ಅಳವಿಂದಂ ತಳ್ತ ಪೂರ್ವೋತ್ತರವೆರಡೞ ಪಕ್ಷಂಗಳೊಳ್ ಯುಕ್ತಿಜಾಲಂ।
ಗಳ ಸಾರಾಸಾರಮಂ ಸೋದಿಸಿ ಕಳೆದದಱೊಳೊಪ್ಪಿಟ್ಟನೊಳ್ಗಟ್ಟಿಯುಂ ಕೂ ॥

ತೆರ್ಗಳಕೊಂಡಿಪ್ಪೊರ್ಗಳ್ಪನಿಂ ತತ್ತ್ವದ ನೆಲೆಯಂಋತಾವಮಾರ್ಗದಿಂವತ್ತಲಿತ್ತಲ್ ।
ಪ್ರೊಳೆದೆತ್ತಂ ಪ್ರೋಗವಂತಿರ್ಕರ್ಗಳಸುತೆ ಬುಧರಂ ತರ್ಕಿಕರುಂ ಚಿಕ್ಕದೇವಂ ॥೧೦೦

ಪೆರ್ಚದೆ ಕುಂದದೆ ಪವಣೊಳ್ ।
ಮುರ್ಚಿದ ಸದ್ಯುಕ್ತಿಯಿಂದೆ ವಾದಿಗಳೆರ್ದೆಯಂ ॥
ಬಿರ್ಚಿಪ ಚಿಕದೇವೇಂದ್ರನ ।
ಚರ್ಚೆಗೆ ಮಾಱಾಂಪ ವಿಬುಧರಾರೊಳರಿಳೆಯೊಳ್ ॥೧೦೧

ವಾದಿಯ ವಾಗಾರಂಬಟೆಯ ।
ನಾಪರಿಸದೆ ಯುಕ್ತಿವಲ್ಲಿಗಳ ತಾಯ್ವೀರಂ ॥
ಭೇದಿಪ ಚಿಕದೆ ವೇಂದ್ರನ ।
ವಾದದೊಳಿದಿರಾಂಪ ಶಾಸ್ತ್ರವೇದಿಗಳೊಳರೇ ॥೧೦೨

ಓದಿಸಿ ಮುಂಬಗಲದನೊಡ ।
ನಾದಿನವಪರಾಹ್ಣದಲ್ಲಿ ಕೇಳ್ವೆಗಂ ಮ ॥
ತ್ತೋದಿಸುವೊಡನ ಬಗೆಯಂ ।
ಭೇದಿಸಿ ಪಲ್ಲಟಿಸಿ ತೋರ್ಕುಮೀಚಿಕದೇವಂ ॥೧೦೩

ಪೌರಾಣಿಕರ್ಕೃತಾದು ಮ ।
ಹಾರಾಜಂಗಂದು ಬಿನ್ನವಿಸಿಪರ್ ಕುಮರಂ ॥
ಸಾರಪುರಾಣಾರ್ಥಂಗಳ ।
ನಾರಯ್ದವಧರಿಪ ವಿಮಲಮೇಧಾಬಲಮುಂ ॥೧೦೪

ಕೇಳ್ದು ಪುರಾಣದರ್ಥಮನಿತಂ ಬಗೆಯೊಳ್ ಬರೆದೊಂದು ಚೆಂದದಿಂ ।
ತಾಳ್ದು ವಿವಿಕ್ತಿಗೆಯ್ದು ಚತುರನ್ವಿತವಿಂಶತಿತತ್ತ್ವಭೇದಮಂ ॥
ತೂಳ್ದು ಪರಸ್ಪರಸ್ಫುಟವಿರೋಧವಿಪರ್ಯಯಸಂಶಯಂಗಳಂ ।
ಕೇಳ್ದರ ಚಿತ್ತಮಂ ಚಿಗುರಿಕುಂ ಚಿಕದೇವನ ಜಾಣದೆಂತುಟೋ ! ॥ ]

... ... ... ... |

... ... ... ... ||

... ... ... ... |

......ಚಿಕ್ಕದೇವನಜೀವಂ ಗಡ! ಕೈದಳವಲ್ಲಿ ನೆಲ್ಲಿನ್ತೋಲ್ ||೧೦೬

ಮನುಗಳ ವಂಶದೊಳ್ ನೆಗೞ್ದ* ರಾಯರ ವೈಭವಮುಮನಾಳ್ದ ಕಾಲಮುಂ |
ಜನಪದಭೇದಮುಂ ನೆಲವೊಲಿಬ್ಬಗಳನಿತ್ತುಮಗೆಲ್ದುದಿಂತಿದೆಂ ||
ಜನಿತಜರೊಳೆಂಬುದುಮುಂ ಮುಕಯುಮೆಲ್ಲಮುಮಂ ನೆನೆದಿರ್ಕುಮಾವಗಂ |
ಮನುಚರಿತ್ರೊಳನ್ನರುಂಟೆ ಚಿಕದೇವನಿಳೋದಿತದೇವದೇವನೇ ||೧೦೭

ಕಲಿಯುಗವಾಳ್ದ ರಾಯರಿವರೀ ಪೆಸರೀ ಕುಲಮೀ ಪೊಲಲ್ಗಳೀ |
ನೆಲದೆಡೆಯೀ ದಿನಂ ನೆಗೞ್ದ* ಕಜ್ಜಮಿದೀ ಪೊಳೆ ಪುಣ್ಯಭೂಮಿದೇ ||
ಗುಲವನೆಗಟ್ಟಬಟ್ಟಗಳವೆಂಬುದನೀ ಚಿಕದೇವನಾಹಿಮಾ |
ಚಲರಘುವೀರಸೇತುವರೆಗಂ ತಿಳಗುಂ ವನವಾಚ್ಚಿಯೆಂಬಿನಂ ||೧೦೮

ಕೇಳ್ವರ್ ಪುರಾಣಭೇದಮಂ |
ನಾಚ್ವರ್ ಸಂಶಯದ ಮಡುವಿನೆಡೆಯೊಳ್ ಪಲರುಂ ||
ತಳ್ವದೆ ತತ್ತ್ವದ ನೆಲೆಯುಂ |
ಪೇಳ್ವಾವೆ ಚಿಕದೇವನಂತೆ ಪೆಱರೇನೊಳರೇ ||೧೦೯

ಹರಿಸಂ ಮಿಗೆ ಚಿಕದೇವಂ |
ಸರಸಾಗ್ರಣಿ ವಿದ್ವಿಶೇಷರಾಜಿ ಪ್ರಿಯೆಜೆಗಳಂ ಮುಂ ||
ಬರಿಸು ಕಟ ದೆವರಾಯನ |
ಚರಣಕೆ ಬಯಕಾಱರಂದು ಬಣ್ಣಿಸಿ ನೆಗೞ್ದರ್* ||೧೧೦

ಜಾಣಂ ಬಿಣ್ಣೆಯನೀ ಕುಮಾರಚಿಕದೇವಂ ಬಾಜಿಸುತ್ತಿರ್ಪಿನಂ |
ಪ್ರಾಣಂ ಬಂದುದು ಜಂತ್ರ್ಯಬಿಣ್ಣಿಗೆ ಜಸಂ ಪೊಂಗಿತ್ತು ಸಂಗೀತಕಂ ||

ಪೂಣಲ್ಕಾಪುದು ದೇವಗಾನವಿರವಿಂಗಾವೆಲ್ಲರುಂ ಬಲ್ಲವಿಂ ।
ಪಾಣಿಪ್ರಾಂತವನೊಳ್ಕೊಂಡುದಿಂ ಪರಿಚಿತಪರಾಯತ್ತ ವಾಣಿಯುಂ ವೀಣೆಯುಂ ॥

ಜಂತ್ರಂಬಾಜಿಪರಿಂದು ಜಾಣ್ಕೆವಳೆದರ್ ಪ್ರಿಯದೊಂದಿದರ್ ಗಾಯಕರ್ ।
ತಂತ್ರೀವಾದ್ಯದ ರಕ್ತಿ ಪೆರ್ಚುತ್ತಿದಿಳಿದರೊಳ್ ಗಾಂಧರ್ವಮಾರ್ಗಕ್ರಿಯಾ ॥
ತಂತ್ರಂ ತಳ್ತಿಪ ಪಿಂತೆ ದೈವತಕರಾಯುಂ ಸತ್ಯದೊಳ್ ಕೇಳ್ದು ಗಾ ।
ನಂತ್ರೈಲೋಕ್ಯಕೆ ಪರ್ವಿದತ್ತು ಚಿಕದೇವಂ ವೀಣೆಯಂ ಕೊಳ್ವನಂ ॥೧೧೨

ಅನಿತುಂ ತಂತ್ರಿಗಳಂ ಪವೆಂದೆ ದನಿಯುಣ್ಮುತ್ತಿರ್ಪಿನಂ ಕೂಡೆ ನು ।
ಣ್ಣನೆ ಕಂಬಟ್ಟಿನೊಳೊಟ್ಟಿ ಪೊಂಜರಿಗೆಯಂ ಪೊಲ್ಗಂ ಪ್ರತಿಸ್ಫೂರ್ತಿ ಕ ॥
ಮ್ಮನೆ ಕಸ್ತೂರಿಯ ಕಂಪಿನಂತೆ ಸವಿಗಂ ನಾದಂ ಸ್ವರಪ್ರಕ್ರಮಂ ।
ಘನರತ್ನಾವಳಿಯಂತೆ ತೋರ್ಪ ಚಿಕದೇವಂ ಬಾಜಿಕುಂ ವೀಣೆಯಂ ॥೧೧೩

ತಪ್ಪನೆ ವೀಣೆವಾಪದೊಳಗಾಡುವ ವಾಣಿಯ ಸೂಪ್ರಸ್ವರಂ ।
ಕೊಪ್ಪಿನರಲ್ದುಡುಂಬೆಗೆ ಕಡಂಗುವ ತುಂಬಿಯ ಬಂಬಲೊಳ್ಸ್ವರಂ ॥
ತಪ್ಪದೆ ಕೈಯೊಳಪ್ಪ ಗಿಳಿಮಾತಿನ ಸುಣ್ಣದವಿಂತಿವೆಲ್ಲಮಂ ।
ಮುಪ್ಪುರಿಗೊಂಡವೊಲ್ ಮೊಳಗುಮೀ ಚಿಕದೇವನ ವೀಣೆಯಿಂಚರಂ ॥೧೧೪

ಬಗೆವಿಡಿದಾಹತಾದಿಗಮಕಂಗಳನೊಯ್ಯನೆ ವೀಣೆಬಾಜಿಪ ।
ನ್ನೆಗಮಿರಪುಣ್ಕೆ ಪಾಯ್ವ ದನಿಯೊಳ್ಪೆ ಬೆಡಂಗು ತೊಡಂಕಲೊಯ್ಯರಂ ॥
ಬಿಗಿಪ ನಯಂ ಪೊಡಸರ್ಲುಗು ಚಾರಿಗಳೊಂದಿರೆ ತಾಣತಾಣದೊಳ್ ।
ನೆಗ*ಳ್ದಿಪ ತಾನವಿಂತು ಚಿಕದೇವನ ಕೈವೆರಲೊಳ್ಪದೆಂತುಪೋ ॥೧೧೫

ಪವಣಱಿತಾತು ಬಾಜಿಸುವಿನಂ ಚಿಕದೇವನ ವೀಣೆಯಿಂಚರಂ ।
ಕಿವಿಪೊಡೆಪೊಕ್ಕು ಪಾಯೆ ಹೃದಯಾಬ್ಜಕೆ ಚಿತ್ತನಿವೃತ್ತಿ ಮೊತ್ತಬೊಳ್ ॥
ಸವಿಸು ತದಾತ್ಮಭಾವಮನೊಡಂಬಡಲೀಸಕಲಪ್ರಪಂಚಮಂ ।
ಸವಿವನಿಯೋದಮೋ ಸಮೋಪದೆಂಬ ವಿಕಲ್ಪದೆ ತೋರ್ಪುದನ್ನೆಗಂ ॥೧೧೬

ಪೊರೆಯೆಡೆದೆತ್ತಿ ಬೇಗೆರ್ಗನೆಗಳಂ ಕಳೆದೊಳ್ಪ್ರಸದಾಳಿಗರ್ಬುರ್ವವೋ |
ಹರಿಸಿ ಪೊದಳ್ದ ಪೊಚ್ಚಪೊಸಜೇನ್ಗೊಡನಂ ಪಿೞಿವಂವು ಸೋರ್ವಜೇಂ ||
ಜರಿ ಸವಿಮಾಂಬಳಂ ಪದೆದು ಕಾಸಿ ಪದಂಬಡೆದಿಟ್ಟಬಟ್ಟವಾಲ್ |
ದೊರೆವಡೆವೀಕುಮಾರಚಿಕದೇವನ ತಾನದ ಷೋಡಶಾಂಶಮಂ ||೧೧೭

ಬಸೆದು ಕುಟುಕಿ ಮಾಂಬಳದೊಳಂಜರಿಯಂ ಗಿಳಿಯೀಂಟುವಂತಿರಾ |
ಗಸಕಿದಿ*ರ್ವಾಯ್ತು ಬಾಯ್ದೆಱೆದು ಚಾದಗೆ ಮುಂಬನಿಯುಣ್ಬ ಪಾಂಗಿನಿಂ ||
ಸಸಿಗದಿ*ರ್ಗಳ್ಳಿಯಂ ಕದು*ರ್ಕಿ ಕರ್ಚಿ ಚಕೋರಿ ಕಡಂಗಿ ಪೀರ್ವವೋಲ್ |
ರಸಿಕರುಮುಣ್ಬರಿಂ ಸವಿವರೀಚಿಕದೇವನ ಗಾನತಾನಮಂ ||೧೧೮

ಅಲುಗದ ದಿಟ್ಟಿಯಾಡದೆವೆ ಸಂತಸದಿಂ ತೆಱೆದುರ್ಕುವಾಲಿನಿಂ |
ರಲೆವಡದಂಗಮುರ್ಕಳಿಪ ಪೊಂಪುೞಿ ನುಣ್ಬನಿಗೊಂಬ ತಣ್ಬಮರ್ ||
ಮಲ*ರ್ದೆ*ರ್ದೆ ಮಣ್ದಗೆಯ್ಮೆಗಳ ಮೆಯ್ಮೆಱೆವಾಕರಣಂಗಳಿಂದೆಯುಂ |
ನೆಲೆಸೂಗವಾಂಪರಿಂದು ಚಿಕದೇವನ ವೀಣೆಯ ನುಣ್ಬರಂಗಳಂ ||೧೧೯

ಈ ವಿಗೋಪರ್ಯ್ಯಸೆ ಮರುಳೊಂದಿವರಿಂದು ಲಯಸ್ವರಜ್ಞರಾ |
ಸಂಪದೊಳಿರ್ದ ಬಾಳ್ದರಮಮಾ! ಚಿಕದೇವನ ಕೈಮೆಯೆಂತುಟೋ ||
ಕೆಂದಳಮಿಂದು ವೀಣೆಯೆಡೆಯಾಡುವುದಲ್ತಿದು ಹೃತ್ಸರೋಜದಾ |
ನೆಂದದ ನಾಡಿಯುಂ ತೊನೆದು ಸೋಲಿಸಿ ಗಳ್ಕನೆ ಸೊರ್ಕನೀಱಿಕುಂ ||೧೨೦

ತರುಗಳ್ ಪೊಂಪುೞಿವೆತ್ತು ಮರ್ತ್ಯರಿರವಂ ಪೊತ್ತಿರ್ಪುವಾಮರ್ತ್ಯರುಂ |
ಮರವಟ್ಟಿತ್ತರುಬೃಂದದಂತೆಸವರೀಭೂಜಂಗಳಂ ಮರ್ತ್ಯರಂ |
ದೊರೆಗೊಂಬರ್ ಸುರರೀಯೆರಳ್ಬಗೆಗಳಂ ಶ್ರೀಚಿಕ್ಕದೇವೇಂದ್ರನೊಳ್ |
ಸರಿಯಂದಿಂದಿನ ಗಾನದೊಳ್ಪು ಪೆಱತಾಯ್ತಾವೇಣುವುಂ ಬೀಣೆಯುಂ ||೧೨೧

ಅನಿವನನ್ನಿನ್ನ ನೀಯೆಡೆಯಿದೀವಗೆವೊೞ್ತಿದು ಗೆಯ್ಮೆಯಿಂತಿದೆಂ |
ಬೀನೆಲೆಯೊವಳೊಳ್ ತಿಳಿವುದೋಱದೆ ಲೆಪ್ಪದ ಬೊಂಬೆಯಂತೊಡಲ್ |

ತಾನಿವು ನಿಕ್ಕೆ ಮೆಯ್ಮುವಿರ್ಗಳಿಂದೆ ಸಚೇತನರಂತೆ ತೋರ್ಪರೀ |
ತಾನವಿತಾನಮುಂ ಪಡೆದು ಬಾಜಿಪಿನಂ ಚಿಕದೇವಚಂದ್ರಮಂ ||೧೨೨

ಮೊಳೆವೆಳದಪ್ಪ ಕೂಡೆ ಕೊನರೇೞುವ ನಿಳ್ವ ಪೊದಳ್ವ ಪೊಣ್ಮುವು |
ರ್ಕಳಸುವ ಕೊಂಕುಗೊಳ್ವ ಪೂವೊರಣಗೊಂಬ ತೊೞಲ್ವ ತೇಲ್ವ ಚಂ ||
ಚಳಸುವ ಭಾವವಾಂತೆಡೆಗಳೊಳ್ ನೆಲೆನಿಲ್ವ ಬೆಡಂಗಿನಿಂದಮೇಂ |
ಬಳೆದುವೊ ಬಾಣಿನೋಟದವೊಲೀಚಿಕದೇವನ ತಾನದೊಳ್ಪುಗಳ್ ||೧೨೩

ಪೊಱಬಿನದಂಗಳಿಂ ಕಳೆಯೆ ಪ್ರೌಢ*ರ್ದೆಯೊಳ್ ಪದಮಿಾಱಿ ಕೂಡೆ ಮೆ |
ಯ್ಮಱವೆಯೊಳೇಲ್ವ ಪೊಂಪುಱ ಬಿಪುರ್ತದಿರೊಂದಿದ ಕೆಂಪಳಿಂ ಬೞ ||
ಲ್ದೆಱಗುವ ದಿಟ್ಟ ಬದ್ದ ತವಕಂಗಳೊಳೈಕಸೆ ಮೇಲೆ ಪಾಯ್ದು ಪೊ |
ಕ್ಕೈಱಯುಳ ತಕ್ಕಯಂತೆ ಬಿಗಿಪಿಂ ಸೊಗಸುತ್ತಿದೆ ಬೀಣೆಯಿಂಚರಂ ||೧೨೪

ಅಡಕಕೆ ನಿಲ್ಲದಾಸೆ ಮನಮುಂ ಪಿಡಮೆಟ್ಟುವ ಲಜ್ಜೆ ಮತ್ತೆ ಮೆ |
ಲ್ಗೆಡಪುವ ಮೋಹವೊತ್ತಿ ಕಡೆಗಟ್ಟುವ ಬಿನ್ನಣದೊತ್ತರಂಗಳಿಂ ||
ಮಿಡುಕುವಿನಂ ಮನಃಪ್ರಿಯನುಮೆಕ್ಕಟಿಸಂದಿದಿ*ರ್ವಂದು ನಿಂದೊಡಾ |
ಮಡದಿಯ ಚಿತ್ತವೃತ್ತಿಯವೊಲೇೞ್ತರಮಾದುದು ತಾನಸಂಚಯಂ ||೧೨೫

ಬಕುಳದ ಪೂವಿನೊಳ್ ಪ್ರಸತು ತಣ್ಣನೆ ಪೊಣ್ಮುವ ಕಂಪಿನಂತೆ ನಾ |
ಸಿಕೆಗೆಳಮುಕ್ಕಳೊಳ್ತೊದಳನಲ್ ಕಿವಿಗೋಪಳ ತಕ್ಕೆವೋಲ್ ತೊವ ||
ಲ್ಗೆ ಕಣಿಯೊಳಾಯ್ದ ರನ್ನವೊಲಕ್ಷಿಗೆ ಜಿಹ್ವೆಗೆ ಜೇನವೊಲ್ ಸಮ |
ಸ್ತಕರಣವೃತ್ತಿಯಂ ತಣಿಸುಗುಂ ಚಿಕದೇವನ ತಾನದೋಜೆಗಳ್ ||೧೨೬

ಬಂದೇ ತಾನಮಿದಿನ್ನಿದರ್ಕೆ ಜಗದೊಳ್ ಜೋಡಿಲ್ಲವೆಂಬನ್ನಮಾ |
ದೊಂದಂ ಮಿಾಱುವುದೊಂದು ತಾನಮದುಮಂ ಮತ್ತೊಂದಿದಾಮಾನುಷಾ ||
ನಂದಂ ನೂರ್ಮಡಿಯಾಗಿ ಪೆರ್ಚೆ ಪರಮಾನಂದಾಂತಮಾದಂತಿರಾ |
ನಂದಂ ಬಟ್ಟದು ಬಾಜಿಪಂದು ಚಿಕದೇವಂ ತಾನಸಂತಾನಮಂ ||೧೨೭

ಸೊದೆಯುಂ ಸಪ್ಪೆಯೆನಿಪ್ಪ ತಾನದಿರವಂ ಕೇಳ್ದಾರಸಾವೇಶದೊಳ್ |
ಪದಪಿಂ ಮೆಯ್ಯೆಡೆಗೆಲ್ಲಮುಣ್ಮಿಡಲುಮಾಕಂಠಂ ಮಗುೞ್ದೀಂಟಲುಂ ‖
ಕದುಬಿಂ [ತಳ್ಕಿಸಿ ಕೇಳಲುಂ] ನುಡಿಸಲುಂ ಮುಂಡಾಡಲುಂ ಪೂಣ್ದಪರ್ |
ಚತುರರ ಚಾತುರಿಯೇತೆಱಂ ಫಲಿಕುಮುನ್ಮಾಧೀನಮಾಗಲ್ ಮನಂ ‖೧೨೮

ಸಂಗೀತಾಂಬುಧಿಪಾರಗರ್ ಪಲರುಮೀತಾನಂಗಳಂ ಬಲ್ಲರೇ |
ಮುಂ ಗಂಧರ್ವರುಮಂತೆ ಮೇಣಱಿತೊಡಾಗಾಂಧರ್ವಶಾಸ್ತ್ರಂಗಳೊಳ್ ‖
ಸಾಂಗಂ ಪೇೞದೆ ಮೂಣ್ಬರೇ ನುಡಿವುದೇನಾವೇಣುಗೋಪಾಲಕಂ |
ಸಂಗೀತಾಮೃತಮೀಪೆನೆಂಪು ಚಿಕದೇವಾಭಿಖ್ಯೆಯುಂ ತಾಳ್ದಿದಂ ‖೧೨೯

ಮುನ್ನಿಲ್ಲದ ಸಾಹಿತಿಯೊಳ್ |
ಗನ್ನದೊಳಂದೊಗೆದ ಮುನಿಯಿನುಣ್ಮಿದ ತೆಱದಿಂ ‖
ಮುನ್ನಿಲ್ಲದ ಸಂಗೀತಮು |
ಮಿನ್ನೆಗಮಾಚಿಕ್ಕದೇವನಿಂ ನೆಗೞ್ದುದು ದಲ್ ‖೧೩೦

ರಾಗಾಲಾಪನಲಾಲಸಂ ನವನಪ್ರೋತ್ಫುಲ್ಲಾನನಾಂಭೋರುಹಂ |
ದ್ರಾಗಾಮೀಲಿತಲೋಚನಂ ಪ್ರತಿಕಲಪ್ರೋದ್ಭಿನ್ನರೋಮಾಂಚನೊ ‖
ಲ್ದೀಗಳ್ ಶ್ರೀಚಿಕದೇವನಾತ್ಮಭುಜಸಂಶ್ಲೇಷಂಗಳಂ ಲಾಲಿಸಲ್ |
ಬೇಗಂ ಬೀಣೆಯುಮಾಕಳಾವತಿ ಕಳಾಲಾಪಂಗಳಂ ಪೊಂಗುಗುಂ ‖೧೩೧

ಸುಗುಣೋದ್ರೇಕಕೆ ಕೂರ್ತು ವೀರಚಿಕದೇವಂ ಬೀಣೆಯುಂ ಲೀಲೆಯಿಂ |
ತೆಗೆದುತ್ಸಂಗದೊಳಿಟ್ಟು ನೇವರಿಸಿ ವಕ್ಷೋಜಂಗಳೊಳ್ ಸಾರ್ಚಿಸೆ ‖
ಳ್ಳುಗುರಿಂ ತಾವಱಿತಾಂಕಿ ಮೇಳದಿರವಂ ರಾಗೋಚಿತಂಗೆಯ್ದೆನಂ |
ಬಗೆದಾಘ್ರಾಣಿಸಿ ಗಲ್ಲಮಂ ಕಳರವಪ್ರೋದಾರಂ ಸರಂದೋಱುಗುಂ ‖೧೩೨

ಪರಿವಿಡಿಯೊಳ್ ಚಳಕಂ ಮಿ |
ಯ್ಪಿರಿಯೆಟ್ಟುಱು ತಾಣದೊಳ್ಪು ಪೆಣಗುವ ಸ್ವರಂ ‖

ದೊರೆಕೊಂಡ ಕುವರನಿರವಂ ।
ನಿರವಿಸಿದರ ಗರುಡಿಯೊಳಂಜರವನೀಪತಿಯೊಳ್ ॥೧೩೩

ಕಟ್ಟಿದ ದಟ್ಟಿ ಕೈಬಳದ ಪೊಂಗಿಱುಗಟ್ಟಿಗೆ ರನ್ನಬಂದಿಗೋಲ್ ।
ಬಟ್ಟತೆನಿಪ್ಪ ಚೊಲ್ಲೆಯದ ಮಟ್ಟಿಯ ಸೀಸಕಮಿಟ್ಟನಾವುದೊ ॥
ಳೆಬ್ಬಿಟ್ಟ ಮನಂಗೊಳಲ್ ಗರುಡಿಗೈಮೆಯೊಳೀಚಿಕದೇವರಾಯನಂ ।
ನಿಟ್ಟಿಪ ಜಟ್ಟಿಗರ್ ಪೆಱವರಲ್ಲಿಯ ಚಿತ್ರರಬೊಂಬೆಯೆಂಬಿನಂ ॥೧೩೪

ಗರುಡಿಯ ಗೆಯ್ಮೆಯೊಳ್ ಬಳಸು ಬಟ್ಟತೆನಲ್ ಬಿಗಿಪೇಱು ತಳ್ತ ಮೆ ।
ಯ್ಸಿರಿ ಕರುವಿಟ್ಟ ಕಂಡರಸಿ ಕುಂದಣದಿಂ ಸಮೆದಿಟ್ಟ ತಿಟ್ಟಮಂ ॥
ದೊರೆಗೊಳ್ ರೇಖೆ ನೃತ್ತದಿರವಂ ನೆರಪೊಂದಿರೆ ದೇಸೆಯಿಂ ಶ್ರಮಂ ।
ಬೆರಸುವನೀಕುಮಾರನೊಸೆದಂದಿನ ನಂದನ ಕಂದನಂದದಿಂ ॥೧೩೫

ಬಿಡಯದೆ ಕಂಭವೇಱಿ ಬಱಿಕೈ ಬಿಗಿಪಂತಿರೆ ಸುತ್ತಿ ಪಾಯ್ವ ಬಿ ।
ಣ್ಣೊಡೆಗಳನುರ್ಬಿ ಪರ್ಣಿಯವೊಲ್ ಬೆಣೆಗೊಂಡು ಪೊದಳ್ದ ತೋಳ್ಗಳಂ ॥
ಕಡುಲುಳಿವೆತ್ತು ಲಾಗಿಸುವ ಮೆಯ್ಯುಡಿಮಿಂಚಿನವೋಲ್ ಪಳಂಚೆ ಸಂ ।
ಗಡಿಸಿದ ಜಟ್ಟಿಗರ್ ಗರುಡಿಗೋವಳನೀನೃಪನೆಂದು ವಂದಿಪರ್ ॥೧೩೬

ಮೊಡಿಯೊಳೂಱಿ ನಿಂದಡಿಯೊಳರ್ಕಲಕಂ ಮುಱಿಗೊಂಬ ಮುದ್ದುಮೆಯ್ ।
ಗಾಡಿಯೊಳತ್ತಲತ್ತಲೊಲೆವೊಳ್ಮೃಗಮಾಂತಿರೆ ಸಂಗರಂಗಳಂ ॥
ನೀಡುವ ತೋಳ್ಗಳಂ ನಟಿಪವೋಲ್ ಚಿಕದೇವನೃಪಾಲಕಂ ಶ್ರಮಂ ।
ಮಾಡುವ ಸೃಷ್ಟಿನಿಂ ಕಳೆಗುಮೆಲ್ಲರ ದೃಷ್ಟಿ ಮನಶ್ರಮಂಗಳಂ ॥೧೩೭

ಮುಲೆತಿದಿರಾಂತು ನಿಲ್ವ ಚಿಕದೇವನ ಚೆಲ್ವಿಕೆಗೊಂಡ ತಾಣಕಂ ।
ಕಲೆದಳೆದೊಳ್ಮೃಗಂ ಕಮುಬದೆಬ್ಬಿಱೊಳೊಬ್ಬತಮಿರ್ಪ ದಿಟ್ಟ ಪೊಂ ॥
ಬಲಗೆಯ ಸಾರ್ಚಿದಂತೆವೊಲಿದಿರ್ಚಿದ ಪೇರೆರ್ದೆಯಂ ನಿರೂಪಕರ್ ।
ಬಳಿಯಿಸಿ ಚಿತ್ತದೊಳ್ ನೆನೆವರಾಮಧುರಾಪುರಮಲ್ಲಲೀಲೆಯಂ ॥೧೩೮

ಅನು ಮಱಸಿಂಗಮಂಗವಿಸಿಯಮಂಡಲೆದಾನೆಯನೆಱ್ಗಪಂತೆವೋಲ್ ।
ತನುತನುಸೋಂಕೆ ಮೞ್ಗುಸುಗುಮಿರ್ಪುಡಿಮಾವಡಿಬಲ್ಮೆಗಾಱರಂ ॥
ಜನಮಱಿವಂತುಟೇೞ್ತರದ ಬಿತ್ತರಮೆಯ್ಗಳ ಪೆರ್ಮೆವೆತ್ತರಂ ।
ಘನಬಿರುದಾಂಕರಂ ಗರುಡಿಕಾಱರನಾ ಚಿಕದೇವಭೂವರಂ ॥೧೩೯

ಗುಱುತಿನ ಹೋಂತಕಾಱಗಳೊಳೋರ್ವನನೊಪ್ಪೆಚಿತಾಣವಿಕ್ಕುವಂ ।
ದುಱುಬಿನೊಳೊತ್ತಿ ಪಾಯ್ದುಱು ಮೊಗಂಗೆಡಿಸಲ್ ಜಗಜಟ್ಟಿಯೊರ್ವ ಕ ॥
ಟ್ಟುಱದೊಳದಿರ್ಪದಂ ಹರಿಯೊಳಂದಿನ ಮುಷ್ಟಿಕಮಲ್ಲಸೋದರಂ ।
ಬಿಱುಬಿನೊಳೆಟ್ದು ಮೇಲ್ವರಿದವೋಲ್ ಚಿಕದೇವನೃಪಾಲಚಂದ್ರನೊಳ್ ॥೧೪೦

ದಂಡೆಯನೊಡ್ಡಿ ನಿಂದು ಪರಿದಿತ್ತಲುಮತ್ತಲುಮೊರ್ವ ಚೆಲ್ವದಿಂ ।
ಚಂಡಿಸಿ ಮುಂದುವಾಯೆ ಚಿಕದೇವನವಂ ಕವಿದೊತ್ತಿ ಪುಯ್ಯ ಕೈ ॥
ಕೊಂಡವನಂ ತುಡುಂಕೆ ಮುಳಿಸಿಂದವನುಂ ಮೊಱದೆಟ್ದು ಮುೞ್ಗಮುಂ ।
ದಂಡೆಯನಾಱ ಮೇಲ್ವರಿವನೇಂ ಬಗೆಸೊರ್ಕಿರೆ ಮುಂದುದೋರ್ಕುವೋ ॥

ಭರದೊಳ್ ತುಂಬುಗ್ಗೆಯಿಡಲದಂ ಮಧುರೇಶನ ಪಟ್ಟದಾನೆಯಾ ।
ತ್ತರಿಸಿದ ಸಿಗ್ಗವಕ್ಕಣೆಮ ತಪ್ಪಿಸಿದೋಜೆಯೊಳಂದಿನಿತ್ತುವೋ ॥
ಸರಿಸಿ ಮೊಗಕ್ಕೆ ಕೈದಳಮನೊಡ್ಡುವಿನಂ ಮಿಗೆ ಮೂಗು ನೆಱ್ಗ ಬಿ ।
ಣ್ಸರೆಯೊಡೆದುರ್ಕಿ ಪಾಯ್ದು ಪೊನಲಿಟ್ಟುದು ಮಲ್ಲನ ನೆತ್ತರೆತ್ತಲುಂ ॥೧೪೨

ಕರಯುಗದಿಂದೆಯುಂ ಕಡುಗಿ ಕಣ್ಗಳ ಮುಚ್ಚಿ ಮಡಲ್ವ ಮರ್ಬಿನಿಂ ।
ಹರವಸಗೊಂಡು ಡೆಂಢಣಿಸಿ ಪಿಂದೆಗೆದಾಱದೆ ನೆಮ್ಮಿ ಗೋಡೆಯಂ ॥
ತರಹರದಿಂದೆ ಕಣ್ದೆಱೆದು ನಿಟ್ಟಿಸುತೀ ಚಿಕದೇವರಾಯನಂ ।
ಮುರರಿಪುಗೆತ್ತು ಮತ್ತೆಱಗಿದರ್ ಪದಪದ್ಮಕೆ ಬಲ್ಲರೆಲ್ಲರುಂ ॥ ೧೪೩

ನಡುಗರುಡಿಯ ಪೂಜೆಯುವಂ ।
ಕಡುಚಳಕದ ಕೈಮೆಗಾಱತೊಳ್ ಬಿರುದಾಂತಂ ॥

ಪಡಿಬರಿಸೆ ಮೆಯ್ಯ ಬಲ್ಪಿಂ |
ಸಡಗರದಿಂದೊರ್ವನೊರ್ವ ಮಾರ್ವಲೆತೆರ್ಪಂ ||೧೪೪

ಚಲದಿಂದಂ ಸರಿಬಿತ್ತರಂದಿದು ಮೆಯ್ಮೆಯ್ಸೋಂಕಿ ನಿಲ್ವಂಪು ಪೆ |
ರ್ಚಲದಿಂದೊತ್ತಲಪಂ ಜಲಕ್ಕನೊಲೆದೊಳ್ಪಂ ಚಿಕ್ಕದೇವೇಂದ್ರನೊ ||
ರ್ಕಲನಂ ಸಾರ್ವಿನವುಬುರ್ಕೊರ್ಬಿನೊಳವಂ ತಾಂ ತಾನೆ ಬೇರರ್ತ ತಾಟ್ |
ನೆಲದೊಳ್ ಬಿಣ್ಪೊಲಾರ್ವ ಬಿಣ್ಣನಱವೇ ಬಲ್ಲಿತ್ತಲಾ ಬಲ್ಪಿನಿಂ ||೧೪೫

ನೆಗೆದೊಯ್ಯಾರದುರಾಟವೇೞ ಬಿಗಿದಾತಂ ಕುರ್ಗಿ ಬಪರ್ನ್ನವಾ |
ಬಿಗಿಪಂ ತಾನೆ ಸಡಿಲ್ಚಿ ವೀರಚಿಕದೇವಂ ನೋಟಕರ ಮೆಚ್ಚೆ ಮೆ ||
ಲ್ಪಗೆಯೊಳ್ಡಕ್ಕರೆಯೊಂಟೆ ಮಂಡಿಕರಲಂ ಸಿಸಂ ಕರಂ ಕೊಂಕಸಂ |
ಮಗುೞ್ದಂತಿಗತಿಭೇದದಿಂ ತೊಡಕಿ ತೋರ್ಕುಂ ಸಾಧಕಪ್ರೌಢಿಯಂ ||೧೪೬

ಬಂದಂ ನೋಂಕಲೊಡಂ ತೊಡಂಕಿ ಪೊಱತೊಂದಂ ಚಿಕ್ಕದೇವೇಂದ್ರನಿಂ |
ತೊಂದೊಂದಾಗಿ ಗತಿಪ್ರಭೇದಮನಿತಂ ತೋಱುತ್ತೆ ನೆಜಾರ್ವನುಂ ||
ಸಂದಾಗಳ್ ಪಿಡಿವಾಂಕೆ ಡೊಕ್ಕರದೊಳಾತಂ ಕಸಂಗೊಂಡು ಮ |
ರ್ಬಿಂದಂ ಮೆಯ್ಮಱದಾರ್ಪ್ರಗೆಟ್ಟೆಱಗಿದಂ ಕೈಸನ್ನೆಯಂ ಮಾಡುತುಂ ||೧೪೭

ಪ್ರೌಳಿಮ್ಮೆಸಿರಿಯಿಮನೋರಥದ ಪೆಂಪಿರೂಪಮಿರೇಖೆಯಿ |
ಕಳೆಯಿಸಾಧಕದೊಪ್ಪಮಿಪದುಳಮಿಸುಯ್ಯಾನಮಿಬಲ್ಮೆಯಿ ||
ಉಳಯಿಬಿನ್ನಣಮಿಯೊಡಲ್ಕಣಿತಮಿಯಿಂಡಾಳಮಿಬೀರಮಿ |
ಚಳಕಂ ಶ್ರೀಚಿಕದೇವನೊಳ್ ಮೆಱಗುಮಿಗಳ್ ಪಿಂ ಮುರಾರಾತಿಯೊಳ್ ||

ನಂದನನೆಳವೆಯ ಕೈಮೆಯು |
ನಂದಿಂಗಾನಂದಗೋಪನಾಲಿಸಿ ನಲಿವಂ ||
ಕುಂದದೆ ದೊಡದೇವನುಮಾ |
ಚೆಂದದೊಳಂದಿಂಗೆ ಭೇದಮೇನಿರ್ದರೊಳಂ ||೧೪೮

ವ॥ ಇಂತು ಕುಮಾರನ ಗುಣಂಗಳಂ ಕೇಳ್ದರ್ಕೆ ಬರ್ಪಾನಂದದ ಪೆರ್ಚಳದೊಳಚ್ಚರಿವಟ್ಟಾಳೋಚಿಸಿದಂ :—ಈ ಕುವರಂ ಜಗದೀಶ್ವರನಾದುದಱಿಂ ಜಗಮನಿತರ್ಕಂ ಇವನ ಗುಣಶ್ರವಣದಿಂದಾನಂದವೊಂದೆ ತೆಱನಾದೊಡಂ ದಯೆಯಿಂದಿವನೆನ್ನೊಳ್ ಬೞಯಿಸಿದ ಪಿತೃಪುತ್ರಭಾವಸಂಬನ್ಧವಿಶೇಷದಿಂದಾನನ್ದಮನಧಿಕಮಾಗಿರ್ಪುದು ॥೧೫೦

ಗುಣಮೊದವಿದ ವಸ್ತುಗಳಂ ।
ಗುಣಜ್ಞರೆಂ ನಲಿಯದಿರ್ಪರೇ ತಮಗವಱೊಳ್ ॥
ಪೆಸೆಗೊಂಡಿರೆ ಸಂಬಂಧಮು ।
ಮೆಣಿಸುವರಾರದಱನಪ್ಪ ಸಂತಸದೊಳ್ಪಂ ॥೧೫೧

ಮುಗಿಲೀಸಸಿಯಿಂ ನೇಸಱ ।
ನೊಗೆಗುಂ ಸೊಗಮಿಲ್ಲ ಜಗಕಮಾದೊಡಮೇಂ ಚಾ ॥
ದಗೆ ತಣ್ಬು ಸುಗದಿ*ರ್ಪಕ್ಕಿಗೆ ।
ಬಗೆಗೊಳಿಪಾನಂದದಿರವದಗ್ಗಳಮಲ್ತೇ ॥೧೫೨

ಅವನಿಯನಂದಾಳ್ದಂ ಭಾ ।
ರ್ಗವನೆನೆ ಪೆರ್ಚಳಿಸಿ ಪಾರ್ವರುಕುರ್ವುದುಂ ರಾ ॥
ಘವನೇೞ್ಗದಳೆದನೆನಿಸಲೆ ।
ಮ್ಮವರುಂ ಪೇೞುವುದುಮುಚಿತಮೆನಿಸಿದುದೀಗಳ್ ॥೧೫೩

ವ॥ ಶ್ರೀಮನ್ನಾರಾಯಣಂ ಸರ್ವಜ್ಞಂ ಸರ್ವಶಕ್ತಿ ಸಕಲವಿದ್ಯಾಪ್ರವರ್ತಕನೆಂದು ತಿಳಿದಿರ್ದೊಡಮೀಯವತಾರದೊಳ್ ಬಿಜ್ಜೆಗಲ್ತಂ ನಯಂಬಡೆದಂ ಬೀರನೆನಿಸಿದಂ ಪೆಂಪುವಳೆದನೆಂದು ಪೇೞ್ದೊಡಮಚ್ಚರಿಯುಮಾನಂದಮುಂ ಸಂಪಣಿಸುತ್ತಿದೆ. ರಕ್ಷ್ಯರಕ್ಷಕಭಾವಂ ಮೊದಲಾದ ಪಲವುಮದೃಷ್ಟಸಂಬಂಧಂಗಳತ್ತಣಿಂದೀಪುತ್ರಭಾವರೂಪಮಾದ ದೃಷ್ಟಸಂಬಂಧಮೇ ಪ್ರೀತಿ

ವಿಶೇಷಕಾರಣಮಾದುದಱಿಂ ಶ್ಲಾಘ್ಯಮಾದುದು. ಅದಱಿಂದೈಸೆ ಶುಕವ್ಯಾಸ ಪರಾಶರಾದಿಗಳುಂ ತಮ್ಮ ತಮ್ಮ ಋಷಿಜನ್ಮಮಂ ಕಡೆಗಣಿಸಿ ಕುಂದಕದಂಬಗೋಪಿಕಾದಿಜನ್ಮಂಗಳನೆಳಸಿದರ್. ಅದಱಿಂದಾನುಮೆನ್ನ ಕುಲದೇವತೆಯಂ ಬುವಂ ಕೂರದೆ ಕುವರನೆಂದೆ ಕೊಂಡಾಡುವೆನೆಂದು ನಿಶ್ಚಯಂಗೆಯ್ದು ಸಂತಸಮಿರ್ಪಿನಂ; ಬೞಿಕ್ಕಾರಾಯುಗುವರನೊಡಲೊಳೆಳಮೆಯಿನಿಸಿನಿಸುಂ ಪೆಡಂಮೆಟ್ಟೆ ಜೌವನಮುಡಿಯುಟ್ಟುದೆಂತೆನೆ :— ||೧೫೪

ತನ್ನೊಳ್ಗಣೆಯನನನ್ಯಜ |
ನಿಂ ನೆಗೞ್ಗಂ ನನ್ನಿಯೆಂದು ಚಂದಿರನೊಲವಿಂ ||
ದಂ ನಲಿವಂತಿರೆ ಕುವರನ |
ಚೆನ್ನಮೊಗಂ ಚೆಲ್ವುವೆತ್ತು ತೊಳಗಿದುದಾಗಳ್ ||೧೫೫

ತಡೆಯದೆ ನಾಲಗೆಮಾಸಿನ |
ನುಡಿವೆಣ್ಗೊಳ್ಗನ್ನಮುರದ ಕನ್ನೆಯ್ದಿಲ್ಗಳ್ ||
ಪಡಿನೆಚ್ಚಲೆಂದಿದವೊಲ್ ಕ |
ರ್ಪಿಡಿದುದು ನುಣ್ಗಲ್ಲಮೊಡನೆ ಒಪರಿಯ್ಯನೆವದಿಂ ||೧೫೬

ವಟಯಿಸಿ ಜಗದ ಕಣ್ಗ |
ಳ್ಗವಿಷಯಮಪ್ಪದರ್ಥಮಂ ಕವರ್ದಂಬದಿಲಿಂ ? ||
ಕವಿದಿನಿಸುಂ ಕೆಂಪಡದರ್ |
ಕಿವಿವರೆಗಂ ಪಾಯ್ದುವವನ ನಿಟ್ಟೆಸಳ್ಗಣ್ಗಳ್ ||೧೫೭

ಚೆಂಬಾಯ್ದೆಱೆಯುಂ ಬಂಪುಗೆ |
ಯೆಂಬಾಸೆಯಿನೊಸೆದು ಮುಸುಱಿ ಬಂಬಲ್ಗೊಂಬಾ ||
ತುಂಬಿಗಳನೆಯೊಳಮಿಸೆಯು |
ದೇಂ ಬಳೆದುದೊ ಚಂದುಮೊಗದ ಕಱಿಗೆಱೆದೊರೆವೊಲ್ ||೧೫೮

ಚಲವಿಡಿದು ಪಗೆವ್ರೊಬಿಲ್ಗಳ್ ।
ನೆಲೆವಾಗಿಲನುಡಿಯದುಱಿಯುನಿಪನೆಂಬಳ್ಕಂ ॥
ತೊಲಗಿ ಕದಂಗಳನಾಬ ।
ಲ್ವೊಲವಿಂದಿಕುವರನೆರ್ದೆಯು ನೆಮ್ಮಿದುಪು ದಿಟಂ ॥೧೪೯

ವೈರಿನೃಪಾಲರ ದುರ್ಗ ।
ದ್ವಾರಮನುಡಿವಾಗಳಪ್ಪುದಿಪು ತಡೆಯೆಂದಾ ॥
ಪೇರಗುಱಿವರದೊಳೊದವಿದ ।
ಬೇರದಿನೆಂಬಂತೆ ಪೆಂಪುವಡೆದುವು ತೋಳ್ಗಳ್ ॥೧೫೦

ಕಡುಬಿಗಿಪು ಕಟ್ಟದನ್ನಂ ।
ಬಿಡನೆಣ್ದೆಸೆಗಲ್ವ ತವಕದಿಂದೆಂದು ಭಯಂ ॥
ಬಡೆದುದು ಬಡವಾದುದು ನಡು ।
ಬಡತನವೆಂ ಪಕ್ಷವೆಳಸದಗರ್ಣೆಯುಮೇ ।೧೫೧

ಅರಾರ್ಗಮುಡಕಮಾಗದ ।
ವಾರುವರನ್ನಂಗಳಳ್ಕ ಬಸಮಪ್ಪುದಱಿಂ ॥
ದೂರುಗಳುರ್ಬಿದುವುಚಿತಂ ।
ಸೇರವೆ ಸದ್ವೃತ್ತದೆಡೆಗೆ ಸಿರಿಯುಂ ಪೆಂಪುಂ ॥೧೫೨

ಕೆಂದಳಮೊಳ್ಪವೆತ್ತ ಕಣಕಾಲ್ ಕಡುಬಿಣ್ಪೊಡೆ ತೋರಮಚ್ಚಳಂ ।
ಚೆಂದದೆ ಸಿಂಗಮಂ ಜಱಿವ ನಲ್ನಡು ಪೇರೆರ್ದೆ ನೀಳ್ದ ತೋಳ್ಗಳೊ ॥
ಳ್ಗಂದಮುರಲ್ದ ತಾವರೆಗೆ ಪ್ರೋಲ್ವ ಮೊಗಂ ನಿಡುಗಣ್ಗಳಿಂದು ಬೇ ।
ಱಿಂದಮನಾಂತು ಜವ್ವನಮನುಪ್ಪಡಿಕುಂ ಚಿಕದೇವರಾಯನಾ ।೧೫೩

ಇಂತು ಕುಮಾರಂ ಜೌವನ ।
ಮಾಂತಿರೆ ಪಿರಿಯರಸನೊರ್ಮೆಯಾಳೋಚಿಸಿ ತ ॥

ನ್ನಂತಃಕರಣದ ವೃತ್ತಿಗ |
ಳಂ ತಿಳಿದನುಮಱಿಯೆ ಕೆಳೆಯನೊಳ್ ವಿವರಿಸಿದಂ ||೧೬೪

ಎಳೆಮೆಯೊಳೋದುಗಳಂ ಕ |
ಲ್ತಳೆಯುಂ ಪೊರೆದೆಱಪರ್ಗಿ*ತ್ತು ಪಡಿಬರಿಸಿದರಂ ||
ಕಳೆಗುಂದಿಸಿ ಜವ್ವನದೊಳ |
ಗೆಳೆಯರೊಳಾಪ್ರೊಱಿಯನಿಱಿಪಿ ಬರ್ದಿನೊಳೆಸೆವರ್ ||೧೬೫

ಮುನ್ನೆಮ್ಮವರೀಪರಿಯೊಳ್ |
ಚೆನ್ನಿಸಕಂಬಡೆದು ನಡೆದರಿನ್ನೆಗಮಿನ್ನಾ ||
ನುನ್ನಡೆದಿಹಪರವೆರಡಱೊ |
ಳುನ್ನತಿವಡೆವಂತೆ ತಪಮನೊಡರಿಸಿ ನಲಿವೆಂ ||೧೬೬

ಎನ್ನೊಡವಂದಪನೆನ್ನದೆ |
ನನ್ನಿಯೊಳೆನ್ನನುಜತನುಜರೊಳ್ ಮನ್ನಣೆಯಿಂ ||
ದಿನ್ನುಂ ಲೌಕಿಕವೈದಿಕ |
ಮನ್ನಿರವಿಸು ನೆಗೞಿಸಮ್ಮ ದೊರೆತನದಿರವಂ ||೧೬೭

ವ|| ಇಂತುಸಿರ್ದ ಮಾರಾಯನ ನುಡಿಯಂ ಕೇಳ್ದಳಸಿಂಗರಾರ್ಯಂ ||೧೬೮

ಆನಿನ್ನೇನಂ ನುಡಿವೆಂ |
ನೀನಿಂ ಪಡಿನುಡಿಯವೇಡವೆಂದಿರೆ ಮುನ್ನಂ ||
ನೀನೆಣಿಸಿದಂತೆ ನಡೆವುದು |
ತಾನೆಸಗುವುದರ್ಕೆ ತನ್ನನೆೞಲಿಂ ತಡೆಯೇ ||೧೬೯

ವ|| ಅಂತು ಕೆಳೆಯನೆಂಬುದನಾಲಿಸಿ ತನ್ನನುಜಾತಂ ಕೆಂಪದೇವಯ್ಯರ ಸಂಗೆ ಪಿರಿಯರಸುತನಮನಿತ್ತು, ಅವನ ಕಾಪಿನೊಳ್ ಮಱಿಯದೇವಯ್ಯರ

ಸನನಿರಿಸಿ, ಕುಮಾರಚಿಕದೇವಯ್ಯರಸಂಗೆ ಕಿಱಿಯರಸುತನಮುಂ ಸಮನಿಸಿ, ಇವನ ಪಕ್ಕದೊಳ್ ಕಿಱಿಯಣುಗಂ ಕಂಠೀರವೈಯರಸನಂ ನಿಲಿಸಿ, ತನ್ನನಂತರಜಾತನಪ್ಪ ಸೋದರಚಿಕದೇವಯ್ಯರಸನಂ ಪಲವು ಪಗಲ್ ಅಗಲ್ದಿರಲಾಱದೆ ಬೞಿಸಲಕ್ಕೆ ಪೂಣ್ದು ತೀರ್ಥಯಾತ್ರೆಗೆ ಪೋಪಾಗಳ್ ಪಟ್ಟದ ದೇವರಾಜರಸನಂ ಕರೆದು ನುಡಿದಂ ||೧೨೦

ಆಲಿಸು ತಮ್ಮ ಚಂದ್ರಕುಲದೆಮ್ಮವರೀಧರೆಯಾಳ್ವುದುಂ ಪ್ರಜಾ |
ಪಾಲನಮೊಂದೆ ಮುಖ್ಯಫಲಮೆಂಬುದಱೊಳ್ ಕಱಿವೋಸಮೊಂದದೇ ||
ಸೋಲದೆ ಶುಷ್ಕದುರ್ವಿಷಯಭೋಗದೊಳೋವಿವರಂತುಟೆಂದು ನೀಂ |
ಪಾಲಿಪುದೆಬ್ಬಿಱಿಂ ಪಡೆದ ಮಕ್ಕಳೊಳಕ್ಕಟಿಯುಂ ಕರ್ವೆಟ್ಟಱಿಂ ||೧೨೧

ಮಱಿದೇವೈಯರಸನೊಳೇ |
ಮೞಕಂ ಚಿಕದೇವರಾಜಕಂಠೀರವರೊಳ್ ||
ತೞಸಂದದಱಿಂ ಮಿಗಿಲೆಂ |
ಬೞಕಮನೀಪ್ರಜೆಯೊಳಿರಿಸಿ ನೆಗೞಿಸು ಜಸಮಂ ||೧೨೨

ವ|| ಇಂತು ದೇವರಾಜರಸಂಗೆ ಬೆಸಸಿ ಬೞಕ್ಕೆ ತನ್ನ ಕಿಱಿಯ ತಮ್ಮನಂ ನೋಡಿ ||೧೨೩

ರಾಮನ ಪದಸೇವೆಯೊಳಾ |
ಸೌಮಿತ್ರಿಯದೆಂತು ಮಱೆಯದೇವರಸಾ ನೀಂ |
ನಾಮಾಜ್ಞೆ ನೆಗೞಿಯಣ್ಣನ |
ನೇಮದೊಳೆಡೆವಿಡದೆ ನಡೆದು ಪಡಿನೆಬಲೆನಿಸಾ ||೧೨೪

ವ|| ಬೞಕ್ಕೆ ಮಕ್ಕಳಿರ್ವರಂ ಕರೆದು ||೧೨೫

ಕೇಳೆಲೆ ಚಿಕದೇವೇಂದ್ರಾ |

ಕೇಳೆಲೆ ಕಂಠೀರವೇಂದ್ರ ಕಂದರಿರಾ ನೀಂ ॥
ಕೇಳ್ವೆಮೆಣೆಯುಗಲದಿರ್ವರು ।
ಮಾಳ್ಪಂ ಕಿಱುಪಂದೆಯಡಿಗಳ್ಗಾಗಸಿರಿಯಂ ॥೧೭೬

ಕೇಳೆಲೆ ಕಂದ ಚಂದ್ರಕುಲವಾರಿಧಿಕೌಸ್ತುಭ ಚಿಕ್ಕದೇವಭೂ ।
ಪಾಲಕ ನಿನ್ನಿನೆಮ್ಮ ಕುಲಮೋಱ್ಗೆ ಬಪುರ್ದನಿಂದು ದೇವವಿ ॥
ಪ್ರಾಳಿಗೆ ಪಾಱಿಮೇಳಯಿಪ್ಪುದಂ ಸಕಲಪ್ರಜೆಯೋಜೆದಾಳ್ದುದಂ ।
ಪೇೞ್ನದೊಂದನಾಂ ಹರಿಯು ಸಂಭವತಾರಕಿದೊಂದಸಾಧ್ಯಮೋ ॥೧೭೭

ತಂದೆಯಿನೆನ್ನಿಂದಂ ಕಿಱು ।
ದಂದೆಗಳಲ್ಕಿರ್ತುರ್ ನಿಮ್ಮನೊಸೆದೋವಿದರಾ ॥
ಚೆಂದಮನಱಿತವರೊಳ್ ಪಸ ।
ಗಂಪದವೊಲ್ ಮೆಱೆವುದಿರದೆ ಪರತಂತ್ರತೆಯಂ ॥೧೭೮

ವ॥ ಇಂತವರ್ಗೆ ಯಥೋಚಿತಮಾಗಿ ನಿರವಿಸಿ ॥೧೭೯

ಪರಿದೊಡನೆ ತೀರ್ಥಯಾತ್ರೆಯು ।
ಪರಿವಿಡಿಯುಂ ಸಾರ್ದು ಕೌಂಡಿನಿಯು ಪರಿಸರಮಂ ॥
ಪರವಾಸುದೇವನಂ ಹೃ ।
ತ್ಸರಸಿಜದೊಳ್ ಬಂದಿವಿಡಿದು ಪದುಳಂಬಡೆದಂ ॥೧೮೦

ಬಗೆದು ಚಿಕದೇವರಾಯಂ ।
ನೆಗೞಿಸಿ ಬೆಳೆವಡೆದ ತಿರುಮಲಾರ್ಯನ ಕೃತಿಯೊಳ್ ॥
ಪೊಗೞೆ ತೃತೀಯಾಶ್ವಾಸಂ ।
ಸೊಗಸಿತು ಚಿಕದೇವರಾಜವಿಜಯದೊಳಗಳ್ ॥೧೮೧

ಮಹನೀಯರಕ್ಕೆ ಪೂರ್ವರ |
ಮಹಿಯುಂ ಮಹಿಶೂರದೊರೆಗಳ್ಗನವರತಂ ||
ವಿಹತಿಯನೆಯ್ದುಗೆ ದುರಿತಂ |
ವಿಹಿತಾಚರಣೈಕನಿರತಮಕ್ಕೆ ವಿಶ್ವಂ ||೧೮೦

ಇದು ಯದುಶಿಖರಿಶಿಖರಾಭರಣಶ್ರೀಮನ್ನಾರಾಯಣಚರಣಪರಿಚರಣಪರಾಯಣ ಶರಣಾಗತರಕ್ಷಣವಿಚಕ್ಷಣ ಸಕಲಕಲಾಪ್ರವೀಣ ಬಿರುದಂತೆಂಬರಗಂಡ ಲೋಕೈಕವೀರ ಭೂರಿತುರುಷ್ಕಶುಷ್ಕವನದಾವಾನಲ ಮರಾಟಕ್ರಾಟಮೇಘಚ್ಛಟಾವಿಘಟನನಿರಾಘಾಟ ಪ್ರಳಯಕಾಲಜಂಝಾನಿಲ ಪಾಂಡ್ಯಮಂಡಲಾಧಿಪವೇತಂಡವಿಲುಂಠನಕಂಠೀರವ ಮಲೆಪ ನೃಪಮದಮರ್ದನ ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪನಪ್ರತಿ
ಮವೀರನರಪತಿ ಶ್ರೀಚಿಕದೇವಮಹಾರಾಜ ಕೃಪಾಪರಿಪಾಲಿತ
ಶ್ರೀತಿರುಮಲೆಯಾರ್ಯ ವಿರಚಿತಮಪ್ಪ
**ಚಿಕದೇವರಾಜವಿಜಯ ಮಹಾಪ್ರಬಂಧದೊಳ್**
ಶ್ರೀಮದಮೃತಾಂಬಾದೌಹೃದ ಕುಮಾರೋದಯ ಬಾಲಲೀಲಾ ಲಿಪಿಗ್ರಹಣ
ವಾಚನಾರ್ಥಗ್ರಹಣ ಶಾಸ್ತ್ರಪುರಾಣವೀಣಾಮುರಳೀಶ್ರಮ
ಯೌವನೋದಯಾದಿವರ್ಣನಂ
**ತುರೀಯಾಶ್ವಾಸಂ ಸಂಪೂರ್ಣಂ.**

ಪಂಚಮಾಶ್ವಾಸಂ.

---

ಶ್ರೀಯುಮಂ ತೊಡೆಯೊಳ್ ತೋಱಿಸಿ ।
ಬಾಯಿರವಂ ಕಂಡು ಬೆರ್ಚಿನಮರರನಂದೋಂ ।

ದಾಯಸಮಿಲ್ಲದೆ ನಂಬಿಪ ।
ಪುಯ್ಯರಸಿಂಗಂ ನೆಗೞ್ದ ಗೀನರಪತಿಯುಂ ॥೧

ಒಡಲೊಳ್ ಪೊತ್ತಪನಾವವಸ್ತುವನಹೀಂದ್ರಂ ಕಂದದೊಳ್ ತಾರ್ಕ್ಷ್ಯನುಂ ।
ನಡುವಟ್ಟೊಳ್ ಪಗಲಾಣ್ಮನೆೞ್ದ ತವರೊಳ್ ಮುನ್ನೀರ್ ಸುರರ್ ಮೌಳಿಯೊಳ್॥
ಪೊಡೆಯೊಳ್ ದೇವಕಿ ಗೋಪಿ ಸೋಗಿಲೆಡೆಯೊಳ್ ನಂದಂ ನಿಜೋತ್ಸಂಗದೊಳ್।
ತೊಡರ್ದಿರ್ಕ್ಕಾ*ಪರನಸ್ತು ವೀರಚಿಕದೇವೇಂದ್ರಕ್ಷಮಾಪಾಲನಂ ॥೨

ತದನಂತರದೊಳ್ ಸದ್ಗುಣ ।
ಸದನಂ ಮದನಂಗೆ ರೂಪಸಂಪತ್ತುಗಳಂ ॥
ಕದನಂಗುಡುವಂ ಹಿಮರುಚಿ ।
ವದನಂ ಶ್ರೀದೇವರಾಜನಾದಂ ರಾಜಂ ॥೩

ಸಲೆ ದೇವರ್ಕಳ ಸೊರ್ಕು ಪೆರ್ಕಳಿಸೆ ಪಾರ್ವರ್ಗುರ್ಕು ಪೆಂಪೇಱಿಯೊ ।
ಕ್ಕಲಿಗರ್ಗೆಸರಿ ಸೊಂಪು ಮೀಱಿ ತುಱುಗಳ್ಗೆಲ್ಲಕ್ಕೆ ಸಂತೋಷಮು ॥
ಗ್ಗಲಿಸಲ್ಕೀನೆಲನಂ ರಘೂದ್ವಹನವೋಲಾಳ್ದಂ ನಿಜಾಯುದ್ಭುಜಾ ।
ಬಲದಿಂದೀೞ್ದನನೇಕದುರ್ಗಚಯಮುಮಂ ಪೋೞ್ದಂ ರಿಪುವ್ರಾತಮುಮಂ ॥೪

ವ॥ ಈರಾಯನ ಸಿಂಗರಮೆಂತೆನೆ :— ॥೫

ತಳತಳಪೊಳ್ಪ್ನಸಲ್ಮಿಸುಪ ನುಣ್ಗೆಱೆನಾಮಮುಮರಲುಳ್ದ ನೀಳ್ದ ಕಣ್ ।
ತೊಳಪ ಕದಂಪು ಸಂಪಗೆಯು ಪೆಂಪಿನ ಮೂಗು ಪೊವೞ್ದ ಮೀಸೆ ಜಂ ॥

ದಳವೆರ್ಗಟ ಮೊಲ್ಲವಲ್ ಮೊಳೆವ ಮೆಲ್ಲಗೆ ಮಟ್ಟದ ಬಟ್ಟಗಡ್ಡದಿಂ ।
ಬಳೆಯಿಪುದೊಳ್ಮೊಗಂ ಸೊಬಗಿನಿಂ ಬಗೆಗಾರ್ತಿಯರ್ಗಾಸೆಯುಬ್ಬೆಯುಂ ‖೬

ಬಲಗಡೆಗಾಗಿ ಬಾಗಿ ಬಿಗಿವಟ್ಟುಜು ಬಟ್ಟತೆಂಬಿನಂ ।
ಮಲರ ಸರಂಗಳೊತ್ತರಿಸೆ ಸುತ್ತಿರೆ ಪತ್ತಿದಂವದಿಂ ‖
ನೆಲೆಸಿಕಿಯುಚ್ಚಪೊಂದುಗುಲದಿಂ ಪೊಗರೇಱು ಮತ್ತದೇಂ ।
ಬೆಲೆವಡೆವತ್ತೊ ಚಿತ್ತಭವನಂದನ ಬಂದಿಗಾಱನಾ ‖೭

ಪೊಸತಲೆಯಲ್ಲಿ ಜೋಲ್ವ ಸೆರಗಿಂ ನೆರೆ ಕೋದ ಮುತ್ತಿನಿಂ ।
ಕಡುಪೊಳ್ವಚ್ಚನುಣ್ಬಸೆಯ ತೆಳ್ಬೆಳರ್ವಣ್ಣನಾಮದಿಂ ‖
ದೆಸೆಗೆಡೆಗಿಟ್ಟ ಬಜ್ಜರದ ಬಾಸಿಗದಿಂದೆಯುಂ ಕರಂ ।
ಪಡೆದುದು ಕೀರ್ತಿ ಬಿತ್ತು ಮೊಳ್ಪೈರ್ಗಳನೀಬೆಡಂಗಿನಿಂ ‖೮

(ಉಪಜಾತಿವೃತ್ತಂ)

ಮೊಗಮುಂ ಸಸಿಗೆತ್ತು ತಾರೆಗಳ್ ।
ಮಿಗೆ ನೇಹಂ ಗೆಡೆಗೊಂಡು ಗಂಡದೊಳ್ ‖
ಮೊಗಮೊಂದಿರೆ ಮುದ್ದಿಪಂದದಿಂ ।
ಬಗೆಗೊಳ್ಗುಂ ಕಿವಿವಚ್ಚಮೊಚ್ಚತಂ ‖೯

(ಲಲಿತವೃತ್ತಂ)

ಸಂಕುಗೊರಲೊಳ್ ತಳ್ತ ಮುತ್ತಿನ ಸರಂಗಳ್ ।
ಕೊಂಕಿಡಿದ ಪೆರ್ಬುಲಿಯುಗುರ್ಸೊಬಗುವೆತ್ತಂ ‖
ಕೆಂಕವಣಿ ತೆತ್ತಿಸಿದ ತಾಳಿಪದಕಂಗಳ್ ।
† ಸೋಂಕಲೆದೆರ್ಗೊಂಡವನ ಪೆಣ್ಗಳೆದೆರ್ಗೊಂಡಂ ‖೧೦

ವ‖ ಇಂತಿರ್ಪ ಮಹಾರಾಯಂ ‖೧೧

ಪ್ರತ್ಯೂಷೋದ್ಬುದ್ಧ ಬುದ್ಧಿ ನಿಧಿಯುಂ ಸಿರಿಯರಾಣ್ಮನ ನಣ್ಮಿನ ನುಣ್ಬೊಗೆತ್ತು

† ನೋಕಿತೆ. ಎಂದು ಪುಸ್ತಕಪಾಠ.

ಯೊಳ್ | ತಳ್ತಿರೆ ಸಂತಸಂ ಮೊಳೆಯೆ ಮೆಯ್ಯ್ನವಿರುರ್ಕೆ ಸುಖಾಶ್ರುಗದ್ಗದಂ ||
ಗಳ್ತರದಿಂದೆ ಸಂದಣಿಸೆ ಕುಂವದೆ ನಿಂದು ಸಮಾಧಿಯೋಗದೊಳ್ |
ಕಟ್ಟಲೆಯುಂ ತಗುಳ್ದು ತೊಳಪಂ ಪೊಳಪೊಂದಿದ ನೇಸಱಿಂದದಿಂ ||೧೦

ವ|| ಬೞಿಕ್ಕೆ ನಿತ್ಯಕರ್ಮವಮಂ ನಿರ್ವರ್ತಿಸಿ ||೧೩

ಪೂಜೆಗೊಳಲ್ಕೆ ಬಂದು ನಿಜಮಂದಿರಮಂ ನೆಲೆವೀಡುಗೊಂಡು ರಾ |
ರಾಜಿಪ ನಂದನಂಬನನ ಚಂದಮನೊಂದಿಸಿ ಚಿತ್ತಭಿತ್ತಿಯೊಳ್ ||
ಪೂಜೆಗೆ ಪೂಣ್ದು ಮುಂದೆಸೆಗೆ ಬಂದಿರೆಯೊಂದಿದ ರೂಪುರೇಖೆಯಿಂ ? |
ಪೂಜಕಪೂಜ್ಯಭೇದಮರಿದಾಯ್ತುಪವಿಷ್ಟರ ಸೂಕ್ಷ್ಮದೃಷ್ಟಿಗಂ ||೧೪

ವ|| ಇಂತು ದೇವಪೂಜೆಗೆ ಪೂರ್ತಿಗೆಯ್ದುಳಸಿಂಗರಾರ್ಯರಿಂ ಪುರಾಣಂಗೇಳ್ವೆ ಡೆಯೊಳ್ ||೧೫

ಸುತಕೃತಿಯುಂ ಪಿತೃ ಕೇಳ್ದಂ |
ಪಿತೃಕೃತಿಯುಂ ಸುತನೆ ಕೇಳ್ದನಿರ್ವರ ತೆಱದೊಳ್ ||
ಸುತಕೃತಿಯಿಂ ಪಿತೃಕೃತಿಯಿಂ |
ಕೃತಿಯಿವನೇವೊಟ್ಟು ಮೆಚ್ಚಿದನೊರ್ವನೆ ಕೇಳ್ದಂ ||೧೬

ವ|| ಇಂತು ಶುಕವ್ಯಾಸರೊಡರ್ಚಿದ ಭಾಗವತಭಾರತಂಗಳಂ ಕೇಳ್ದ ಪರೀಕ್ಷಿಜ್ಜನಮೇಜಯರಿರ್ವರುಮೊಂದುಮೆರಸಿದಂತೆ ತತ್ತ್ವವಿತ್ತಮನೆನಿಸಿ ||೧೭

ಇರೆಯಿವನಂತಿರ್ಕೇರಿಯು |
ದೊರೆ ಶಿವನಾಯಕನನೇಕದಿನದಿಂ ಮಹಿಶೂ ||
ರರಸರನಸಮಯದೊಳ್ ಪಡಿ |
ಬರಿಸುವೆನೆಂಬಾಸೆ ತೀಱ ಬಂದಂ ಮಂದಂ ||೧೮

ಪೊಸದೊರೆಯಾಳ್ಗಳಂತರವನಿನ್ನಱಿಯಂ ಗುಱಿಯಾಳ್ಗಳ್ತನೊಂ |
ದೆಸಕಮನಿಂತಿದೆಂದು ತಿಳಿಯರ್ ಪಡೆಯರ್ಗಳೊಳಟ್ಟುಜನ್ನಗಂ ||

ಬೆಸುಗೆಯನೊಂದದೆ ಒಂದುಗೆಡಿಸಲ್ಕಿದುವೇಳೆಯೆನುತ್ತೆ ಪತ್ತೆಸಾ ।
ರ್ದೆಸಗಿದನಿಕ್ಕಿ ಪಟ್ಟಣಕೆ ಮುತ್ತಿಗೆಯುಂ ನಗೆಗೇಡುಗೂಡಿದಂ ॥೧೯

ಪಟ್ಟಣದ ಪೆರ್ಮೆಯುಂ ತಾಂ ।
ಕಟ್ಟಿದ ಕೋರಾಳ್ಗಳೊಗ್ಗಿನೇಳ್ಗೆಯುನೆಗ್ಗಂ ॥
ನಿಟ್ಟಿಸದೊಂದೇ ಮುಳಿಯೊ ।
ಳಟ್ಟಂ ಪಾಳೆಯುಮನಲೊಳೇಂ ತಿಳಿವುಂಟೇ ॥೨೦

ವ॥ ಆಬಲಮುಂ ಕಂಡೂರವರ್ ॥೨೧

ಪುರದಿಂದಂ ಪ್ರಬಲಮುಟ್ಟಿ ಪೊಕ್ಕು ದಳಮುಂ ನೆರ್ಗುತ್ತೆ ನುರ್ಗುತ್ತೆಯೊ ।
ತ್ತರದೊಳ್ ಮುತ್ತಿದಿರಾಗೆ ಮೂಗೆಱೆವು ಕೈಕಾಲ್ಗಟ್ಟಿ ಬಾಯ್ವಿಟ್ಟರಂ ॥
ಪರಿವಿಟ್ಟೇಱೆ ಬೆಳರ್ತ ಸತ್ತಿಗೆಗಳಂ ಮತ್ತಂ ಗಜಾಶ್ವಂಗಳಂ ।
ಪರಣಂಗೊಂಡಳವಿಂಗೆ ಭಂಗದೆ ಬಿನಂ ಬಟ್ಟಾಡಿ ಬಿಟ್ಟೋಡಿದಂ ॥೨೨

ಪೊಳೆಯೊಳ್ಪಾಯ್ದರನೋಡಿ ಪಾಱೆಱುವರಂ ಕೈತೊಟ್ಟು ಬಾಳಟ್ಟರಂ ।
ಕ್ಕದುಟ್ಟುಳ್ಳುಡೆಯುಂ ಬಿಸುಟ್ಟರನೊಱಲ್ದಾಱಿಟ್ಟರಂ ಭೂರುಹಂ ॥
ಗಳ ಕೊಂಬೇಱಿದರಂ ಹಯಂ ಕೆಡಪೆ ಬೆನ್ನಿಂದಂ ಪಡಲ್ವಟ್ಟರಂ ।
ಕಳದಿರ್ಕೇರಿಯು ಮಿಕ್ಕ ಬಿರದೆಯುಂ ಪೊಕ್ಕಲ್ಲಿ ಪೊಕ್ಕಿಕ್ಕಿದರ್ ॥೨೩

ವ॥ ಇಂತವನ ನಲಮುಂ ದಳವಾಯಿಂದಮು ಅಂದಂಗೆಡಿಸಿ ಸೊರ್ಕನುಡಿ ದಿರ್ಕೇರಿಯುಂ ಪುಗಿಸಿ ॥೨೪

ಕಡುಮುಳಿಸಿಂ ಹಾಸನಮಂ ।
ಪಡೆದಂ ತಾನಿಱಿಯದಿರ್ದ ಸಿಂಹಾಸನಮಂ ॥
ಬಿಡದಿರ್ದೇ ಪಟ್ಟಣಮಂ ।
ಪಡೆವಳರಿಂ ಕಡಿದು ಸಕ್ಕರೆಯ ಪಟ್ಟಣಮಂ ॥೨೫

ವ॥ ಮತ್ತಮವಂ ತಲೆಯೆತ್ತದಂತೆ ಮಲೆನಾಡಂ ನೆಲೆಗೆಡಿಸಿ, ಕಳಸಮನ ಱಿಯಿಸಿ, ಬಾಂಡೆಯುಮಂ ಖಂಡಿಸಿ, ದಾಸಿವಾಸಮಂ ಹಾನಿವಡಿಸಿ, ಹೆಬ್ಬೆಯುನೆ

ಬ್ಬಟ್ಟ, ಜಾಗರವಮಂ ಕೂಗಿಡಿಸಿ, ಬಿಡುರೂರಂ ಬೆದೆಗೆಡಿಸಿ, ಪ್ರೋನ್ನೂರಂ ಬ
ನ್ನಂಬಡಿಸಿ, ಇಕ್ಕೇರಿಯನೊಕ್ಕಲಿಕ್ಕಿ ದಱದುಱವಾಯ್ದಿನಂ ; ಆದಿನದೊಳರ
ಸುಗೆಯ್ದು ಶಿವನಾಯಕನ ತನಯಂ ಸೋಮಶೇಖರನಾಯಕಂ ||೨೬

ಪರಿಭವವಮನಾನಲಾರದೆ |
ಪರಿಯಿಸಿದಂ ರಾಯಭಾರಿಯುಂ ಪರಿವಿಡಿಯಿಂ ||
ಕರಿತುರಗವಸ್ತ್ರಭೂಷಣ |
ಪರಿಗತವುಂ ಕೊಟ್ಟು ತೃಪ್ತಿಕರವುಂ ಕರವುಂ ||೨೭

ವ|| ಆಪುರುಷೋತ್ತಮವೆಸರ ಮಂತ್ರಿಸತ್ತಮಂ ನೆಟ್ಟನೆ ಪಟ್ಟಣಕ್ಕೆ
ವಂದು ದೇವರಾಜನಂ ಪ್ರೋಲ್ದು ದೇವರಾಜಂಗೆಱಗಿ ಕಪ್ಪಕಾಣ್ಕೆಗಳನೊಪ್ಪಿಸಿ
ತನ್ನರಸಂ ಬಿನ್ನವಿಸಿದನೆಂದು ಪೇೞ್ದಂ ಅದೆಂತೆನೆ :— ||೨೮

ನೀಂ ತಂದೆಯಿಂದಿನಿಂದೆನ |
ಗಾಂ ತನಯಂ ನಿನಗೆ ನೆನೆದು ಪೊರ್ದುಗೆಯಿದನಿಂ ||
ಪಿಂತಣ ಬೇರವನೆಣಿಸದೆ |
ಸಂತತವುಂ ಮಱುಕವೆರಸಿ ಮನ್ನಿಪುದೆನ್ನಂ ||೨೯

ವ|| ಇಂತು ತನ್ನಾಳ್ದಂ ನುಡಿದಂತೆ ನುಡಿದು ಕೈಮುಗಿದು ನಿಂದ ರಾಯ
ಭಾರಿಗನೊಡನೆ ರಾಯಂ ||೩೦

ಮಗನೆಂಬೀನುಡಿಗೇಂ ಪುರುಳ್ ಬಗೆವು ನೀಂ ಪೇೞೆಂಬುದಂ ರಾಯಭಾ |
ರಿಗನೆಂದಂ ಪುರುಷೋತ್ತಮಂ ವಿನಯದಿಂ ರಾಜೇಂದ್ರ ನಿಮ್ಮಂಘ್ರಿಯೂ ||
ೞಗದೀಬೆಟ್ಟಯದೇವಯಾದಿತನಯ ಗಿರೀಶೆಂಬಿನಂ ಕೂಡೆ ನಂ |
ಬುಗೆಯುಂ ಪಾಲಿಸಿ ದೇವರಾಯನೆಱಕಂಬೆತ್ತಂ ನೃಪಾಲೋತ್ತಮಂ ||೩೧

ವ|| ಇಂತಿಕ್ಕೇರಿಯವರನಾಳ್ಗೊಂಡು ಪಡುಗಡೆಯುಂ ಪದುಳಂಬಡಿಸಿ ||

ದೆಸೆಗೆಲಲೆಂದು ಮೂಡ ಮದನಾರಿಯ ಭಾರಿಯ ಮಾರಿಗಿಕ್ಕಿ ಮೋಣ |
ಬಸುಗಿಡೆ ಕೊಂಗರಂಗವಣೆ ಝಳಿಸಿ ತೂಳಿಸಿಯೇೞಿಸಲ್ಕೆ ತಾಂ ||

ಪೊಸಯಿಸೆ ಚೊಕ್ಕನುರ್ಕಿ ಭಯವೂರರ ಕ್ರೂರರ ಸೂರರೊಟ್ಟಿನೊಂ |
ದುಸಿರೊಳ್ ಬಂದನಂದು ಕಡೆಯೊಳ್ ಗಡಿಯೊಳ್ ಪಡಿಯಿಲ್ಲವೆಂಬಿನಂ ||೩೩

ವ|| ಇಂತೀರೊಡುಗೋಂಟೆಯ ಸನಿಯದ ದಿಂಟೆಯೊಳ್ ||೩೪

ಉರ್ಕಾಳ್ಗಳೊಂದು ಲಕ್ಕಂ |
ಸೊರ್ಕಾನೆಗಳೊಂದು ನೂಱು ಪಲುಗುದುರೆಗಳಂ ||
ಸಿರ್ಕಿದ ಬಲವಂ ಬಲಿಯಿಸಿ |
ಸೊರ್ಕಿದನಾಚೊಕ್ಕಲಿಂಗನಂದು ತೆಲುಂಗಂ ||೩೫

ವ|| ಮತ್ತಂ ||೩೬

ಪಿಂತವರೇೞೇೞ್ತರದವ |
ರಂ ತಮ್ಮವರಾಳ್ದರೆಂಬ ಬಿಂಕಗೊಳೞಿಯು ||
ತ್ತಂ ತಿರೆಯೆಲ್ಲಂ ತಿರುಗುವ |
ನಂ ತಾಂ ಶ್ರೀರಂಗರಾಯನಂ ಕರೆತಂದಂ|| ೩೭

ತೆಂಜಿಯ ದೊರೆ ವೇದೋಜಿಯು |
ಮಂ ಜಗದೊಳ್ ತನಗೆ ಸಾಟಿಯಿಲ್ಲೆಂಬಾರ್ಪಿಂ ||
ತಂಜಾವೂರಂ ಮಧುರೆಯ |
ನಂಜಿಸ ದಾಮರ್ಲದೊರೆಯುಮಂ ಬೇಳಸಿದಂ ||೩೮

ಸಾಕೆನಿಸಿ ಗೋಲಕೊಂಡೆಗೆ |
ಭೀಕರವಾಗಿರ್ದ ವಿಜಯಪುರಕೆಳೆಯೊಳ್ ತಾಂ ||
ಧಾಕಿಂಗೆ ವಂದು ನೆಗಟ್ದ*ತು |
ಪಾಕದವರ್ ವೊಪಲೆನಿಪ್ಪರಂ ನೆರೆಯಿಸಿದಂ ||೩೯

ವ|| ಇಂತಿದಂ ತಮ್ಮ ತೆಲುಂಗರಾಯನೆನಿಪ್ಪ ಶ್ರೀರಂಗರಾಯನುಂ ವಿಜಯಪುರದ ವಜೀರನಪ್ಪ ವೇದೋಜಿಪಂಡಿತನುಂ ರಾಜಮನ್ನೆಯರಪ್ಪ ದಾಮರ್ಲತುಪಾಕದವರ್ಮುಂತಾದ ಪಲದೊರೆಗಳುಂ ತನ್ನ ಮೂಲಬಲಮುಂ ಬೆರ

ಸು ಬಿಱುಬಿಂದಿರೆ ರೋಡುಗೋಂಟೆಯಂ ವೇಢೈಸಿ ತಳಿಯಂ ಬಲಿಯಿಸಿಯೊತ್ತರಿಸುವಿನಮಿತ್ತಲ್ ಶ್ರೀರಂಗಪಟ್ಟಣದೊಳ್ ದೇವರಾಯನುಂ ತನ್ನ ಮಂತ್ರಿಗಳ್ವೆರಸು ಮಂತ್ರಾಲೋಚನೆಗೆಯ್ವೆಡೆಯೊಳ್ ||೪೦

ಮಧುರೆಯ ಚೊಕ್ಕಲಿಂಗನರಪಂ ನೆಱೆ ಪಂದೆಯಿದಿರ್ಚೆದಂ ಗಡಾ |
ಯುಧಮುಸಿರಂಗರಾಯನನುವಂಗೆ ನೆರಂ ಗಡ! ರಾಯಮನ್ನೆಯರ್ ||
ವಿಧವಱಿಯಲ್ಕೆ ಸಾಲದವರುಂ ಬವರಂಗೊಳಲಿರ್ದಪರ್ಗಡಿಂ |
ವಧಿಸಲುಪಾಯಮಾವುದಿವರಂ ವಿವರಂಗೊಳಿಸಿಂ ವಿಚಾರಿಸಿಂ ||೪೧

ವ|| ಎನೆ; ಅವರ್ ತಂತಮ್ಮಭಿಪ್ರಾಯಂಗಳಂ ಬಿನ್ನವಿಸಿದರ್: ಅದೆಂತೆನೆ—||

ಪಲವಲಸೂಱೆಗಳಂ ಪಡೆಯನೊಡ್ಡುವರೊಡ್ಡವಮಾತ್ರಮಲ್ಲದಿಂ |
ಫಲಮನದಱಿಂದೆ ಮುಂದೆಪಸುಗಳ್ ಪೊಸಮಂದೆಯ ಕಂಡ ಪಾಂಗಿನಿಂ ||
ತೊಲಗುವುವೆಮ್ಮ ಬಲ್ಪಡೆಯ ನೆಟ್ಟನೆ ಸಿಟ್ಟಿಸಿದಾಗಳನ್ನೆಗಂ |
ಚಲವಿಡಿದಿರ್ಗಳಂತುಟು ನೆಲಂಬಿಡಿದಿರ್ಪುದಿದೇತಱಿಂದಮೋ ||೪೨

ವ|| ಅದಱಿನಾವುಂ ಕಡುಬದೆ ಪೆರ್ವಲಮುಂ ಬಳೆಯಿಸಿಯೊಬ್ಬುಱೊಳೆಸಗವೇೞ್ಪುದೆಂಬುದುಂ; ಮತ್ತೊರ್ವಂ ||೪೩

ಎಂದಿನ ಕೊಂಗರ್ಕೈಸೆ ಬಡಿವ್ರೂ[illegible]ಗಳ್ಪಱುಗ[illegible] ಪಂದೆಗ |
ಳ್ಗಂದಿನಿತೇತಕೆಂದಿ[illegible]ಕೆಗೆಯ್ವುದು ನಿಂತಮಿದಲ್ತು ರಾಯನೆಂ ||
ಬೆಂದು ಪೆಸತೊರ್ಡಂಕಿವಳಿವಾನಿಸನಂ ಕರೆತಂದು ದಿಂಪದಂ |
ಸಂದದೊಳಾತನಿಂ ವೆಲನುಕಂಪೊತೆಲುಂಗರನೊಗ್ಗಗೆಯ್ಸಿನಂ ||೪೪

ವ|| ಮತ್ತಂ ||೪೫

ಪಾಳೆಯದಲ್ಲಿ ಬಲ್ಲಡಿಗಳ್ಬ್ಬವು ತಳ್ತವು ಸುತ್ತುಗೋಂಟೆ ಮಾ |
ಱಾಳಿಯ ಸಂತೆ ತಿಂತ್ರಿಣಿಕೆತ್ತೊಂದಿವಿಸುಂ ಭಯಮಿಲ್ಲ ತಾಳದಿಂ ||
ಮೋಳದೆ ಪಾಡುವರ್ ಪದೆದು ಪಾಡುವರಿೞ್ತೆ ನೆತ್ತಮಾಡುವರ್ |
ಕಾಳೆಗಮಪ್ಪದೆಂಬೆಣಿಕೆಯಿಲ್ಲದ ಚೆಲ್ಲದೊಳಿರ್ದಪರ್ ಗಳಂ! ||೪೬

ಕೊಂಗರ ಪಡೆಯೊಳ್ ಪಿರಿಯುಪಿ |
ರಂಗಿಗಳ್ಪ್ರ್ರವು ಗಳ್ಗಳೀಪರಿಯೊಳವರ ||
ಪೊಂಗಿ ಪ್ರೊದಮ್ದರ್ಪದಕೇಂ |
ಸಂಗತಿಯೆಂದಿದು ನೆರಸನಾರಯ್ವೆನೆಗಂ ||೪೮

ವ|| ಪೆಱನೊರ್ವಂ ||೪೯

ಸಂಗರರಂಗದೊಳ್ ವೆಲವುಕಂವೆುತೆಲುಂಗಬಣಂಜೆಗರ್ ಕರಂ |
ಭಂಗದೆ ಬೆಂಗುಡರ್ಗಡಿಮವುಲ್ಲವೆ ತೆಂಜೆಯುನಂತಪಂಡಿತಂ ||
ಪಿಂಗದೆ ನಿಲ್ವೆನೆಂದು ನೆರೆ ನಂಬಿಸಿದಂ ಗಡ! ಚೊಕ್ಕಲಿಂಗನಂ |
ಕೊಂಗರ ಕೂಟವೊಂದನವ್ರಾಲೆಂದಿಱಿಕೆಯ್ದಿರಲಾಗದಿನ್ನೆಗಂ ||೫೦

ವ|| ಎತ್ತ, ಕೇಳ್ದು ಮತ್ತೊರ್ವಂ ||೫೧

ಗೆಲ್ಲಂ ಸಿಚ್ಚಟವಾಗಿರೆ |
ಬಲ್ಲಿತ್ತೆನೆ ಪ್ರಾಣದುರ್ಗ ಪೊಯ್ವುದಾಸಂದೆಯುದೊಳ್ ||
ಮೆಲ್ಲನೆ ಮಱುವುಪಾಯಂ |
ಪಲ್ಲವಿಪಂತೆಸಗಿ ಪಡೆವುದೀಪ್ಸಿತಫಲವಂ ||೫೨

ವ|| ಅದಱಿಂದಾರಾಯುಭಾರಿಯುನೆಸಗುವ್ರುದು ಲೇಸೆಂಬುದುಮನಿತಱೊಳ್ ಪಡಿಯಱನೆಕ್ಕಟಿಯು ತೆಗೆಯೊಯೆಕ್ಕತುಳದೊಳ್ ಬಂದು ವಂದಿಸಿ, ಚಿಕ್ಕರಸರೆಯ್ತಂದಪರೆಂದು ಬಿನ್ನವಿಪ್ಪುದುಂ ||೫೩

ಇಂದ್ರನ ದಿವ್ಯಾಸ್ಥಾನಕು |
ಪೇಂದ್ರಂ ಮೆಯ್ದೋರ್ಪ ತೆಱದೊಳಾಗಳ್ ಚಿಕದೇ ||
ವೇಂದ್ರಂ ವಿಷನೂಹವನಿ |
ಸ್ತಂದ್ರಂ ಬಂದೆಸೆದನಲ್ಲಿ ಶುಭಗುಣಸಾಂದ್ರಂ ||೫೪

ಕೆಂಕುಸಿಕಿ ಕೊನಬುನಾವುಂ |
ಬಿಂಕಂ ವಿಂಗೆ ನಿಮಿರ್ದ ಪುಬ್ಬು ನಿಟ್ಟೆಸಳ್ಗಣ್ಗಳ್ ||

ಕೂಂಕುವ ಮೆಲ್ನಗೆಯಿಂ ಮೊಗ |
ಮೇಂ ಕವರ್ದುದೊ ಸೊಗಸುಗಾರ್ತಿಯರ ಬಗೆಯನಿತಂ ||
ನಿಡುದೋಳ್ ಪೇರೆರ್ದೆಯುಸಿನಡು |
ಕಡುಬಿಣ್ಪಂ ಪೆತ್ತು ತಳ್ತು ತೊಡೆ ಕಿಱಿದೊಡೆ ಮೆ ||
ಲ್ಲಡಿ ಕೆಂದಳಮೊಳ್ಪುಗರಿಂ |
ಪಡೆಗುಂ ಕಡುಸೊಗಮನೊಲ್ದು ಪೆಣ್ಗಳ ಕಣ್ಗಳ್ ||೫೬

ವ|| ಇಂತು ಬಂದು ಪಿಡಿದ ಕೈದುವೆರಸು ಕೈಗಳೆರಡುಮಂ ನೆಗಪಿ ದಣ್ತಿಯಂ ಪೂಣ್ದು ನಿಂದು ಕೈಮುಗಿವುದೊಂದು ಪ್ರಸದೇಸೆಯಂ ನಿರವಿಸ ರಾಯನಭಿಪ್ರಾಯಮನಱಿತು ಪಡಿಯಱನೋಲಗಿಸಿದಂ ||೫೭

ಜೀಯ ಪರಾಕಿದು ಬೇಱೊಂ |
ದೋಯರದಿಂ ಬಂದು ವಂದಿಪರ್ ಕಿಱಿಯರಸರ್ ||
ಸಾಮಸವಡುವರ್ ಸಂತತ |
ಮೀಯೆಸಕಮನೆಳಸಿ ದಟ್ಟಿಗಟ್ಟುವರನಿಬರ್ ||೫೮

ವ|| ಎನಲೊಡನೆ ರಾಯಂ ||೫೯

ಸೊರ್ಕಿಡಿದಾನೆವೋಲ್ ನಡೆವ ಮುಂದಿದಿರೊಳ್ ಚಿಕದೇವಶೌರಿ ನಿಂ |
ದುರ್ಕಿ ಬೆಡಂಗಿನಿಂ ಮುರಿಯೆ ಮೆಯ್ಯೊಡನೊಡ್ಡಿಯದೊಂದು ದಂಡೆಯಂ ||
ಪೆರ್ಕಳಗೊಂಡು ವಂದಿಸಿ ಜಲಕ್ಕನೆ ತಾಂ ಪೆಡಮೆಟ್ಟುವಂದಮೇ |
ನಿರ್ಕಳಗೊಂಡುದೋ ಬಗೆಯಿನೀನಟನರ್ತಕಮಲ್ಲರೆಲ್ಲರಾ ||೬೦

ವ|| ಇಂತು ರಾಯಂ ಸಂತಸಂಬಡೆಯೆ ಮಂತ್ರಿಗಳ್ ದೊರೆಯುಮನೊಳ್ ಸಂಧಿಗೆಯುವೇೞ್ಪುದೆಂದು ಮಂತ್ರಶೇಷಮಂ ಪೂರೈಸುವಿನಂ ||೬೧

ಬಿನಯಂ ಬೀರಂ ಬಿನ್ನಣ |
ಮಿನಿತುಂ ಸರಿವೆರಸಿ ಮಸಗಿಯುರ್ಕಳಿಸುವಿನಂ ||

ತನಗನುಗುಣಮಪ್ಪಂತಿರೆ ।
ಯನುವಾತಂ ಪೇಳ್ದನಂದು ಚಿಕದೇವೇಂದ್ರಂ ॥೬೦

ಪಲರಾಯಭೂರದಿರವಂ ।
ಪಲಬಗೆಲಿಂ ಕಂಡು ಕೇಳ್ದು ತಿರ್ದಿ ಪೊದಟ್ಬೀ ॥
ಪಲರುಂ ನಿರ್ನಯಮಿಟ್ಟುದೆ ।
ನೆಲೆಯಾದೊಡವಾನುವೊಂದು ಬಿನ್ನತಿಗೆಯ್ವೆಂ ॥೬೧

ತಿರುಕುಳ ಸಿರಂಗರಾಯುಂ ।
ಪರದೇಸಿಗಳನೆ ತುಪಾಕದಾವುರ್ಜವರಂ ॥
ನೆರಪಿದ ಪಡೆ ತಾನೇಂ ಪತಿ ।
ಬರಿಸುಗುಮೇ ದೇಪರಡಿಯ ಪಟಯುರ ಪಡೆಯೊಳ್ ॥೬೪

ಲೆಕ್ಕಂಗೊಳ ಕೊಂಗಬಲಂ ।
ಲಕ್ಕಂಬರಮಿಕರ್ನವುಂಬರಾಗೊಡಮೇನ ॥
ಸ್ಲಕ್ಕಂ ಮಿಗಿಲೆಮ್ಮ ಬಲಂ ।
ಲಕ್ಕಂ ಕೋಪೊರ್ಗಂದೆ ಪಿರಿದುಕೆಯಿದಾದೊಡಮೇಂ ॥೬೫

ವ॥ ಇಂತೆಪ್ಪುಡಂ ॥೬೬

ಅಸಮಸಮರಂಗಳೊಳ್ ಮಿಗೆ ।
ಮಸಂಬೆಸಂಗಿಡಿಸಿ ಕುತುಪಶಾಹನ ಪೌಜಂ ॥
ಪೆಸರ್ವಡೆದಿರ್ದಂ ರಾಯುಂ ।
ಜಸಮುಂ ಪಿಡಿದಿರ್ದರವನ ಸೇಬಿನ ದಳಲೆಗಳ್ ॥೬೭

ವೀಳೆಯುವನೀವುದೆನಗೀ ।
ಕಾಳೆಗಕಾಂ ಕೊಂಗಪಡೆಯ ದಬಿದುಬಿವಾಯ್ದಾ ॥
ಪಾಳೆಯುಮಂ ಪಾಬನಿಸುವೆ ।
ನೊಬಿಗಮಿದನೆಸಗಿ[ಮಸಗಿ]ಜಸವಡೆದೆಸೆವೆಂ ॥೬೮

ವ॥ ಎಂದ ಮಗನ ನುಡಿಯಂ ಕೇಳ್ದರಸಂ ಬಳಸಿರ್ಪರ ಮೊಗಮಂ ನೋಡೆಯುವರ್ ॥೬೯

ಆಡುವ ಪಾಂಸುಕೇಳಿಯೊಳ್ ಸಲ್ವ ತೊದಳ್ನುಡಿಯುಂ ತೊದಳ್ದ ಮಾ।
ತಾಡುವ ಪೋಗಿನಿಂದೆಸೆವ ಬೀರಮುಮೊಂದಱನೊಂದು ನಾಡೆಯುಂ ॥
ರೂಢಿಸೆ ಸದ್ಗುಣಂಗಳನಿತುಳ್ಳೊಡಮೀ ಚಿಕದೇವರಾಯನೊಳ್ ।
ನಾಡುಗರಾಡುವೊಂದೆ ಬಿರುದಾವುದು ಸತ್ಯಪರಾಕ್ರಮಾಹ್ವಯಂ ॥೨೦

ಅಕ್ಕರವೋದುವಂದು ಕುಱುಪಾದುದು ರೂಢಿಯ ಸತ್ಯವಾಕ್ಯಮು ।
ಮರ್ಕಳೊಳಾಡುವಂದೆ ಕುಱುಪಾದುದು ಸಂದ ಪರಾಕ್ರಮಂ ಕರಂ ॥
ತಕ್ಕುದು ಚಿಕ್ಕದೇವವಿಭುಗಗ್ಗದ ಸತ್ಯಪರಾಕ್ರಮಾಂಕಮೇ ।
ನಕ್ಕುಮೆ ಮಿಕ್ಕ ಸೊರ್ಕಿನರಮಕ್ಕಳ ಮೊಕ್ಕಳಕಿಂತು ಪೆರ್ಗಳಂ ॥೨೧

ಗಂಡರ ಗಂಡನುರ್ಕುವರಮಕ್ಕಳಗಂಡನಿದಿರ್ಚಿ ಕೈದುಕೈ ।
ಕೊಂಡರಗಂಡನಾಡಿ ನುಡಿದಪ್ಪುವ ರಾಯರಗಂಡನಾದಪ್ರೋ ॥
ದ್ದಂಡರ ಗಂಡನೆಂಬ ಪಲವುಂ ಬಿರುದುಂ ಚಿಕದೇವರಾಯನೊಳ್ ।
ಮಂಡಿತಸುಲ್ತ ಮೊತ್ತಮೊದಲೊಂದಿಪ ಸತ್ಯಪರಾಕ್ರಮಾಂಕದಿಂ ॥೨೨

ವ॥ ಇಂತಸಿಬರುಂ ಪೊಗೞ್ವುದುಂ ರಾಯಂ ಮಗನ ಮೈಮೆಯಿಂದುರ್ಕುವ ಸಂತಸಮಂ ಮನದೊಳ್ ಪವಣ್ಗೊಳಿಸಿ ನುಡಿದನದೆಂತೆನೆ :— ॥೨೩

ಯುವರಾಜಂ ನುಡಿವಂತಿರೆ ।
ಬವರಂಗೆಲವೇೞ್ವುದಲ್ಲದೊಡೆ ಕೊಂಗರ ಮೈ ॥
ಪವಣಱಿಯದೆ ವಿಸಟಂಬರಿ ।
ದವಟವಿಸುವರವರ ಬಗೆಗಳಾವುಱಿಯುವುದೇ ॥೨೪

ವ॥ ಎಂದವರನುಮತಿಯಿಂ ಯುವರಾಜಂಗೆ ಪಾವುಡವೀಳೆಯಂಗಳಂ ಕೊಟ್ಟು ಕಳುಪುವಾಗಳ್ ॥೨೫

ತಂದೆ ಚಿಕದೇವ ನೀಂ ಕೂ ।
ರ್ಪಿಂದಂ ಕಡುಮುಂದುವರಿದು ಕದುಬದೆ ಚಾತು ॥
ರ್ಯಂದಳೆದು ನಂದನಂದನ ।
ನಂದದೆ ನೀಂ ಗೆಲ್ವುದಿಂದು ಮಧುರೆಯ ದೊರೆಯಂ ॥೭೬

ವ॥ ಇಂತು ಪರಸಿ ಕಳುಪುವುದುಂ; ಪೊಱಗಣ್ಗೆ ವಂದು ರಾಯಸಿಗನಂ ಕರೆಯಿಸಿ ಪಲವುಂ ಗಡಿಗೋಂಟೆಗಳ ಬಲಮುಂ ಪಯಣಸನ್ನದಂಗೆಯ್ವುದೆಂದು ರಾಯಸಂಗಳಂ ಕಳುಪಿ ದಱಿಸುಂ ನೆರಸುಂ ನೆರಪುವನಿತಱೊಳ್ ಕಿಱಿದುಂ ದಿನದೊಳ್ ಮಧುರೆಯುಮಂ ತನ್ನ ನಿಯೋಗಿ ಗುಱುಮಾನಿಸಂ ಪಟ್ಟಣದಿಂದಟ್ಟಿದ ಕುಱುಪಿನ ಬಿನ್ನವತ್ತಳೆಯನೋದುವಿನಂ ॥೭೭

ಸನ್ನುತನಾಗಿ ದೇವರಡಿದಾವರೆಗಳ್ಗೆ ಪಲರ್ಮೆ ಭಕ್ತಿಯಿಂ ।
ಬಿನ್ನತಿಗೆಯ್ವನಾಳಿಪುದಿದೊಂದನೆ ಸಾಸಿರಮುಂದು ಭಾವಿಸು ॥
ತ್ತಿನ್ನೆಗಮಾಪ್ತರೆಂದವರವರ್ಗದನೆಚ್ಚಱಿಸಲ್ಕೆ ಪೂಣ್ದೆ ।
ಕೆನ್ನದೆ ಪೋಪುದರ್ಗೆ ಪರಿದಾಗದು ಸಾಱಿಸಾಱಿದೆಂ ॥೭೮

ಪಿಂತಣ್ಗಾಗುಱಿಕಾಱರಾಪಡೆವಳರ್ ಬಂದಿರ್ದರಂತಲ್ತು ಮಾ ।
ಱಾಂತರ್ ಮುಯ್ವೆರಸಿಪ್ಪುದೆಂಬುದಱಿನ್ನೀ ಬಂದಪಂ ಚಿಕ್ಕದೇ ॥
ವಂ ತಾನಾರ್ಪರ ಗಂಡನಪ್ರತಿಮವೀರಂ ವೀರರೊಳ್ ಬಲ್ಲಹಂ ।
ಪಂತಂದೊಟ್ಟೊಡೆ ಮುಟ್ಟುವಂ ನೆಲದೊಳಟ್ಟಾಸೊನ್ನೆ ಪಟ್ಟಾದೊಡಂ ॥೭೯

ಬೇಱುವಸೆಜ್ಜೆ ಬೇಱುವನ ವೈಖರಿ ಬೇಱುವನೊಳ್ಪುಗೆಯ್ಮೆಗಳ್ ।
ಬೇಱುವನಾರ್ಪು ಬೇಱುವನ ಗಾವಳಿ ಬೇಱುವನುರ್ಕುಸೊರ್ಕುಗಳ್ ॥
ಬೇಱುವಸಬ್ಬರಂ ನೆಲದ ಬೀರರೊಳೀಪವಣಿಲ್ಲದೆಲ್ಲರಂ ।
ಮೀಱಿದ ಕೂರ್ಪಿನಪ್ರತಿಮವೀರನಿವಂ ಚಿಕದೇವಭೂವರಂ ॥೮೦

ವ॥ ಇಂತೀಬಿನ್ನವತ್ತಳೆಯನೋದಿಸಿಕೊಂಡಾಚೊಕ್ಕಲಿಂಗಂ ತನ್ನ ಸಿರಂಗರಾಯಂಗಂ ತುಪಾಕದ ಲಿಂಗಮನಾಯಕಂಗಂ ದಾಮರ್ಲಯ್ಯಪ್ಪನಾಯ

ಕಂಗಂ ತಿಳಿಪದೆ ಕಟ್ಟುಱದೊಳ್ ತಿರುಚನಾಪಳ್ಳಿಯಂ ಸಾರ್ವರ್ಗಂ. ಮಱುವಗಲೀವೃತ್ತಾಂತಮಂ ಕೇಳ್ದು ಸಿರಂಗರಾಯನುಮಾಯೆಡೆಗೆಯ್ದಿದಿಂ ಬೞಿಕ್ಕುೞಿದಿರ್ಪರ್ ||೮೧

ದಾಮರ್ಲತುಪಾಕಪವರ್ |
ತಾಮಿರ್ವರುಮೊಂದುವೆರಸಿ ತೆಂಜೆಯ ತುರಗ ||
ಸ್ತೋಮದ ಕಡುನಂಬುಗೆಯಿಂ |
ದಾಮಧುರೇಶಂಗೆ ಬರಸಿ ಕಳುಪಿದರಾಗಳ್ ||೮೨

ನೀಂ ಪದುಳದೆ ಪೋದುಮು ಲೇ |
ಸಾಂ ಪಡಿಬರಿಸುವೆವು ನಿಂದು ಪೊಣ್ಮುವೆವು ದಿಟಂ ||
ಪೆಂಪುವಡಿಸಿ ಪೊರೆವುದು ಸುತ |
ರಂ ಪೊರ್ದಿದ ಪೂರ್ವಾಪರರಂ ಬಾಂಧವರಂ ||೮೩

ವ|| ಇಂತಿವರ್ ಪಾಳೆಯದೊಳಿರೆ ಪಟ್ಟಣದೊಳ್ ಮಹಾರಾಜನೀವೃತ್ತಾಂತಮಂ ಕೇಳ್ದು ಯುವರಾಜಂಗಿಂತೆಂದಂ ||೮೪

ಸಿಂಗಮಿರೆ ತನ್ನ ನೆಲೆಯೊಳ್ |
ಪೊಂಗುವ ಪಡಿದನಿಗೆ ಬೆದಱಿ ಮದಕರಿನಿಕರಂ ||
ಬಂಗಂಬಡೆದೋಡುವವೋಲ್ |
ಕೊಂಗಂ ನೀಂ ಬರ್ಪ ಮಾತ್ರಿನಿಂದಮೆ ಪರಿದಂ ||೮೫

ಉೞಿದರ್ ತೆಲುಂಗಬಣಜಿಗ |
ರಳವಿಂದಾಚೆಂಜಿಯಾಳ್ವ ಪಾರ್ವನುಮೊರ್ವಂ ||
ಕಳಿಪಿ ದಳವಾಯನವನಿಂ |
ಕೊಳುಗುಳಮಂ ಗೆಲ್ದು ಕೊಂಗನಾಡಂ ಕೊಳ್ವಂ ||೮೬

ವ|| ಎಂದು ಯುವರಾಜನನೊಡಂಬಡಿಸಿ ಪಡೆವೆರಸು ಪಡೆವಳನಂ ಕಳಪು

ವಿನಮುವನುಂ ಪಯಣದೊಳ್ ನಿಂದಲ್ಲಿ ನಿಲ್ಲದೆ ಪಗೆವರ ಪಾಳೆಯಮುಮಂ ಸೂರ್ದುಗೆ ಪ್ರೋಕೆಸ್ಕೊಕ್ಕಲಿಕ್ಕಿ ॥೮೩

ತೋಱಿಯಿಸಿ ಸಂಗರದಳವಂ ।
ತಱುಬಿದನೆಕ್ಕತುಳದಿಂದೆ ಕೊಂಗರ ದಳವಂ ॥
ನೆಱಗಲಿ ಸೇನಾಧೀಶಂ ।
ತಱಸಂದಾರ್ಯೆಯೆ ದೇವಸೇನಾಧೀಶಂ ॥೮೮
ಜಡಿದ್ಯೆಯುಪನಾಯಕನಂ ।
ಕಡಿಕಂಡಂಗೆಯ್ದನರಿಚಮೂನಾಯಕನಂ ॥
ಪಿಡಿದಂ ಕುಲಶೇಖರನುಂ ।
ಪಿಡಿಯೊಡನಂದಖಿಲದಂತಿಕುಲಶೇಖರನುಂ ॥೮೯

ವ॥ ಇಂತು ಪೂಱಾಂತ ಬಲವುಂ ಕಡಿವಬ್ಬರಕೆ ತ್ರಿಗುಳನಾಡನಿತುಂ ತಬ್ಬಿಬ್ಬುಗೊಳೆ ॥೯೦

( ಸ್ವಾಗತೆ )

ಕಾಮುಲೂರುಗರನೆಂತು ನರೇಂದ್ರಂ ।
ವಾಮುಲೂರುಗರನಂತೆ ತಗುಳ್ದಂ ॥
ರಾಮನೆಂತು ಮಹಿಶೂರನಿವಂ ಸಂ ।
ಗ್ರಾಮದಂತು ಮಹಿಶೂರವನಾದಂ ॥೯೧

ವ॥ ಬಡನೆ ಬಡಗಣ್ಗೆ ನಡೆದು ರಾಜರಾಜನಂತೀದೇವರಾಜಂ ॥೯೨

( ಸ್ವಾಗತೆ )

ಬಕ್ಕಲಿಕ್ಕಿದನಿವಂ ಪ್ರಲಿಯೂರಂ ।
ಪಕ್ಕವಾಳ್ದರುಱದರ್ ನೆಲೆಯೂರಂ ॥
ಚಿಕ್ಕನಾಯಕನ ಪಳ್ಳಿಯನೀಟ್ದಂ ।
ಮಿಕ್ಕ ನಾಯಕರುಮಳ್ಕನೊಳೆಟ್ದರ್ ॥೯೩

ಪೆಣಗೆ ಕಡುಗವಡಿಸಿಂದಂ ।
ಕುಣಿಗಿಲ ನರಸಿಂಗಪುರದ ನಾಯಕರಿರ್ವರ್ ॥
ಕ್ಷಣದೊಳ್ ಕೋಂಟೆಗಳಂ ಕೊಂ ।
ಡೆಣೆಗೊಳಿಸಿದನಂದು ಬಂದಿಶಾಲೆಯೊಳವರಂ ॥೯೪

ವ॥ ಇಂತು ದೆಸೆಗಳಂ ಗೆಲ್ದು ಪ್ರೌಢದರಂ ಪೊರೆಯುತ್ತಿರೆ ಪಿಂ ಬಿಗುತುರ್ ಬೀಗಿದ ಮಧುರೆಯ ದೊರೆ ಮುಂತಾದವರ್ ಇವನಂ ಮಱಪೊಕ್ಕಲ್ಲದೆ ತಾಂ ಬಾಳಲ್ಕಿಲ್ಲೆಂದು ತಮ್ಮುಳ್ಳ ರನ್ನಪೊನ್ಗಳನಿತುಮಂ ಕಾಣ್ಕೆಯನಿಟ್ಟು ಪೊಡಮಟ್ಟು ಸೋಗೆಂಬಟ್ಟಿರ್ದರ್ ಈದೇವರಾಯನಂ ॥೯೫

ಚೊಕ್ಕಂ ತಂದಿತ್ತು ಲಕ್ಕಂ ಬೆಲೆವಡೆದೆಸೆವೊಳ್ವಚ್ಚವಂ ನಿಚ್ಚನಿಚ್ಚಂ ।
ತಕ್ಕಂತಾಪಾದಚೂಡಂ ತಳೆದುಱಿದುವನೊಳ್ಕೆಂಡಿರೊಳ್ಗಂಗೆ ಲಕ್ಕಂ ॥
ಮಿಕ್ಕಿರ್ದಾ ಪೊಂಗಳಿಂದಂ ಪ್ರಸಯಿಸಿ ಪದಿನಾಱುಂ ಮಹಾದಾನಮಂ ಕೈ ।
ಮಿಕ್ಕಿರ್ದಂ ತಕ್ಕರಂ ಸತ್ಪ್ರಣವಿತರಣದೊಳ್ ದೇವರಾಜಾಧಿರಾಜಂ ॥೯೬

ವ॥ ಇಂತು ಮಹಾರಾಜಂ ಸಾಮ್ರಾಜ್ಯಸುಖಾನುಭವದೊಳಿರೆ ಯುವರಾಜನುಂ ದಿಗ್ವಿಜಯಪ್ರಜಾಪಾಲನವ್ಯಾಪಾರಂಗಳನನಾಯಾಸದಿಂ ಪೊತ್ತು ನೀಸುತ್ತಿ ತನ್ನೊಳ್ಗೆಳೆಯನಪ್ಪ ತಿರುಮಲಾರ್ಯನಂ ॥೯೭

ತಂದೆಯ ಕೆಳೆಯನ ಕಂದಂ ।
ಪಿಂದಳೆದೆಡೆವಿಡದೆ ದೂಳಿಯಾಟಂ ಮೊದಲೆ ॥
ನ್ನಿಂದವಮ ಪೆರ್ಚಿಗೆವಂದಪ ।
ನೆಂದಿವನಂ ಪೆಂಪುವಡೆಕುಮಪ್ರತಿಮಾಂಕಂ ॥೯೮

ಒಡನೊಳಲೆಯ ಪಾಲಂ ಸವಿ ।
ದೊಡನೆ ತೊದಳ್ನುಡಿದು ತಳರ್ದು ನಡೆನುಡಿಯಂ ಕ ॥
ಲ್ತೊಡನೋದಿ ತಿಳಿದನೆಂದೊ ।
ಲ್ದೊಡನಾಡಿಕುಮೋಲೆಗೊಳಿಸಿ ಚಿಕದೇವೇಂದ್ರಂ ॥೯೯

ಅಂತಃಕರಣಮೆ ಪೆಱವರಿ |
ಜಾಂತುದು ದಲ್ ತಿರುಮಲಾರ್ಯನೆಂಬೆ ವ್ಯಾಸರಿಂ ||
ದಿಂತೇ ತಿಳಿದಪ್ರತಿಮನು |
ಮೆಂತಪ್ಪ ರಹಸ್ಯಮಾದೊಡಂ ತೋಡರ್ದಿರ್ಕುಂ ||೧೦೦

ನೆನಮಿನಿತಿಲ್ಲದೊಲ್ದು ಮೊಸೆಗುಂ ನೆನೆಗುಂ ಬರಿಕುಂ ದಯಾರಸಂ |
ಕವಿತರೆ ನಿಷ್ಟಕುಂ ನಲಿಗುವಾದರಿಕುಂ ಮನವಾಱ ಮನ್ನಿಕುಂ ||
ಸವಿನುಡಿದೋಱುಗುಂ ಸದಯಮೀಗುಮಭೀಪ್ಸಿತವಸ್ತುವೆಲ್ಲಮಂ |
ಪವಣಿಕುಮೊಲ್ದೆಯುಂ ತಿರುಮಲಾರ್ಯನೊಳಪ್ರತಿಮಾಂಕನಪ್ಪೊಱಂ ||೧೦೧

ವ|| ಮತ್ತಂ ||೧೦೨

ಅರಸಂ ನೇಹಿಗನೊಲ್ಕಿಗಂ ನೆರವಿಗಂ ಕಾವಂ ಹಿತಂ ತೆತ್ತಿಗಂ |
ಸರಸಂ ಮನ್ನಿಪನಾವಗಂ ತಿರುಮಲಾರ್ಯಂಗೆಂಬಿನಂ ಕೋವಿದರ್ ||
ಪೊರೆದೋತೊಲ್ದಡನಾಡಿಯೋವಿ ಪುದಿದಿತ್ತೆಲ್ಲಾರ್ತರ್ಗೆ ಪೆಂಪೇಱಿಕುಂ |
ಬಿರುದಂತೆಂಬರ ಗಂಡನಪ್ರತಿಮವಿರಂ ಬಲ್ಲರೊಳ್ ಬಲ್ಲಹಂ || ೧೦೩

ವ|| ಇಪನುಮಿಯುವರಾಜಂಗೆ ಧರ್ಮಸಚಿವನುಂ ಕರ್ಮಸಚಿವನುಂ ನರ್ಮಸಚಿವನುಮೆನಿಸಿ ನೆಸಱಂ ಬೞಸಲ್ಪ ಪಗಲಂತೆ ಸ್ಪೃಗರ್ವಡೆದು ಸಂತಸದೊಳ್ ಪೊಗಳ್ವನದೆಂತೆನೆ :- ||೧೦೪

ಚತುರಂ ಚಾಗಿಯುಬಂಪುಗಾಱನೆಱಯಂ ಸಂಗೀತಸಾಹಿತ್ಯಕೋ |
ವಿದನುತ್ಸಾಹಿ ವಿವೇಕಶಾಲಿ ನಯಶೀಲಂ ನೇಮಗಾಱಂ ಕಲಾ ||
ವಿದನೊಳ್ಪಾತುಗನೋಜೆಗಾಱನುಚಿತಜ್ಞಂ ಭಾವುಕಂ ಭಾಮಿನೀ |
ಹೃದಯಗ್ರಾಹಿ ದಯಾಪಯೋಧಿ ಚಿಕದೇವೇಂದ್ರಂ ಮಹೀಚಂದ್ರನುಂ||೧೦೫

ಬಳೆಗುಂ ಸಂತಸಮುಣ್ಮಿಗಂ ಬಗೆಯುರಲ್ಗಂ ಪ್ರಜ್ಞೆ ಸಲ್ಗಂ ವಚಂ |
ಪಳಕುಂ ಗೈಮೆ ಮಡಲ್ಗುಮೊಳ್ಜಸಮುಱಂ ಪೆಂಪೇಱುಗುಂ ಮತ್ತಮೇಂ ||

ಕೆಳಗೊಳಗ್ಗಂ ನೆವಮಿಲ್ಲದೆಲ್ಲ ಜಗಮುಂ ತಾಳ್ಗಿಯುಗ್ಗಮಾದ್ಯೈವಮುಂ ।
ತಳರ್ವನ್ನಂ ಚಿಕದೇವರಾಯನ ದಯಾಂಕೂರಂ ಕಟಾಕ್ಷಾಂತದೊಳ್ ॥೧೦೬

ಕಡೆಗಣ್ಣೊಳ್ ಸಿರಿಯಿರ್ಕೆ ತೋರ್ಕೆ ಗೆಲ್ಲಿಯುಂತಂಗೈಯೊಳಾಚಕ್ರ ವುಂ । ಕಡುಸೊಂಪಿಂ ಮೆಱೆಗೊಂಡು ಕಂಬು ಕೊರಲೊಳ್ ಬಿಲ್ ಪುರ್ಬಿನೊಳ್ ತೋರ್ಕೆಯುಂ ॥ ಪಡೆಗಾಕಾರಮುಮಕ್ಕೆ ಮಾನುಷಮುಮಿನ್ನೆಂತೆಂತು ತಾಂ ಮಾಂಜೆಯುಂ । ನುಡಿಗುಂ ಸತ್ಯಪರಾಕ್ರಮತ್ವದೆ ಪ್ರಡಣ್ಣಾದ್ಧಿವಿಷ್ಣು ವೆಂದೇಜಗಂ ॥೧೦೭

ವ॥ ಇಂತು ಪೊಗೞುತ್ತೆ ಸಂತಸದೊಳವನೆಸಗುವಱದೊಳಂ, ಅರಸುಗೆಯ್ಮೆಯೊಳಂ ಜಿನದದೊಳಂ ಪಡಿನೆಱಲಂತೆ ಬೞಿಸಲ್ವ ಮತ್ತಂ ॥೧೦೮

ಪಲರುಂ ಪಾರ್ವರ ಕುವರರ್ ।
ಪಲಪಲರುಂ ರಾಯುಗುವರರುಂ ಕೆಳತನದೊಳ್ ॥
ಬೆಲೆವಡೆದು ಪೆಱತನೆಣಿಸದೆ ।
ನಲವಿನೊಳವನವಯವಂಗಳೆನಲೊಡವೆರೆವರ್ ॥೧೦೯

ನನ್ನಿಗರಿಂಪುಗಾಱರಿನಿಮಾತುಗರಿಚ್ಛೆಗರಾರ್ಪರೊಲ್ಮೆಗರ್ ।
ಚೆನ್ನಿಗರೋಜೆಗಾಱರುಱುವರ್ಕಲಿಗಳ್ ನೆರೆಜಾಣರೊಳ್ಪುಗರ್ ॥
ಬನ್ನಣೆಗಾಱರೊಳ್ಪುರಿಚರಕ್ಕರಿಗರ್ ಕೆಳಪಾರ್ವಮಕ್ಕಳುಂ ।
ತನ್ನೊಡನಾಡೆ ನಾಡೆ ನಲಿಗುಂ ಚಿಕದೇವನೃಪಂ ಕೃಪಾಕರಂ ॥೧೧೦

ಮತಿಯುತರಾಪ್ತರಾವೃತರಧೀತಕಲರ್ ವಿಮಲರ್ ಕುಲಕ್ರಮಾ ।
ಗತರಭಿಜಾತರಾರ್ಜವಸಮನ್ವಿತರವ್ಯಸನರ್ ಜಿತಶ್ರಮರ್ ॥
ಚತುರರುದಗ್ರಮಾಂಸಳಭುಜಾಂಸರುದಾರವಿಶಾಲವಕ್ಷರು ।
ನ್ನತರೊಡವಾಳ್ವರಪ್ರತಿಮನೊಳ್ ನೆಱಲಂತೆ ನೃಪಾಲನಂದರ್ ॥೧೧೧

ವ॥ ಇಂತೊಡನಾಡುವ ರಾಯುಗುವರರೊಳಂ ಪಾರ್ವಗುವರರೊಳಂ ಕಂದರ್ಪಕಲಾಧರರೆಂಬಿವರ್ ಚಿಕದೇವರಾಯತಿರುಮಲಾರ್ಯ್ಯರ್ಗಪರಶರೀರಮೆನಿಸಿ

ವ್ಮೈವೆಯೊಳಂ ವೆುಯ್ಸಿರಿಯೊಳಂ ಬೇರ್ಪಡಿಸಲರಿದೆನಿಸಿ ತೋರ್ಪರ್. ಇಂತೀ ಕುವರರ್ಗೆ ತನ್ನ ಬಗೆಯಂ ಭಾಗ್ಯಮುಮಂ ಪೆಚ್ಚುಕೊಟ್ಟು ನಿಚ್ಚ ಮುಮಂ ಪೊಟ್ಟುಜ್ಜುತ್ತುರ್ ||೧೧೦

ಪರವಾಸುದೇವನಿರವಂ |
ಪರಮಪದಾಪ್ಪಿತವಿಚಿತ್ರಸಂಪತ್ತಿಯನಾ ||
ಪರಿಸರದೊಳ್ ವ್ಯೂಹಂಗಳ |
ಪರಿಯಂ ಪರಿವಿಡಿಯಿನೆರ್ದೆಯೊಳನುಗೊಳ ನೆನೆದಂ ||೧೧೩

ವ|| ಅದೆಂತೆನೆ : — ||೧೧೪

ಬಂದನದೊಂದು ಪತ್ತುಮಡಿಯಿಂ ಮಿಗುವಾವರಣಂಗಳೇಟುಮಂ |
ಪಿಂದಿಡೆ ಮುಂದೆ ಮೂಪಡಿಯ ನಾಡೆನೆ ನಾಲ್ಕ್ಮಗನ್ನೆಮೊಗಂಗಮೀ ||
ಯಂದಮಿದೆಂಬ ಭಾವನೆಗೆ ನೀಳ್ಕದ ದಿವ್ಯವಿಚಿತ್ರರೂಪದೊ |
ಳ್ಪಂದದು ನೋಡೆ ವೇದದೆಸೆಗುಂ ಪರಮಂ ಪದಮೆಂಬ ಪೆಂಪಿನಿಂ ||೧೧೫

ವ|| ಅದರ್ಕೆ ||೧೧೬

ಬಳಸಿರ್ಪಣ್ಡೆಸೆಗಳ್ಗಂ |
ತಿಳಪ್ರೊಡೆ ಮೆಗಣ್ಗೆ ಮೆಲ್ಲೆಯಿಲ್ಲೆನಿಸಿರ್ಕುಂ ||
ಕೆಳಗಡೆಯೊಳ್ ಪ್ರಕೃತಿಯ ಮಂ |
ಡಳದೊಳ್ ಪುದಿದಂಡಕೋಟಿಯೆಲ್ಲೆಯೆನಿಕ್ಕುಂ ||೧೧೭

ಅಲ್ಲಿಯ ನಾಡಲ್ಲಿಯ ಪೊಳ್ |
ಯಲ್ಲಿಯ ಪೊಟಲಲ್ಲಿಯಗಾರವೆಗಳಂ ಪೊಗೆಟಲ್ ||
ಬಲ್ಲವರಾರ್ ಪೆಟವಾತುಂ |
ಸೊಲ್ಲಿಸುಗುಂ ದಿವ್ಯಮೆಂಬುದೊಂದೇ ನುಡಿಯೊಳ್ ||೧೧೮

ಪಗಲಿರುಳುಂ ಬಟಕರಿದೆನೆ |
ಪೊಗರ್ವಡೆದಿರ್ಕೆಱದ ಪಕ್ಕಮುಂ ಪಲತೆಱದೊಳ್ ||

ಸೊಗಯಿಪ ಋತುಗಳುಮಾಱುಂ |
ಯುಗಭೇದಂ ನಾಲ್ಕುಮಲ್ಲಿ ಪುಗವೇಪ್ರೊೞ್ತುಂ ||೧೧೯

ಆವೈಕುಂಠದ ನಾಡೊಳ್ |
ಪಾವನೆ ಮೊದಲಲ್ಲಿ ವಿರಜೆ ಪರಿಗುಂ ಬೞಿಯೊಳ್ ||
ಕೈವಲ್ಯದ ನೆಲೆ ಬೞಿಕಂ |
ಶ್ರೀವೈಕುಂಠಾಭಿಧಾನಪುರವರಮೆಸೆಗುಂ ||೧೨೦

ಅರೆಬರ್ ಮುನಿಗಳಯೋಧ್ಯಾ |
ಪುರಮೆಂದುಂ ಪೆಸರನದಕೆ ಬೆಸಸುವರದಱೊಳ್ ||
ಪರಿಪರಿಯ ರನ್ನಪ್ರೊಂಗಳ |
ಪರಮಾವರಣಂಗಳೇೞುಮಾವರಿಸಿರ್ಕುಂ ||೧೨೧

ಭಾವಿಸಿ ತಿಳಿವಿನಮೊದಲನೆ |
ಯಾವರಣದೊಳಖಿಲಭಗವದಾಯುಧಪುರುಷರ ||
ತ್ರಿವಿಪರ್ಗರಮನೆಯಾರವೆ |
ಬಾವಿ ಕೊಳಂ ಬಿನದವೆಟ್ಟುಗಳ್ ನೆರೆದಿರ್ಕುಂ ||೧೨೨

ಚಂಡಾದಿದ್ವಾಃಪಾಲರ |
ತಂಡದ ಕುಮುದಾದಿಸೈನ್ಯಪಾಲೋತ್ತಮರಾ ||
ಮಂಡಳಿಯುರಮನೆ ಸಂವಣಿ |
ಗೊಂಡಾಣ್ಮನೆಯಾವರಣಮೆಸಗುಮತಿಶಯದಿಂ ||೧೨೩

ಪರಿವಿಡಿಯಿಂದೈದನೆಯಾ |
ವರಣದೊಳಾಮ್ನಾಯವರ್ಗದಧಿದೇವತೆಗಳ್ ||
ಗರುಡಂ ಮೊದಲಾದರ ಪಿರಿ |
ಯರಮನೆಗಳ್ ಸಕಲಸಂಪದಂಬಡೆದಿರ್ಕುಂ ||೧೨೪

ನೆರೆದಿರ್ಪುದು ನಾಲ್ಕನೆಯಾ ।
ವರಣದೊಳಾಪರಮಪದದ ಭಾರಮನೆಲ್ಲಂ ॥
ಭರಿಸುವ ವಿಷ್ವಕ್ಸೇನರ ।
ಸಿರಿಯುರಮನೆ ಶಾರ್ಙ್ಗಧರನ ಪಿರಿಯುರಮನವೋಲ್ ॥೧೨೫

ಮೂಱನೆಯಾವರಣದೊಳಸು ।
ವೇಱಿರ್ಕುಂ ಪತ್ತುಮಾಳ್ದನವತಾರಂಗಳ್ ॥
ಬೇಱೆ ವಿನೋದಿಪ ನೆಲೆಗಳ್ ।
ಮಿಱುತ್ತೊಂದೊಂದನೊಂದು ವೈಭವಗಳಿಂದಂ ॥೧೨೬

ತೊಳಪೆರಡನೆಯಾವರಣದ ।
ಬಳಸಿನೊಳಿರ್ಪತ್ತು ನಾಲ್ಕು ಮೂರ್ತಿಗಳೊಲವಿಂ ॥
ಬೆಳಗುವ ಕರುಮಾಡದ ಸಾ ।
ಲೆಳವೆಟ್ಟೇರಂತೆ ತಾಣತಾಣದೊಳಿರ್ಕುಂ ॥೧೨೭

ಮೊದಲಾವರಣದ ಮೂಡಲ್ ।
ಪುದಿದಿರ್ಕುಂ ವ್ಯೂಹವಾಸುದೇವಸ್ಥಾನಂ ॥
ತದಭಿನ್ನಮೆನಿಸಿಯಾಗ್ನೇ ।
ಯದೊಳಿರ್ಕುಂ ದೇವನರಸಿ ಲಕ್ಷ್ಮಿಯ ತಾಣಂ ॥೧೨೮

ತೆಂಕಣ ದೆಸೆಯೊಳ್ ಮೆಱೆಗುಂ ।
ಸಂಕರ್ಷಣರಾಜಧಾನಿ ನಿರುತಿದೆಸೆಯೊಳ್ ॥
ತೇಂಕುವುದವನರಸಿಯ ತನಿ ।
ಬೆಂಕದ ಸರಸತಿಯ ರಾಣಿವಾಸಂ ಲೇಸಂ ॥೧೨೯

ಪಡುವಲ್ ಪ್ರದ್ಯುಮ್ನನ ನೆಲೆ ।
ಬೆಡಂಗಿನಿಂದೆಸೆಗುಮವನ ಸತಿ ರತಿ ಬಿನದಂ ॥

ಬಡೆವರಮನೆ ವಾಯುವ್ಯದೊ ।
ಳಡೆಯೆನಿಕುಂ ಸಕಲದಿವ್ಯಶುಭಸಂಪದದಾ ॥೧೩೦

ಅನಿರುದ್ಧನೆಸೆವ ಸಿರಿಯುರ ।
ಮನೆ ಬಡಗಲ್ ಬಣ್ಣವಡೆಗಮೈಶಾನಿಯೊಳಾ ॥
ತನ ರಾಣಿ ಶಾಂತಿದೇವಿಯು ।
ಮನೆ ಮಾಟ್ಕುಂ ನೋಳ್ಪ ಜನದ ಕಣ್ಮನದೊಳ್ಪಂ ॥೧೩೧

ಪುರಮಧ್ಯದೊಳೆಸೆದಿರ್ಪುದು ।
ಪರಮಪದಸ್ಥಾಯಿಗಳ್ಗೆ ಮಚ್ಚರಿಗುಡುತುಂ ॥
ಪರವಾಸುದೇವನರಮನೆ ।
ಪರಿಪರಿಯಾಸ್ಥಾನಸೌಧಭವನಾವಳಿಯಿಂ ॥೧೩೨

ಆನಟ್ಟನಡುವೆ ದಿವ್ಯಾ ।
ಸ್ಥಾನಂ ಮಣಿಗಣದೆ ಸಮೆದ ಸಾಸಿರ್ಗಂಭಂ ॥
ತಾನಿರ್ಕುಮಲ್ಲಿ ನಿರ್ಮಲ ।
ರಾನಿರ್ಮುಕ್ತರ್ಕಳಾವಗಂ ನಲಿದಿರ್ಪರ್ ॥೧೩೩

ಅದಱೊಳ್ ಧರ್ಮಾದಿಪಾದಂಗಳನೆಸೆವ ಮಣಿಪೀಠದೊಳ್ ದಿವ್ಯಪದ್ಮಂ ।
ಪುದಿದೊಳ್ಪಂ ಸೂಸೆ ಪೇರಚ್ಚರಿಯನನುಕಲಂ ನಿಚ್ಚಮುಂ ನಿಟ್ಟಪರ್ಗಂ ॥
ಛದಮೆಣ್ಟುಂ ವ್ಯಾಪಿಸಲ್ಕೆಣ್ದೆಸೆಗಳನದಱೊಂದೊಂದಱೊಳ್ ಚಾಮರಂದಾ ।
ಳ್ದದ ದಿವ್ಯಸ್ತ್ರೀಯರೆಣ್ಬರ್ ವಿಮಲ ಮೊದಲೆನಿಪ್ಪರ್ಕರಂ ಬೀಸುತಿರ್ಪರ್ ॥

ಸಕೃದುದಿತಸೂರ್ಯಕೋಟಿ ।
ಪ್ರಕಾಶಮೆನೆ ನೆಗಟ್ದ ಕರ್ಣಿಕಾಮಧ್ಯದೊಳು ॥
ತ್ರಿಕತೆಯಿನೊಸೆಗುಂ ಮುಕ್ತ ।
ಪ್ರಕರಕೆ ಪರವಾಸುದೇವನದ್ಭುತಭಾವಂ ॥೧೩೪

ವ|| ಆಪರವಾಸುದೇವನಿರವಂ ನಿರವಿಸಿ ರಸಪಾರವಶ್ಯದಿಂ ಸಕ್ಕದದೊಳ್ ಪೊಗಳ್ದಂ. ಅದೆಂತೆನೆ :—||೧೩೬

§ ಸ್ವಸಂಕಲ್ಪಾಲ್ಪಾಂಶಾನುಗುಣಪರಿಣಾಮಪ್ರಣಯಿನೀಂ |
ತ್ರಿಪಾದಿತ್ಯಾಮ್ನಾತಾಮತಿವಿಮಲಪಂಚೋಪನಿಷದೀಂ ||
ಅತರ್ಕ್ಯಾಮತ್ಯರ್ಕಾನಲರುಚಿಮಸ .. ಮಾಯಾಶೋ |
ವಿಭೂತಿಂ ತೇ ನಿತ್ಯಾಮಭಿದಧತಿ ವೇದಾಂತನಿವಹಾಃ ||೧

ನಿನೀಷಸಿ ಸ್ವಾತ್ಮಸಮಾಂ ವಿಭೋ ಯಾಂ |
ಸನಾತನೀ ಯಾ ರಜಸಃ ಪರಾ ತೇ ||
ಯಾ ರಾಜಧಾನೀ ಸದೃಶೀ ತವಾಭೂ |
ದಲಂ ಗಿರಾ ತಾಮಭಿಭೂಯ ಪ್ರಣ್ಯಾಂ ||೨

ಅಯಿ ಪರಮೇ ಪದೇಸ್ಯಗಣಿತಾರ್ಕಸತರ್ಕಮಹಃ |
ಪಟಲಮಹಾರ್ಹದಿವ್ಯಮಣಿಮಂಡಪಮಧ್ಯತಟೇ ||
ಅಮಲಫಣೀಂದ್ರಭೋಗಮಣಿಪೀ ನಿವಿಷ್ಟ ಇಮಾ |
ಮನಿಶಮಮೂಂ ವಿಭೂತಿಮಪಿ ನಾಥ ಸನಾಥಯಸಿ ||೩

ಅಖಂಡಾನಂದೈಕಾರ್ಣವಮಖಿಲಹೇಯಪ್ರತಿಭಟಂ |
ಸದೋನ್ನಿದ್ರಂ ಭದ್ರಂ ಸ್ವಸದೃಶದರಿದ್ರಂ ವಿಭು ವಿಭೋ ||
ಸ್ವರೂಪಂ ತೇ ವಕ್ತುಂ ಸಪದಿ ಯತಮಾನೋಪನಿಷದ |
ಪ್ಯಥಾಪೇಶೋನೇತೀತ್ಯಭಿಹಿತವಿಧಾಮತ್ಯಭಿದಧೇ ||೪

ಶ್ರಿಯಾ ಯದ್ರಾಜನ್ವದ್ಯದನಿಮಿಷಸೇವ್ಯಂ ದಿವಿಷದಾಂ |
ಯದದ್ರೇಶ್ಯಂ ಯದ್ವ್ಯೈ ತಟಪಯುತಸಾಮ್ಯಾಸಹದಶಂ ||
ಸದೃಕ್ಷಂ ಯದ್ರೂಪಂ ತವ ತದನುಭೂತ್ಯುತ್ಸುಕಧಿಯೋ |
ಮಹಾಭಾಗಾಭೋಗಾನಿಹ ನಿರಯಭಾಗಾ ನ ಗಣಯುರ್ ||೫

ಮತಿಬಲವೀರ್ಯಸರ್ವಶಕನೇಶನತೇಜಇತಿ |
ಹ್ಯನಘಗುಣಾಸ್ತ್ವಾನವಧಿಕಾತಿಶಯಾಃ ಪರತಾಂ ||

§ ಈ ೧೨ ಸಂಸ್ಕೃತ ಶ್ಲೋಕಗಳು ಏತತ್ಕವಿಕೃತ "ಪರವಾಸುದೇವಸ್ತೋತ್ರ"ದಲ್ಲಿವೆ.

ಸತತಮನರ್ಘಯಂತಿ ಶತಶಸ್ಸ್ವಮತೇ ಚ ಗುಣಾ ।
ನಯಿ ಪರವಾಸುದೇವ ದುರಪಹ್ನವಸನ್ನಹನಾಃ ॥೬

ನಿತ್ಯಾಪೂರ್ವನಿಮೇಷನಿಸ್ಸಹಮಿಥೋಲಾವಣ್ಯಸಾರೋದಯಾ ।
ಸ್ವಾದಪ್ರಸ್ತುತನಿಸ್ತರಂಗಜಲಧಿಸ್ತೈಮಿತ್ಯಮತ್ಯದ್ಭುತಂ ॥
ದ್ವಂದ್ವಂ ತತ್ಪರವಾಸುದೇವಯುವಯೋರದ್ವಂದ್ವಮಂಕ್ಷ್ಣಾಂಶತ್ಯೈಃ ।
ದಿವ್ಯೇ ಧಾಮನಿ ಸೂರಯಶ್ಚ ಕಳಕಯಂತ್ಯಾಬದ್ಧದಾಸ್ಯೋತ್ಸವಾಃ ॥೭

ಫಣಿಪ್ರತಿಫಣಾಮಣಿಪ್ರತಿಫಲತ್ಕಿರೀಟಾಂಕುರಂ ।
ಸಿತೋರ್ಧ್ವತಿಲಕೋಜ್ಜ್ವಲಂ ಶ್ರವಣಚುಂಬಿ ನೇತ್ರಾಂಬುಜಂ ॥
ಶುಚಿಸ್ಮಿತಮುದಾಯುಧಂ ಸುಷಿರನಾಭಿ ದಾಮೋದರಂ ।
ಕನದ್ವಸನಮಸ್ತು ಮೇ ಕಮಲಪಾದಮಗ್ರೇ ಮಹಃ ॥೮

ಏಕಾಂಘ್ರಿಜಾನುವಿಧೃತೈಕಭುಜಂ ಸ್ವಪೀಠಾ ।
ಲೀಢಾನ್ಯಬಾಹುಮಿತರೋದ್ಧರಥಾಂಗಶಂಖಂ ॥
ಶ್ರೀವತ್ಸಲಕ್ಷ್ಮ ಶಿಶಿರಸ್ಮಿತಮಾಯತಾಕ್ಷಂ ।
ಜೀಯಾದುದಗ್ರಮಣಿಮೌಳಿ ಹಿ ಜೀವಿತಂ ಮೇ ॥೯

ಪ್ರಸರತಿ ಪುರಃ ಪಾದಾಂಭೋಜಂ ಜನಾನುಜಿಘೃಕ್ಷಯಾ ।
ವರದ ತದಧಃಕೃತ್ವಾ ಪಾಣಿಸ್ತದೀಪ್ಸಿತದಿತ್ಸಯಾ ॥
ಇತಿ ಪದಕರಂ ರಕ್ಷ್ಯಾಪೇಕ್ಷಾನಪೇಕ್ಷಣರಕ್ಷಣಾ ।
ಪ್ರವಣಮವಯನ್ ಸ್ವಾಮ್ಯಾಪಾರಾನುದಸ್ಯ ದೃಶೋಸ್ಸ್ಪೃಹಂ ॥೧೦

ಪದ್ಮಾಕ್ಷಮಾಲಂಕೃತಪಾರ್ಶ್ವಭಾಗ್ಯಂ ।
ಪ್ರಸನ್ನಸಂಸ್ಥಾನವಿಶೇಷಹೃದ್ಯಂ ॥
ಪರೀಚರಂಸ್ತ್ವಾಂ ಪರವಾಸುದೇವ ।
ಪರಸ್ಸಹಸ್ರಂ ಶರದಾಂ ಜುಷೇಯ ॥೧೧

ಯಾತ್ರಾರ್ಥಯನ್ಮಮ ಭರಂ ಗುರವಸ್ಸಮಸ್ತ ।
ಮೋಕಂ ಯಥಾಸ್ಪದಮಶೇಷಮನೋರಥಾನಾಂ ॥
ವೇದಾನ್ತಜೀವಿತಧನಂ ಪರವಾಸುದೇವ ।
ಪಾದಾಂಬುಜಂ ತದಿದಮಸ್ತು ದೃಶೋಃ ಪುರಸ್ತಾತ್ ॥೧೨

ವ॥ ಇಂತು ನಿತ್ಯಮುಂ ನಿರ್ದೋಷಮುಮಪ್ರಾಕೃತಮುಂ ಪಂಚೋಪನಿಷನ್ಮಯಮುಮಪ್ಪ ವೈಕುಂಠವಿಸ್ತಾರಮಂ ಭಾವಿಸಿ ಬೞಿಕ್ಕೆ ಬ್ರಹ್ಮಾಂಡಮಂಡಲದೊಳ್ ವ್ಯೂಹಭೇದಂಗಳಂ ನಿರವಿಸಿದನದೆಂತೆನೆ :—॥೧೩೭

ಸಾರಸಭವಾಂಡಭಿತ್ತಿಯು ।
ವಾರಾವರಣಾಂತರಾಳದೊಳ್ ನೆಲಸಿರ್ಕುಂ ॥
ಕಾರಣವೈಕುಂಠಾಭಿಧ ।
ಮಾರಯೆ ತದ್ವ್ಯೂಹಲೋಕಮಮಿತಾಲೋಕಂ ॥೧೩೮
ಸಾಂತಾನಿಕಾದಿಲೋಕಮು ।
ಪಾಂತದೊಳೆನಿತಾನುಮಿರ್ಕುಮಾವೈಕುಂಠಂ ॥
ತಾಂ ತಿಳಿನೀರೊಳ್ ಪಡಿನೆೞ ।
ಲಂ ತಳೆದುದೆನಲ್ಕೆ ಕಿಱಿದಱೊಳ್ ಪಡಿಯೆನಿಕುಂ ॥೧೩೯
ಆಸಿರಿಯಾಸೊಬಗಾಸೊಗ ।
ಮಾಸಕಲಮುಮಲ್ಲಿಗಿಲ್ಲಿಗಾರಯ್ವೆನಸುಂ ॥
ದೇಸರಿಯಾದೊಡಮುಳವಿಯು ।
ನೋಸರಿ ಪ್ರದದಯುದ್ಧಪದ್ಮಯೋಜನಮಿದು ದಲ್ ॥೧೪೦
ಪೆಱತೊಂದು ಸತ್ಯಲೋಕದ ।
ಪೊಱವಳೆಯದೊಳಂಡಭಿತ್ತಿಯೊಳವಯಲೊಳ್ ಪ್ರೊ ॥
ಜ್ಜಱುವುದು ಪರವೈಕುಂಠಮ ।
ಮಱೆಯೆನೆ ತಾನೊಂದು ಕೋಟಿಯೋಜನಮಾನಂ ॥೧೪೧
ಸ್ವಾದೂದಕಾಬ್ಧಿಗುತ್ತರ ।
ವಾದ ಬೆಳರ್ದೀವಿಯಲ್ಲಿ ಗುಣವಿಭವವ್ಯೂಹ್ವ ॥
ರ್ಯಾದಿಗಳಂ ವೈಕುಂಠದ ।
ಭೇದಂ ತಾನೆನಿಸಿ ತೋರ್ಕುಮನಘಮತರ್ಕ್ಯಂ ॥೧೪೨

ಭಾವಿಸೆ ಕೆನೆ ಬಲ್ತಂತಿರೆ |
ಪಾವೆಱಯನ ಮೆಯ್ಯ ಪಾಸೆ ಪವಡಿಸಿ ಸೊಗದಿಂ ||
ದೇವತೆಗಳ ಮೊರೆಯಾಲಿಪ |
ತಾವೆನೆ ಪಾಲ್ಗಡಲದೊಂದು ಪರಮಸ್ಥಾನಂ ||೧೪೩

ವ|| ಇಂತು ಕಾರಣವೈಕುಂಠಮುಮಂ ಸತ್ಯಲೋಕಮುಮಂ ಶ್ವೇತದ್ವೀಪಮುಮಂ ಕ್ಷೀರಾಬ್ಧಿಯುಮೆಂಬ ನಾಲ್ಕುಂ ಬ್ರಹ್ಮಾಂಡದೊಳಗಿರ್ಪ ವ್ಯೂಹದಿರವಂ ನಿರವಿಸಿ ಬೞಿಕೆ ||೧೪೪

ಪೞನುಡಿವೆತ್ತು ಪೊತ್ತು ಧರಮಂ ತಿರೆಯುಂ ಪಗೆದೆತ್ತಿ ದೈತ್ಯನಂ |
ಪೊಳಕಿ ಬಲೀಂದ್ರನಂ ತಗುಳ್ದು ಮುಗ್ಗಿಸಿ ದುಷ್ಟನೃಪಾಲವಂಶಮುಂ ||
ಬಳೆಯಿಸಿ ಸೇತುವಂ ತಳೆದು ನೇಗಿಲನುಗ್ಗಿಸಿ ಭೂಮಿಭಾರಮಂ |
ಕಲಿಕಲುಷಂಗಳಂ ಕಳೆವುದಂ ನೆನೆದಂ ವಿಭವಾನುಭೂತಿಯೊಳ್ ||೧೪೫

ವ|| ಮತ್ತಂ ||೧೪೬

ಎಂತೆಂತಿರ್ಪರ ಹೃತ್ಕಮ |
ಲಾಂತರದೊಳಮೊರವುದೋಱದೆಚ್ಚಱಿಸುವ ಸ ||
ರ್ವಾಂತರ್ಯಾಮಿಯ ಸದ್ಗುಣ |
ಸಂತತಿಯುಂ ಮನದೆಗೊಂಡು ಸಂತಸಮಿರ್ಪಂ ||೧೪೭

ರಂಗದೊಳಂ ವೃಷಕರಿಗಿರಿ |
ಶೃಂಗದೊಳಂ ಮತ್ತಮಿಂತು ನೂಱೆಂಟುಂ ತಾ ||
ಣಂಗಳೊಳಂ ಕಣ್ಗೊಳಿಸುವ |
ಮಂಗಳಮೂರ್ತಿಗಳನಂತರಂಗದೊಳೆಣಿಪಂ ||೧೪೮

ವ|| ಮತ್ತಂ ||೧೪೯

ಪಿಂ ತಾಂ ಗೆಯ್ದವನಂದು ಗೆಯ್ದಪುವನಿಂ ಮುಂ ಗೆಯ್ವವಂ ತಮ್ಮೊಳೋ |
ರಂತಾಳೋಚಿಪರೆೞ್ದು ಪ್ರಾತ್ತಱ ಮಹೀಪಾಲೋತ್ತಮರ್ ಮತ್ತಮು ||

ತ್ಯಂತಾಸಕ್ತಿಯೊಳಬ್ಜನಾಭಶುಭಚಾರಿತ್ರಂಗಳಂ ನಾಡೆ ಕೃ ।
ಷ್ಣಂ ತಾನಾಮುನಿಯಿಂದವಿನಾಯೆರೆದುಪೊಂದಾದತ್ತು ಭೂಪಾಲನೊಳ್ ॥೧೫೦

ವ॥ ಇಂತು ಪರವ್ಯೂಹವಿಭವಾಂತರ್ಯಾಮ್ಯರ್ಚಾವತಾರಂಗಳನಾರಯ್ದುದ
ಱಿಂ ವಿಷ್ಣುಚಿಂತನರೂಪವಾದ ಮಾನಸಸ್ನಾನವಿಧಿನಿಷ್ಣಾತನಾಗಿಯುಂ ವಾರು
ಣಸ್ನಾನಾದಿನಿತ್ಯಕರ್ಮವುಮಂ ನಿರ್ವರ್ತಿಸಿ ॥೧೫೧

ವಿಮಲೋರ್ಧ್ವಪುಂಡ್ರಮುಮಂ ತ ।
ತ್ಕ್ರಮದಿಂದಳವಡಿಸಿ ದೇವಪೂಜಾವಿಧಿಯುಂ ॥
ಸಮನಿಸಿ ದೈನಂದಿನದಾ ।
ನಮುಸಿತ್ತಭ್ಯವಹರಿಕ್ಕುಮುಮ್ಮೃತಾಶನಮುಂ ॥೧೫೨

ವ॥ ಆಬಳಿಕ್ಕೆ ॥೧೫೩

ಉಡೆತೊಡವಲರಣ್ಪುಗಳಿಂ ।
ದೊಡಲಂ ಸ್ಪೈಪಿಟ್ಟು ಪಲವುಮರಮುಕ್ಕಳಿವಂ ॥
ಗಡಪೊಡವರೆ ಪಿರಿಯುರಮನೆ ।
ಯೆಡೆಯೊಳ್ ಕಿಱಿದಂದೆಯುಡಿಗೆ ವಂದನೆಗೆಯ್ದಂ ॥೧೫೪

ರಾಯನ ಮನದಿರವಂ ತಿಳಿ ।
ದಾಯೆಡೆಯೊಳೊಡರ್ಚೆ ರಾಯಗಯ್ಕೆಗಳನಿನಿ ॥
ತ್ತಾಯಸಮಿಲ್ಲದೆ ಪಾವ ।
ಚ್ಛಾಯೆವೊಲನುಸರಿಸಿ ನಡೆದು ಪಡೆಗುಂ ಜಸಮಂ ॥೧೫೫

ವ॥ ಬಳಿಕ್ಕೆ ರಾಯನಂ ಬೀಳ್ಕೊಂಡು ತನ್ನರಮನೆಯುಂ ಸಾರ್ದಲ್ಲಿ ॥೧೫೬

ಆಲಿಸುತೊರ್ಮೆ ಸಾತ್ತ್ವಿಕಪುರಾಣದೊಳರ್ಥದ ತತ್ತ್ವಚಿಂತೆಯೊಳ್ ।
ಸೋಲಿಸುತೊರ್ಮೆ ತದ್ವಿದರನೊಪ್ಪದೊಳಶ್ವಗಜಾದಿಶಾಸ್ತ್ರಮುಂ ॥
ಶೀಲಿಸುತೊರ್ಮೆ ಧರ್ಮಗತಿಭೇದದೊಳೊಂದಿದ ಶಂಕೆಯುಂ ಸಮು ।
ನ್ಮೀಲಿಸುತೊರ್ಮೆಯುಪ್ರತಿಮವೀರನೊಳಪ್ಪದು ಕಾಲಯಾಪನಂ ॥೧೫೭

ಕಿವಿಗಿನಿವಪ್ಪ ದಿಬ್ಬಸವಿಗಬ್ಬಮನೋದಿಸುತೋರ್ವ ಕಣ್ಗಳೊಳ್ ।
ಕವಿಸೆ ರಸಂಗಳಂ ನಟಿಪ ನಾಟಕಮಂ ನೆರೆ ನೋಡುತೋರ್ವನು ॥
ಣ್ಬವಣೊಳ್ ಪಾಡುತೋರ್ವ ಜತಿಗೂಡಿರೆ ಬಾಜಿಸುತೋರ್ವ ಬೀಣೆಯಂ ।
ವಿವಿಧವಿನೋದದಿಂ ಕಳೆಗುಮುಪ್ರತಿಮಂ ಸೊಗದಿಂದೆ ಕಾಲಮಂ ॥೧೫೮

ಸಮವಿಷಮಂಗಳೆಂಬಿನಮರಟ್ಟದಿಂ ಪಲವುಂ ಸಮಸ್ಯೆಯಂ ।
ಸಮನಿಸುತೋರ್ವ ನೆತ್ತಚತುರಂಗದ ಚಾತುರಿಯಿಂದಮೋರ್ವ ವಿ ॥
ಕ್ರಮರಸದಿಂ ಪೊದಟ್ಟಸೆವ ಲಾವಕಕುಕ್ಕುಟಮೇಷಮಲ್ಲಸಾ ।
ದಿಮದಗಜಂಗಳಂ ಬಿನದಿಕುಂ ಚಿಕದೇವನದೋರ್ವರಟ್ಟಿಯೊಳ್ ॥೧೫೯

ಗರುಡಿಯೊಳೊಂದುಗೂಡಿ ಪಲವುಂ ದೊರೆಮಕ್ಕಳೊಳೋಜೆಯೊಪ್ಪನಿಂ ।
ಪರಿವಿಡಿಗೆಯ್ಯುತೋರ್ವ ನೆರೆ ರಾವುತರಚ್ಚರಿವಟ್ಟು ಮೆಚ್ಚೆ ವೈ ॥
ಖರಿನಡೆದುರ್ಬಿ ತುಂಗತುರಗಂಗಳನೇಱ ಗತಿಪ್ರಭೇದದಿಂ ।
ಪರಿಯಿಸುತೋರ್ವ ಪ್ರೌಢಗಳಿಗುಂ ನಲವಿಂ ಚಿಕದೇವಭೂವರಂ ॥೧೬೦

ವ॥ ಇಂತು ಬಿನದಮಂ ಬಿಡದೆ ಬಿತ್ತರಿಸುತ್ತುಮಿರೆಯಿರೆ ॥೧೬೧

ಒಂದುಂ ದಿನಸಂ ನೇಸಱೊ ।
ಳೊಂದಿರೆ ಘನರಾಗಮೋಪರೊಳ್ಬಗೆಯೊಡನಾ ॥
ಕಂದರ್ಪಕಲಾಧರರೇ ।
ಱಿಂದೆಕ್ಕಟಿ ಕುತುಕದೇಳ್ಗೆಯಂ ಕೊನರಿಸಿದರ್ ॥೧೬೨

ವ॥ ಈಗಳ್ ॥೧೬೩

ಮಾನೋಮಿಯುಚ್ಚೆಪದೊಳಂ ।
ದೀನಿಸ್ಮುಡಿಯೆಲಗಕ್ಕೆ ಬಂದರಸರವೋಲ್ ॥
ಮೀನಾಂಕನುಮೆಯ್ದರೆ ತ ।
ತ್ಸೇನೆಯೆನಲ್ ಮೆಱೆದುದಮಮ ! ಪಲವೆಲೆವೆಣ್ಗಳ್ ॥೧೬೪

ದೇಸೆಯನಾಂತ ಕನ್ನಡಿತಿಯರ್ ಕವಡೆಯೊಂದಿದ ಚೆಂದದಾಂಧ್ರಿಯರ್ ।
ವೊಸವನೀವ ಬಾಸೆಯಿಲಿಗಳ್ ದ್ರವಿಡಾಂಗನೆಯರ್ಕಳುಂ ಪಲರ್ ॥
ವೇಸಿಯರುಳ್ಳ ವೈಸಿಕವನಿಸಿಯೆಡೆಯೊಳ್ ನೆರೆವರ್ಗಡರ್ಕೆ ಪೇ ।
ರಾಸೆಯೊಳಾಟಪಾಟತನಿವೇಟಿಪ ಕೂಟಿಪ ನಾಟಕಂಗಳಂ ॥೧೬೫

ದೇವರ್ ಬೆಸಸಿದೊಡಿಂದಾ ।
ವಾವಿಧಿಯೊಳಗಂತರಂಗಬಹಿರಂಗದ ನಾ ॥
ನಾವಿಧವಿನೋದದಿರವಂ ।
ಭಾವಿಸಿ ತಂದಿಡುವೆವಿಲ್ಲಿ ಕೈನೆಲ್ಲಿಯವೋಲ್ ॥೧೬೬

ವ॥ ಎನೆ ಕೇಳ್ದು ಕಿಱಿಯರಸನುಂ ಕೆಳೆಯನುಮೋರೊರ್ವರಂ ನಿಟ್ಟಿಸಿ ಯೊಡಂಬಟ್ಟು ॥೧೬೭

ಆವಿವರೆಂಬೀಭೇದವನು ।
ನಾವಱಿಯೆವು ಹಾದಿಬೀದಿಗರ್ ಬೇಱಿಂದೇ ॥
ತಾವಱಿವರದಱಿನಿವರಿಂ ।
ದೀವೇಳೆಯೊಳೆಸಗಿನಱಿವವಿಂಬಿನದಗಳಂ ॥೧೬೮

ವ॥ ಎಂದವರಿರ್ವರಂ ಬಿಱಿಸ್ಸಾಟ್ಟು ಸಂತಸಮಿರ್ವರ್ ॥೧೬೯

ಪೌರ್ವರ್ ಸರ್ವಕಲಾಕಲಾಪಕುಶಲರ್ ತಾವಕ್ಕೆ ತತ್ಸಕ್ತಿಯಿಂ ।
ದುರ್ವಿಳಶರ್ ಬೆಸವಾಂತು ಗೆಲ್ದುಪೊರೆದಿತ್ತೊಳ್ಪಂ ಜಸಂಗೊಂಡು ಕ ॥
ಟ್ಟುರ್ವಿಂ ಪೆಚರ್ಗೆ ನಿಚ್ಚವುಂ ಪರದರುಂ ವಾಣಿಜ್ಯಗೋರಕ್ಷೆಯಿಂ ।
ಸರ್ವೈಶ್ವರ್ಯವನಪ್ಪುಗೊಕ್ಕಲಿಗರುಂ ಮಿಕ್ಕಿರ್ಕೆ ತತ್ಸೇವೆಯೊಳ್ ॥೧೭೦

ಎೞಕದೊಳಪ್ರತಿಮಂ ಮಿಗೆ ।
ಮೆಱೆಯಿಸೆ ನೆಗೞ್ದೆಸೆವ ತಿರುಮಲಾರ್ಯನ ಕೃತಿಯೊಳ್ ॥
ಮಿಱುಪೈದನೆಯಾಶ್ವಾಸಂ ।
ನೆಱೆಯುಮ ಚಿಕದೇವರಾಜವಿಜಯದೊಳಗಳ್ ॥೧೨೧

ಇದು ಯದುಗಿರಿಶಿಖರಾಭರಣಶ್ರೀಮನ್ನಾರಾಯಣಚರಣಪರಿಚರಣಪರಾಯಣ ಶರಣಾಗತರಕ್ಷಣವಿಚಕ್ಷಣ ಸಕಲಕಲಾಪ್ರವೀಣ ಬಿರುದಂತೆಂಬರಗಂಡ ಲೋಕೈಕವೀರ ಭೂರಿತುರುಷ್ಕಶುಷ್ಕವನದಾವಾನಲ ಮರಾಟರಘಾಟಮೇಘಘಟ್ಟಾವಿಘಟನನಿರಾಘಾಟ ಪ್ರಳಯಕಾಲಜಂಝಾನಿಲ ಪಾಂಡ್ಯಮಂಡಲಾಧಿಪವೇತಂಡವಿಲುಂಠನಕಂಠೀರವ ಮಲೆಪನೃಪಮದಮರ್ದನ ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪನಪ್ರತಿಮವೀರನರಪತಿ ಶ್ರೀಚಿಕದೇವಮಹಾರಾಜ ಕೃಪಾಪರಿಪಾಲಿತ

ಶ್ರೀತಿರುಮಲೆಯಾರ್ಯ ವಿರಚಿತಮಪ್ಪ

ಚಿಕದೇವರಾಜವಿಜಯ ಮಹಾಪ್ರಬಂಧದೊಳ್

ದೇವರಾಜದಿಗ್ವಿಜಯ ಚಿಕದೇವರಾಯದಿನಚರ್ಯಾದಿವರ್ಣನಂ

ಪಂಚಮಾಶ್ವಾಸಂ ಸಂಪೂರ್ಣಂ.



ಷಷ್ಠಾಶ್ವಾಸಂ.

---

ಶ್ರೀ ನೆಲಸಿರೆಯುಂ ತನ್ನೊಳ್ ।
ತಾನೆರೆವಂ ಖರ್ವನೆನಿಸಿಯುಂ ಕಡುನೀಳ್ದಂ ॥
ಬಾನೊಳ್ ಪೊಳೆಯಂ ಪರಿಸಿದ ।
ನೀಂ ನರಪತಿಗೆಱೆಯನಕ್ಕೆ ಸೋಜಿಗಗುಜ್ಜಂ ॥೧

ಪೊಂಗೊಳಲಾಂತು ನಿಂದು ನಸು ಮುಗುಳ್ನಗೆ ಕೊಂಕಿನ ಬಿಂಕವೆಯ್ದೊಗರ್ ।
ಪೊಂಗುವ ನುಣ್ಸೊಮ್ಮಗಂ ಪೊರೆದು ಪೊಂಬಡುವ ಸಂಜೆನ ನೋಟದಚ್ಚರಿಯಿಂ ॥
ಸಂಗಜವೀರನಾರುಬಟೆಯಂ ಪಟುಗೆಯ್ಯುತೆ ಬಾಜಿಪೋಜೆಯೊಳ್ ।
ಸಿಂಗರಗೋವಳಂಗೆಳಸಿದಂತೆಪೊಲಾವಗಮಕ್ಕೆ ಮಂಗಳಂ ॥೨

ಆಕಂದರ್ಪಕಲಾಧರ ।
ರಾಕಾರದಿನಖಿಲನಯನವರ್ತ್ಯಂಜನದಿಂ ॥
ದಾಕಂದರ್ಪಕಲಾಧರ ।
ರೇಕರವಿಪರೆಂಬಿನಂ ಮನಂಬುಗೆ ವಂದರ್ ॥೩

ದೆಸೆಗೆಲಲೆಂದೊಡನೊಂದಿದ ।
ಕುಸುಮಾಯುಧಶಶಿಗಳೋಜೆವಡೆದುರ್ವರುಮೆ ॥
ಬ್ಬಿಸಿವಿಸಿಲ ಮಿಸುಪ ಸಂಜೆಯ ।
ಮಸಕಂ ಮಿಗೆ ತಂಗಚ್ಚರಂದು ಪೊಸವಗೆಯಿಂದಂ ॥೪

ಪಡಿಬರಿಸದೊಡೆಯುಂ ತಗು ।
ಳ್ದೊಡವಾಯ್ದು ಪ್ರತಿಸುವಿರನೋಜಸ್ತವನಂ ॥

ಪಡುಗಡೆಯೊಳ್ ಪಡುವಿನಮಿನ ।
ನಡೆದುರ್ದು* ಗೆಲವ್ರೊಂದಿ ಸಂಜೆಗೆಂಪಿನ ನೆವದೊಳ್ ॥೫

ಆಗಸವೆಂಬಶೋಕೆ ತಳಿರಾಂತುದೊ ಕೆಂಗುಡಿ ತಳ್ತುದೋ ನಭ ।
ಸ್ಸಾಗರದೊಳ್ ವಿಹಾಯುಸರಸೀಪತಿ ಪೊನ್ನುಡೆಯುಟ್ಟನೋ ವಿಯ ॥
ನ್ನಾಗಮುವಭ್ರಗೈರಿಕರಜಂಗಳೊಳದ್ದುದೊ ತಾನಿದೆಂಬಿನಂ ।
ಬೈಗಿನ ಸಂಜೆಗೆಂಪು ಬಳೆದತ್ತುಡನೊಂದಿ ಮನೋಜನೋಜದೊಳ್ ॥೬

ಅಸಿತಾಧ್ವಾಂಬುಧಿಬಾಡಬಂ ಗಗನವನ್ಯಾನಾಪವಂಭ್ರಾಂಜನಾ ।
ವನಿಭೃದ್ಗೈರಿಕಸಾನು ವಿಷ್ಣುಪದಕಾಳಿಂದೀಹ್ರದೋತ್ಫುಲ್ಲಕೋ ॥
ಕನದಶ್ರೇಣಿ ವಿಯದ್ವರಾಹತನುಲಿಪ್ತಾರಕ್ತಜಂಬಾಲಮೆಂ ।
ಬಿನಮೇಂ ತಳ್ತುದೊ ಸಂಜೆಗೆಂಪಪರದಿಕ್ಕಾಂತಾಸುರಾಗೋದಯಂ ॥೭

ಜೃಂಭತ್ಕೋಕೀವಿಯೋಗಾನಲವಿಪ್ರುಲಶಿಖಾಜಾಲಮುತ್ತಾಲನೃತ್ತಾ ।
ರಂಭಕ್ಷುಭ್ಯದ್ಗಿರೀಶಪ್ರಚುರತರಜಟಾಮಾಲಮಾಶಾಂಗನಾಕೌ ॥
ಸುಂಭಾರಕ್ತೋತ್ತರೀಯಂ ಮಸಗಿತು ರಜನೀದ್ರಾಮಿಡೀಗಂಡಪಾಳೀ ।
ಶುಂಭತ್ಸಿಂದೂರಕಂ ಸಾಂಧ್ಯರುಚಿರವಿಕರೋತ್ಕೃತ್ತಮಂದೇಹರಕ್ತಂ ॥೮

ದಿನಮಣಿಜಂ ದಿನಮಣಿಯುಂ ।
ಜನಮಱಿವಂತೀಯೆ ಚರಮಭೂಭೃತ್ತಿಂಗಾ ॥
ತನುಮದನೊಡನಪಲಪಿಸ ।
ಲ್ಕನುಗೆಟ್ಟುಟ್ಟನೋ ಕಷಾಯಾಂಬರಮಂ ॥೯

ಬಳೆಗುಂ ತತ್ಕ್ಷಣಶಾಂತಸಾಂಧ್ಯರುಚಿವಹ್ನಿಜ್ವಾಲಧೂಮ್ಯಂ ಸಮು ।
ಜ್ಜ್ವಳಸಂಧ್ಯಾಂಶುರಸಾಲಪಲ್ಲವನವಗ್ರಾಸಾತಿಮೋದಸ್ವಿಕೋ ॥
ಕಿಳಬೃಂದಂ ರಜನೀಮುಖಾರುಣನವಾಸೃಕ್ಪಾನದೃಪ್ತಾಸುರಾ ।
ವಳಿ ತಾನೆಂಬಿನಮುರ್ಬಿ ಜರ್ಬಿ ಜಗಮಂ ಧ್ವಾಂತಂ ಸಮಂತನ್ನೆಗಂ ॥೧೦

ಪಣೆಯೊಳ್ ಸೂದಿನ ಬೊಟ್ಟು ಕಣ್ಗಳೆಡೆಯೊಳ್ ತಳ್ತಂಜನಂ ಸಂಪ ಕ |
ರ್ವೇಣಿಸಚ್ಚಂ ಕಿವಿಯೊಳ್ ಜವಾದಿ ಕೊರಲೊಳ್ ಕಸ್ತೂರಿಕಾಪಂಕಮು ||
ಲ್ಬಣವಕ್ಷೋಜದೊಳ್ಪೆದೆ ಕಾಗಿನುಡೆ ಮೆಯ್ಯೊಳ್ ಪೊಣ್ಮೆಯಂಗಾಗೆ ಭೂ |
ಷಣಸೌಭಾಗ್ಯಮನಿತ್ತು ಕೊರ್ಬಿಸುತುಮೊಪ್ಪಿರ್ದತ್ತು ಪುರ್ಬುರ್ಬಿನಿಂ ||

ಕಾಳಿಂದೀಜಲದಿಂದಮೇಂ ತೊಳೆದನೋ ತಣ್ಪಿಟ್ಟನೋ ಕಾರಗಿ |
ಲ್ಗೂಳಿಂ ಕತ್ತುರಿಯಿಂದಮುಣ್ಪಿಡಿದನೋ ಬೈತಿಟ್ಟು ಕಾಪಿಟ್ಟನೋ ||
ನೀಳಪಾವರಣಾಂಶುಕಾಂತರದೊಳಂಭೋಜೋದ್ಭವಂ ನನ್ನಿಯಿಂ |
ಬಾಳಾಪಕ್ಕಡೆಯಾಗಿ ಮೂಜಗಮುದೆ ನೊಪ್ಪಿತ್ತು ಪೆರ್ಪುರ್ಬಿನಿಂ ||೧೨

ಜಲವೆಲ್ಲಂ ಯಮುನಾಂಬು ವಾರಿರುಹಮೆಲ್ಲಂ ಪುಲ್ಲಸಿ ಲೋತ್ಪಲಂ |
ನೆಲನೆಲ್ಲಂ ವಿಪಿನಸ್ಥಲಂ ತರುಗಳೆಲ್ಲಂ ತಳ್ತಕರ್ದಾಳೆಯುಂ ||
ಳ್ಳಲರೆಲ್ಲಂ ವಿಕಚಾತಸೀಸುಮಮಿಳಾಭೃತ್ಸಲ್ಲಮಾಕಜ್ಜಲಾ |
ಚಲಮುಶ್ಮನ್ರಜಮೆಲ್ಲಮಿಂದ್ರಮಣಿಬೃಂದಂ ಲೋಕಮೆಲ್ಲಂ ತಮಂ ||೧೩

ಉಂಬಲ್ಲಂಬೀಯೆರಡಱ |
ಗೆಂಟಂ ಪರಿಹರಿಸಿ ಮೂಜನೆಯ ಪ್ರಸವಗೆಯಂ ||
ಗೆಂಟಕ್ಕಿ ನಿರ್ವಿಶೇಷದೆ |
ಳೆಂಟುಪ್ರದೀಜಗಮನಮರೆ ತಿಮಿರಾದ್ವೈತಂ ||೧೪

ದಿನಮಣಿಯುನಸಲೆಂಪಜ |
ನೆನಿತಾನುಂ ತುಳ್ಕೆ ಪರಿಪ ಜಲಧಿಯ ಜಲಮಂ ||
ದನೆ ಕಾರ್ಗತ್ತಲೆ ತಳ್ತದೆ |
ಯನುಕರಿಸಿತು ನೊರೆಯ ಸಿರಿಯನೆಡನುಡುನಿಕರಂ ||೧೫

ಚಟುಲಿತಮುಸ್ಸಮೂಹಮಸಿಪಗ್ಗದ ಪೆರ್ದೆರೆ ಪಾಱ ತಾರೆಗಳ್ |
ಸ್ಫುಟತರಮಾಗೆ ಸೂಡಲಮರೇಂದ್ರನಲರ್ಚಿದ ಕಣ್ಗಳಂತೆವೋಲ್ ||

ನಟಿಪೊಡೆ ನಾಡೆ ಮೂಡದೆಸೆವೆಣ್ಗೊಲವಿನ್ನೆಲೆ ಸಂಜೆಯೆಂಬ ದೂ ।
ವಟದೆಱ ಜಾಱ ತುಂಬುವೆಱದೋಱ ಪಟಚ್ಚನೆ ಮಿಂಚಿತನ್ನೆಗಂ ॥೧೬

ಎಸೆವುದು ಸಂಜೆಗೆಂಪೆನಿಪ ಕಾಪನ ಜಕ್ಕೊಳೆಯು ದೂಳ ದಾಱಗಂ ।
ಮುಸುಕುವ ಮರ್ಬಿನಿಪ್ಪಿಡುವ ಬೂಣತುಪಾಕದ ಧೂಮಮುರ್ಬುಗಂ ॥
ಮಿಸುಪಱಲೆಂಬರಲ್ಗಣೆಗಮುಳ್ಪದ ಕಲ್ಲದಿರ್ವೆಣ್ಗೊಳ್ದತ್ತನಾ ।
ಬಿಸೆಯುರಿಗೊಂಡು ಪ್ರಾಣ್ಮುವ ಪಿರಂಗಿಯು ಗುಂಡೆನೆ ಚಂದ್ರಮಂಡಲಂ ॥೧೭

ಅವರ್ದಿಲ್ಲಂ ಮುಳಿದಂಬುಜಾತಶರಮಂ ಕೊರ್ಗ್ವಿದು ಮೂಲೋಕಮಂ ।
ಗೆಲಲುರ್ಬಿಟ್ಟು ತೆರಳ್ವನಂ ಮಘವದಾಶಾಕನ್ಯೆ ನಕ್ಷತ್ರಸಂ ।
ಕುಲಲಾಜೋತ್ಕರಮಂ ಕರಂ ತಳಿವ ಜೇನಂ ಜೀವಸಂರಾಗಮಂ ।
ಗಲಗಾನಂಬೆರಸೆತ್ತುವಾರತಿಯ ಚೆಂಬೊಂದಟ್ಟೆಯೋ ಚಂದ್ರನೋ ॥೧೮

ಸ್ಮಿತಮುಖದೊಳ್ ಮಹೋನ್ನತಿಯನಾಂತುದಯಾಚಲಶೃಂಗಮೆಂಬ ಮಾ।
ರುತಿ ಕುಡೆ ತಳ್ತು ಮೆಯ್ವೆವರ ಬಿಂದುಗಳಂದದೆ ಸಂದ ತಾರಕಾ ॥
ತತಿ ಪೊಗರೇಱ ಸಂಧ್ಯರುಚಿನಲ್ಕಲಭಾಸುರನಭ್ರಜಾನಕೀ ।
ಪತಿ ತಳೆದಿರ್ದ ಬೈತಲೆಯ ನುಣ್ಮಣಿಯಂತೆಸೆದತ್ತು ಚಂದ್ರಮಂ ॥೧೯

ಜನತಾಹ್ಲಾದಮನೀವುದಚ್ಚರಿಯೆ ಚಂದ್ರಂ ಶಿಷ್ಟಕಾಂತಾನುರಂ ।
ಜನಮಂ ಮಾಱ್ಪನು ಪೆರ್ಚಿ ರಾಜನಮಳಶ್ರೀಕಾಂತನಾಗಿರ್ಪನಂ ॥
ಘನಮೋ ಪೇೞ್ ವಿಧು ಸತ್ವಮಾಗಮದೊಳೇ ಸಂದಿರ್ಪುದಾರಯ್ಯೆ ನಾ ।
ತನಮೋ ತಾಂ ದ್ವಿಜರಾಜನಬ್ಜನರಿದೇ ಪೃಕ್ಕಪ್ಪುದುಂ ಶೌರಿಯಾ ॥೨೦

ನೀಗಲ್ ಸಂಧ್ಯಾರಾಗರ ।
ಜೋಗುಣಮುಮನಳುರ್ವ ತಮಮುಮಂ ದ್ವಿಜರಾಜಂ ॥
ಬೇಗದೆ ನಿರ್ಮಲವಿಷ್ಣುಪ ।
ದಾಗಮದಿಂ ಪಡೆವ ಸತ್ವಮೆನಿಸಿತು ಜೊನ್ನಂ ॥೨೧

ಮಿಗೆ ಪರಿವೆಚ್ಚ ಪೊಚ್ಚಪೊಸಜೊನ್ನದ ಬಲ್ಸರಿ ಹೇಮಗರ್ಭನೊ |
ಲ್ದುಗಿಸುವ ಪಾವ್ಯದೊಂಜೆಯನೊಡಂಬಡೆ ತಾರೆಗಳರ್ಚಿಪೊಳ್ಳರ ‖
ಲ್ವೊಗರಿಡಿದೊಪ್ಪೆ ಚಂದ್ರನೆಸೆದತ್ತುದಯಾವನಿಭೃತ್ತ್ರಿವಿಕ್ರಮಂ |
ನೆಗಪಿದ ಪಾವದುಂಗುಟದ ಬಟ್ಟುಗುರೆಂಬಿನಮಂಬರಾಗ್ರದೊಳ್ ‖೨೨

ಖಂಡಪರಶುಗಳವಿಲ್ಲದ |
ತಾಂಡವದಿಂ ಬವಣಿಯೇಳ್ಗೆಯೊಡನದನಿಱಿಪಲ್ ‖
ಪಿಂಡುವ ನಿಂಬೆಯ ಪಣ್ ವಿಧು |
ಮಂಡಲಮುಳಜೊನ್ನಮೊಱಪ ನೀರ್ವೊನಲೆನಿಕುಂ ‖೨೩

ಘನಸತ್ತ್ವಂ ವಿಷ್ಣುಪದಾ |
ರ್ಚನೆಗೆಯ್ವಲ್ ಮಡಪಿಟ್ಟು ಶಶಿಶಂಖದೆ ಪಾ ‖
ಲ್ವೊನಲಿನಭಿಷೇಕಮಂ ಮಾ |
ಳ್ಪನವೋಲ್ ಪಸರಿಸಿತೊ ಮುಸಗಿ ಪೊಸವೆಳ್ದಿಂಗಳ್ ‖೨೪

ತಿಂಗಳುಮೊಡನುರ್ಕುವ ಬೆ |
ಳ್ದಿಂಗಳುಮುಕ್ಕುಂ ನಿರೂಪಕಾಂತಃಕರಣ ‖
ಕ್ಕಿಂಗಡಲ ಕುವರಿ ತಾಂ ಪಡೆ |
ದಂಗಜಶಿಶುಗೆಱೆಯಲಿಟ್ಟ ಪಾಲ್ಬಣ್ಣಿಯವೊಲ್ ‖೨೫

ಪಱಿಯಂಚೆಯ ತುಪ್ಪುಳ್ಗಳೊ |
ಕಱಿಯೆರಲೆಯ ಮೆಲ್ಕಿನುಗುವ ನೊರೆಗಳ ಸರಿಯೋ ‖
ನೆಱೆ ಬಿರಯಿಯ ಕೊನರ್ದೋಟದೆ |
ಪಱಿದಿಂದುವಿನುಗುವ ಸೊದೆಯೊ ಜೊನ್ನದ ಪೊನಲೋ ‖೨೬

ದೆಸೆವೆಣ್ಗಳ್ಗಂಶುಕಂ ಭಾನುವಿರಹಿನಯನೇಂದೀವರಪ್ರೋಲ್ಲಸ |
ದ್ವಿಪಿಸಿನೀಬೃಂದಕ್ಕೆ ರುಕ್ಕಿಂಗಡಿರುಣಿಪಱಿವಿಂಡಿಂಗೆ ತಾಂ ಪ್ರುಷ್ಟಿ ಕೋಕ ‖

ಪ್ರಸರಂ ಸಿಡಿಯಲ್ ಮಯೂಖಂ ಕುಲಿಶಿಸುರ ಪದದ್ವಂದ್ವಬಂಧಕ್ಕೆ ಮೋಹರ।
ಕ್ಷ್ಮಿ ಸಮುದ್ರಂಗೇಳ್ದು ನಾರಾಯಣನ ನಯನದಾಲೋಕಮಾದತ್ತು ಜೊನ್ನಂ॥

ಬಗೆದುದೊ ತಿಂಗಳಂಗೊಳದೊಳ್ ಸಿತೋತ್ಪಲಮಿಂದು ನಾರದಂ ।
ಮಿಗದೆ ನೆಲುಟ್ಟನೋ ಶಿಶಿರನಾಚಲದಲ್ಲಿ ತಮಾಲಭೂರುಹಂ ॥
ಬಿಗುರ್ವುದೊ ಕಾಗಿನೊಳ್ ಕೃಪೆಯನಾಂತನೊ ಚಂದ್ರಬಲಂ ಸಿತಾಂಶುಹಂ ।
ಸಗರುತದೊಳ್ ತೊಡಂಕಿದುದೊ ಶೈವಲಮೊಂಬಿನಮಾಯ್ತು ಲಾಂಛನಂ ॥೨೮

ನುಂಗಲೊಡರ್ಚಿದ ರಾಹುವ ।
ಸಿಂಗದಿರಂ ನುಂಗೆ ತೋರ್ಕುಮುಮುಲೋದರದೊಳ್ ॥
ಸಂಗತಮಿದುವಂತಲ್ಲದೊ ।
ಡೆಂ ಗಗನದೊಳಿರಲೆಯಾವೊಲಗಳುವೊಳವೇ ॥೨೯

( ನದಿನಮುವಂಬುಜಾಂಬಕ ।
ಸಿಸಬಿಂಬಾವಾಸಜನಿತಘನತಾಪ... ॥
...ವಿಧುಬಿಂಬದೊಳ್ ।
ರ್ದನುಗೊಳಸುಗುಣಜೆಯುದೇಕಿದಂ ಕಜೆಯೆಂಬರ್ ॥೩೦

ಯೋಗಿನುತಂ ರವಿಬಿಂಬದೊ ।
ಳಾಗಿರೆ ಹರಿ ಕಟಿಯ ನೆವದೊಳಾವಂ ಮದನಂ ॥
ಭೋಗಿನುತಂ ವಿಧುಬಿಂಬದೊ ।
ಳಾಗನೆ ಪಿತನಂತೆ ಸುತನಿದೇನಚ್ಚರಿಯೋ ॥೩೧

ವ॥ ಇಂತು ಬಣ್ಣಿಸುತ್ತೆ ವಿಲಾಸದಿಂ ವೇಳೆವಾಟವಂ ಪತ್ತೆಸಾರ್ವಿನಮಾ
ಸನಿಯದೊಳ್ ॥೩೨

ಪೂವಿನ ಸಂತೆಯೊಳ್ ಪೊಸತು ಪೊಣ್ಮೆ ಪ್ರಸನ್ನಪರಿಮಳಗಂಪಿನೊಳ್ ।
ಭಾವಿಸಿ ಗಟ್ಟಿವಳ್ಳಿಯರೊಡರ್ಚುವ ಸಾದಿನ ತಣ್ಪುಗಂಪಿನೊಳ್ ॥

ಕಾವನ ದಾೞಿಗಳ್ಕವಡೆವ್ರೋಷರ ಸುಯ್ಗಳ ಸುಗ್ಗಿಗಂಪಿನೊಳ್ ।
ತೀವಿ ಪೊದಱ್ದು ತೇಂಕುತೊಲವಿಂ ದಿದಿರ್ಗೆಂದುದು ಮಂದಮಾರುತಂ ॥೩೩

ವ॥ ಮತ್ತಂ ॥

ನುಣ್ಣನೆ ಬಾಚರ್ವೊಳ್ಕುಡಿಯುಮುರ್ಬಿನ ಪರ್ಬುಗೆಯೊತ್ತಿನಲ್ಲಿ ನ ।
ಲ್ವಣ್ಣಿಗೆವಾಸಿಗಂಗಳ ಮರಲ್ವುಡಿಯಿಂ ಪಲರ್ಣ್ಣಜೋಹವಂ ॥
ಪಣ್ಣಿ ಪಳಂಚಿ ಸಾಚರಿಸಿ ನೋಡುತೆ ವೈತಿಕದೇಶದೊಜೆಯಿಂ ।
ತಣ್ಣನೆ ತೀಡಿತೆಂದಳೆಯೊಲರ್ ನನೆಯಂಬನ ಚಾರನೆಂಬಿನಂ ।೩೪

ಸೊಗಯಿಟ್ಟು ಸೆರಗಿ ಮಲರ್ಗಣ ।
ಮುಗಿವನ್ನಂ ಬನ್ನವಡಿಸಿ ಪದ್ಮಿನಿಯುಂ ಮೆ ॥
ಯ್ದೆಗೆಯುವೆ ಕುಮುದಿನಿಗೆಳಸುತೆ ।
ಬಗೆಂಪುದು ಬಿರುದುಭುಜಗನಂತೆ ಸಮೀರಂ ॥೩೫

ಅಱಿವಗೆಯೇಪರೋಸಿಮುಳ್ಕದ ಸೊರ್ಕಿನ ಸೂರರುರ್ಕಿನಿಂ ।
ಘಟಿಲನೆ ಸಿಂಗರಂಬಡೆಯಿಮಂಗಜವೀರನಟಿಲ್ದು ಸಂಗರಂ ॥
ಗೊಳಲಿದೆ ಬರ್ಪನೆಂದೊವಱಿ ತುಂಬಿಗಳೆಂಬಟಗೋರ್ವಲನಾಂತೆಲರ್ ।
ತಳವರನಂತೆ ಸಾಱುತನುಗೆಯ್ದು ದರ್ಪಕವೀರಸೇನೆಯುಂ ॥೩೬

ಮುಡಿಗಂಪಂ ಸಪಿದಿಂಟ ಮುದ್ದನೊಸಂ ಮುಂಡಾಡಿ ನುಣ್ಗಲ್ಲಮಂ ।
ಬಿಡದಾಘ್ರಾಣಿಸಿ ಸೋಗೆಗಣ್ಗನೆಗಳಂ ಮುತ್ತಿಟ್ಟು ಮುಂಬಾಯ್ದು ಕೆಂ ॥
ಪಡರ್ದೋಳ್ವಾಯ್ದುಜೇನನಿಂಟ ಕೊರಲಂ ತಳ್ಕೈಸಿ ಪೇರಿಲ್ಕೞಿಂ ।
ತೊಡರ್ದೆಲ್ಲಾ ಜೆಲೆವೆಣ್ಗಳಂ ನಯಿಸಿ ತಣ್ಗಾಳಿಯುಂ ನೋಂತುದೋ ॥

ತೊಲಗಿಸಿ ಮೇಲುದಂ ತುಡುಕಿ ಬಿಣ್ಮೊಲೆಯಂ ತೊಡರ್ದಪ್ಪಿ ಮೆಯ್ಯನಂ।
ಡಲೆದುಡೆಯಂ ತೆಱಂಕಿ ತೊಡೆಯಂ ಪಿಡಿದಂಘ್ರಿಯನಿಂತು ತಣ್ಣೆಲರ್ ॥
ನೆಲೆವನೆಸಾಲ್ಗಳೊಳ್ ನಲಿಸಿ ವೈತಿಕದೇಶಗಳಂದೆ ಸಂಪ ಪೆ ।
ರ್ವೆಲೆಯೊಳವೆಣ್ಗಳಂ ನೆರಗುಮೆಂಸಿದಪ್ಪುದಭೀಷ್ಟಚಾರರೊಳ್ ॥೩೭

ವ॥ ಇಂತು ಕಂತುಬಲದ ನಾಸೀರವೀರನಂತೆಸೆವ ತೆಂಬೆಲರ ವಿಹಾರಾಯಿ ತಮನಾದರಿಸುತ್ತೆ ಮುಂತಣ್ಗೆ ನಡೆವುದುಮಲ್ಲಿ

ಕಂದರ್ಪಂ ಜನಮುನಿತ ।
ಕೆರ್ಗಂದೊಂದಂ ಸರಲನೆಸೆಸಿ ಸ್ಮೃತಿಡುವೆಡೆಯೆಂ ॥
ಬಂದದೊಳಲರಂಗಡಿ ಬಗೆ ।
ವಂದುದವ್ರೊಂದೊಂದನೆತ್ತಿ ಕಟ್ಟುವ ಕತದಿಂ ॥೩೯

ವ॥ ಇಂತಿರ್ಪ ಪೂವಿನ ಸಂತೆಯಂ ಪುಗು ಸಂ

ಬೆದಬೇಟಮೆಯ್ದೆ ಬಳಲ್ಕೆದ ।
ಮದನನ ಮಂತ್ರಾಸ್ತ್ರದಂತೆ ಮಾಸಿನಿಯೊರ್ವಳ್ ॥
ಪದಪಿಂ ಪಲವುಂ ಕೈಮುವ ।
ನೊಡವಿಸಿದಳ್ ಮಲರ ಪಸರವಿಕ್ಕುವ ನೆವದೊಳ್ ॥೪೦

ವ॥ ಆಗಳಾಕಂದರ್ಪನಾಣತಿಯಿಂ ಕಲಾಧರಂ ಸಲಿಲಮುಮಳ ಸನಿಯುಮಂ ಸಾರ್ದು ಸೆಳೆಮೆಯ್ಯಂ ನಿಟ್ಟಿಸುತ್ತೆ

ಎಲೆ ಸೊಬಗಿ ಸೊಲ್ಲಿಸಾ ನೀಂ ।
ಬೆಲೆಯುನಿವರ್ಕೆಂದೊಡಿನಿಸು ನಗೆಬಿನಯಂಗಳ್ ॥
ತಲೆದೋರ್ಜು ದೇವರೊಳ್ ಬಗೆ ।
ಯೊಲವೆಂತಂತಕ್ಕೆ ಬೇಳ್ಪುದಾವುದು ಬೆಸಸಿಂ ॥೪೧

ವ॥ ಎಂಬುದುಂ ಕಲಾಧರಂ—

ತನತೆನಿಪ ತಣ್ಪುಗಂಪಿಂ ।
ದನಿತುಂ ಮಲ್ಗೆಂಪನೊದವುದೆಂ ಪೂಸಿಯೆ ॥
ಮನವೊಲ್ದು ಪೆಱುವರ್ಕೇ ।
ನನುವೆಲೆಯೆನೆ ಮಾಲೆಗಾರ್ತಿ ಮುಗುಳ್ದಂತೆಂದಳ್ ॥೪೨

ಸುಮನಸ್ಸಿನಿರವನಱಿಯುದ ।
ವಿಮನಸ್ಸಿಂಗೈಸೆ ಪೋಱವೇೞ್ಪುದು ಬೆಲೆಯುಂ ॥
ಕ್ರಮದಿಂ ಕೈಕೊಂಡೊಡೆ ನೀಂ ।
ಸಮನಿಪ್ಪುಪಿಂದೆಮ್ಮ ಪೂರ್ವಪುಣ್ಯದ ಬೆಳೆಗಳ್ ॥೪೩

ವ॥ ಎನೆ ಕಲಾಧರಂ— ಅನಂತಕ್ಕೆ ;

ತಾವರೆ ಸಂಪಗೆ ಬಂದುಗೆ ।
ತೀವಿದ ಮೊನೆವೊಲ್ಲೆ ಮಲರ್ದ ಮಲ್ಲಿಗೆಯಲರಾ ॥
ತಾವಱಿತವರಿಸಿ ಸಮೆದೀ ।
ಪೂವಿನ ಸೆಂಡಿಂಗೆ ಬಯಸಿ ಪಾಯ್ದಪ್ಪುವಳಗಳ್ ॥೪೪

ವ॥ ಎಂಬುದುಮವಳ್—

ಪೂವಿನ ಪೊಸವಗೆಸೆಂಡಿದು ।
ಭಾವಿಸದಳಿಯಾಸೆಗೆಯ್ದಡೇನಳ್ಕಗುಮೋ ॥
ಆವಿಧಮಱಿತನುಭವಿಸುವ ।
ಭಾವುಕರೊಳ್ಗಕೆ ಕವಿಸುವುದು ತನಿಗಂಪಂ ॥೪೫

ವ ॥ ಎನೆ ಕಲಾಧರನಿದಿರ್ತಿರ್ಕೆ,

ಸ್ರೋಂಗುವ ಸಂಪಗೆವಂಡೆಯೊ ।
ಳಂಗೈಸುವರಖಿಳಜನರುಮ್ ॥

ವ ॥ ಎಂಬುದುಮವಳ್—

—ಆದೊಡವೋರೆೊ ॥

ರ್ಗಂ ಗಡ ! ತಿಳಿಪದಜನುವಂ ।
ಸಿಂಗರಿಸುವನಪ್ಪುಕೆಯ್ದು ಗೆಱೆಗೊರಲೆಡೆಯೊಳ್ ॥೪೬

ವ ॥ ಎಂಬುದುಂ ಕಲಾಧರಂ—

ಪೊಜಗಣ ಪಸರದೊಳರಿಸಿದ ।
ಕಿಱುವೆಲೆನನೆವಾಸಿಗಂಗಳಂ ಬೆಲೆಗೊಳಿಸೀ ॥

ಕುಱಿತುವನನುಗೆಯ್ದಿಸನಿ ।
ತಱೊಳಾವೆಯ್ತರ್ಪ ವೆಲೆಗೆ ನುಱಿಯುದಿರೆನ್ನಂ ॥೪೭

ವ ॥ ಎಂದು ಮುಂತಣ್ಗೆ ನಡೆದು ಗಂಧದಂಗಡಿಯೊಳ್ ಗಟ್ಟಿವಳ್ತಿಯಂ ನಿರವಿಸುತ್ತ ಸಲಿಲಮಿಂತೆಂದಂ :—

ಕೆದಱಿ ಕುರುಳೊದಱಿ ಚೆಲ್ಲೆಯು ।
ಮುದಿರೆ ಮಲರ್ಸರಿಗಳುದಿರೆ ಪ್ರನ್ನೋಲೆಗಳಂ ॥
ತಿದಿರೇಱಯುಬ್ಬಸಂ ಕಡು ।
ಚದುರೆ ನಿನ್ನೆಸಗುವೆಸಕವೆಂ ಸೊಗಯಿಪ್ಪುದೋ ॥೪೮

ವ ॥ ಎಂಬುದುಮವಳ್—ಆಮುಂತು ಬಱಲ್ದುಡಮುಣ್ಪು ನಿಮಗಿಂದಾದೊಡೆ ಸಫಲಮಪ್ಪುದೆನೆ; ಕಲಾಧರಂ—ಆದೊಡೀಗಂಧಂಗಳೊಳನುಪಪ್ಪುದಂ ನಿರವಿಸೆಂಬುದುಮವಳ್—

ಪ್ರಗಱ್ದನೆನ್ನ ಪುರುಳ್ಗಳಂ ಕೊನೆದೊಡೇಂ ಪೆಂಪೆಕ್ಕುಮೇ ನಿಕ್ಕುವಂ ।
ಬಗೆಯಂದಾವನದೊರ್ವೆಯೆನ್ನ ಸೊಗಸಪ್ಪಂ ಕೊಂಬನಾಜಾಣನಾ ॥
ವಗವೊಳ್ಪಂದಱಸುತ್ತುಮೆನ್ನನ ಮಗಱ್ದಿಯ್ತರ್ಪನಿಂತಪ್ಪುದಂ ।
ಜಗಮೆಲ್ಲಂ ತಿಳದಿರ್ಪುದೀಗಳದೆ ನೋಡಿಂ ನೀಮುಮಿಂಗಟ್ಟಿಯಂ ॥೪೯

ವ ॥ ಎಂದು ಪಲವುಂ ಬರಣಿಗಳನಿದಿರಿಡುವುದುಂ; ಕಲಾಧರಂ—

ಏಂ ಬಱಿವೆ ಪರಪುಷ್ಟೆ ಪಲ ।
ವುಂ ಬರಣಿಯುನಿರಿಸು ಕೆಲಕೆ ನೆಲೆವೆಲೆವೇಱಾ ॥
ಪೊಂಬರಣಿಗಳೆರಡಕ್ಕರಂ ।
ಚೆಂಬರಣಿಗಮಿನಿತಱಿಂದೆ ತಣಿದಪೆವೀಗಳ್ ॥೫೦

ವ ॥ ಎಂದಾಭರಣಿಗಳಂ ನಿಟ್ಟಿಸುತ್ತೆ,

ಪೊಂಬರಣಿಯು ಮೇಲೇನಿದು ।
ತುಂಬಿಯೆ ಕತ್ತುರಿಯ ಬೊಟ್ಟೆ ಕಾರಗಿಲಸ್ಪೇ ॥

ಕೊಂಬೆಂ ಕೈಯೊಳ್ ನಿನಗೆ ಮ |
ನಂಬಕರ್ಣಮೆ ಸುಕರ್ಣವೇಡ ಗಟ್ಟನೆ ಪೇಟಾ ||೫೧

ವ || ಎಂಬುದುಂ ಕೇಳ್ದವಳ್—ದೇವರೊಡವೆಯೊಳ್ ದೇವರಿಚ್ಚೆವಂದಂತೆ ಎಂಬುದುವಿದುವಂ—

ಬೈತಿರಿಸೇಭರಣಿಗಳಂ |
ಕೈತಡಕಿಂಗಿಲ್ಲನಂತೆ ಕಾಲುರಿಚಗರ್ ||
ವೈತರ್ಪ್ರವುಚಿತಸಮಯಕೆ |
ಸೈತಿರು ನೀನೆಂದು ನುಡಿಯುತಲ್ಲಿಂ ನಡೆದರ್ ||೫೨

ವ|| ಆಗಳಾಯೆಡೆಯೊಳ್ ಕಂದರ್ಪನತಿದರ್ಪದಿಂದಿದಿರ್ವರ್ಪಳೊರ್ವಳಂ ನಿರವಿಸಿ—

ಪ್ರಾಸವಗೆಚೆಲ್ಲೆಯಂ ಪೊಳಪುವೆತ್ತನೊಸಲ್ ಪೆರ್ಗೊಂಕುನಾಮವೊ |
ಳ್ಮಸುನಿಯು ಮಿಂಚಿನೋಲೆ ಮಿತಿಮೀಱಿ ಪಳಂಚುವ ಸಂಚುನೋಟದಿಂ ||
ಮಿಸುಪ ಮೊಗಂ ಸೊಗಂಬಡೆಯೆ ಮೆಳೆಯುಮಂ ಬೆಲೆಗೆಯ್ವ ಪಾಂಗಿನಿಂ |
ರಸಿಕರ ಚಿತ್ತಮಂ ಬೆಲೆಗೆ ಕೊಂಬಳವಳ್ ಬಱಸಂದು ಸೊಲ್ಲಿಸಾ ||೫೩

ವ|| ಎಂಬುದುಂ ಕಲಾಧರಂ—

ಎಲೆಗೆ ಬೆಲೆಗೆಯ್ವುದದು ಬೆ |
ಳ್ಳೆಲೆಯೋ ಮಾಱಾಳವೆಣ್ಣೊ ಮಱಯೋನುಸಿರಾ ||

ವ|| ಅದರ್ಕವಳ್ ಕೆಕ್ಕರಿಸಿ ನೋಡುತ್ತ,

ಎಲೆಗೆಳಸುವರನಿಬರುಮಾ |
ಯೆಲೆಯುಮನಂ ತಿಳಿದು ಕೊಂಬ ಕೋವಿದನಾವಂ ||೫೪

ವ|| ಎನೆ ಕಲಾಧರಂ—

ಬಿಡೆಯುಮಿದೇತಕೆ ಕಪರಿ |
ಕುಡುಪಂದದೆ ಕೊಟ್ಟೊಡಾನೆ ಕೊಂಬವನುಸಿರಾ ||

ವ || ಅವರ್ಕಳವಳ್—

ಕಡುಜಾಣ ನೀನೆ ಪೇಳಾ |
ಕುಡುವುದಱೊಳಗಂದವಾವುದಾಬಣ್ಣಿಗೆಯಂ ||೫೫

ವ || ಎನೆ; ಕಲಾಧರಂ—

ಕುಡತಕ್ಕುದೆನಿತದನೆ ಇ ||
ರ್ಮುಡಿಸಿ ಕುಡಲ್ಕಗುವೆ ಕೊಂಬ ಕೋವಿದರ್ಗಂದಂ ||

ವ || ಅವಳ್—

ಕುಡುವೆನಿದೇ ಕೊಳ್ವುದು ನೀಂ |
ನಡುವೀದಿಯೊಳ್ಪ್ಪಲಾರ್ಪರೇ ಎಲೆವರದರ್ ||೫೬

ವ || ಕಲಾಧರಂ ವಿಲಾಸದಿಂದೊರ್ವಳೆರ್ದೆಯೊಳಿಟ್ಟ ಒಟ್ಟಯುಂ ಕೈವಿಡ ದೆಲೆವಿಂಡಿಯುಂ ತೋಱುವ ಕೈವರಲುವಾಗಿ,

ಈಪಿಂಡಿಗಳೆರಡರ್ಕನು |
ರೂಪದ ಬೆಲೆಯಾವುದದಱ ನೆಲೆಯುಂ ಪೇಳಾ ||

ವ|| ಅವರ್ಕಳವಜ್ಞೆಯಿಂ ಕೈವಿಡಿದ ಪಿಂಡಿಗಳಂ ಮುತ್ತಣ್ಗೆ ನೀಡಿ,

ಈಪರಿಯ ಪೆರ್ಮೆವಾತುಗ |
ಳೀಪರಿಯುರವಣೆಗಳನಿತುಮೇನಿನಿತರ್ಕೇ ||೫೭

ವ || ಎಂಬುದುಂ ಕಲಾಧರಂ—

ಪದಪಿಂದಂ ಪಸರದೊಳ್ |
ಟ್ಟುದಱನುದಂ ನಿಟ್ಟಸುತ್ತೆ ಬೆಲೆವೆಸಗೊಂಬರ್ ||
ಚದುರರ್ ತೋಱದೆ ಮಱೆವಾಂ |
ಜೆದುದಂ ಬೆಸಗೊಂಡು ಬಱಿದೆ ನಗೆಗೀಡೆನಿಸರ್ ||೫೮

ವ|| ಅದಱಿಂ,

ಇದೆ ಕೊಳಲಾನನುವಪ್ಪಂ ।
ಪದೆದಾವ್ರುದನಿವೆಯುದಱ ನೆಲೆಯಂ ಬೆಸಗೊ ॥

ವ॥ ಅವಳ್–

ಕದುಬಱರೆ ಕಾಣ್ಕೆಗೆಯ್ವಂ ।
ಹೃದಯಕೆ ಸರಿವರ್ಪುದಾಗಳದಱ ಗುಣಂಗಳ್ ॥೫೯

ಬಗೆಗಾಱರ್ಗಂದು ಮೀಸಲ್ದೆಗೆದನುವಿನೆರಲ್ಪಂತಿ ಬೇಱುರ್ಪುದೊಪ್ಪಂ । ಮಿಗೆ ಬಣ್ಣಂಬೆತ್ತ ಪೊನ್ನಂದದೆ ತಳತಳಸುತ್ತುಂ ಪದಂ ಮೀಱದಿನ್ನುಂ ॥ ಬಗೆವನ್ನಂ ಕಪ್ಪವೊಂದಿರ್ಪುದು ಕೊನೆಕೊನೆಯೊಳ್ ತಣ್ಪುನುಣ್ಪಿಂಪು ಮಿಕ್ಕೆ । ಳ್ಪ್ನಗಸಂದೋರೊರ್ಮೆ ಕೈಯೊಳ್ ಪಿಡಿಯಲೊಡವುವುಗುರ್ಗಂದ ಲಾನಂದವಾಗಳ್ ॥೬೦

ವ॥ ಎನೆ ಕಲಾಧರಂ ನಸುಮುಗುಳ್ನಗೆ ನಸಿಂ

ಬದವಿನ ಸಂತಸದಿಂದದ ।
ನಿದಿರಿಡದೆ ತರ್ಕೆ ಬಱದೆ ಬಣ್ಣಿಸಿ ಕಳವೈ ॥

ವ॥ ಅದರ್ಕವಳ್ ವಿನಯದಿಂ–

ಕನುಬದಿರಿದೆ ಕೈಕೊಳಿಪೆಂ ।
ಪನುಳದೊಳೆಯುತ್ತುರ್ಪುದೆಮ್ಮ ಪಸರಕೆ ಬೇಗಂ ॥೬೧

ವ ॥ ಕಲಾಧರಂ–

ಕಾಣದೆ ಕೇಳದೆ ಬಱದೇ ।
ಜಾಣಿಂ ಪಿಂದಣಿಂದು ಬರ್ಪೆನೇನೆಂದೆಲೆಗೇ ॥

ವ ॥ ಅದರ್ಕವಳ್–

ಕಾಣಿದೆ ಚೆಂಬಾಯ್ದೆಱೆಯಂ ।
ಮಾಣಿನ್ನೀಪರಿಯು ಮನದ ಬಱಸಂದೆಯುಮಂ ॥೬೨

ವ|| ಎಂದು ಚೆಂಬಟಿಯುಂ ಮುಂತಣ್ಗೆ ನೀಡೆ ಕಲಾಧರಂ

ಸವಿಯುದೆ ಕೈಯೊಳಗಳ್ದು ನಿ |
ರವಿಸದೆ ಬೆಂಗೊಂಬುದುಚಿತಮಲ್ತಾದೊಡಮೇಂ ||
ಸವನಿಸಿ ತೋಱುವ ಬಾಯ್ಗೞ್ |
ಬವಳದ ಚೆಂಬಣ್ಣಮಿಂತು ಬನ್ನಂಬಡಿಕುಂ ||೬೩

ವ|| ಇದೆ ಬಂದಪೆಂ; ನೀಂ ಮುಂದೆ ಪೋಗಿ ಸನ್ನವಂಗೊಳಪುದೆಂದವಳಂ ಕಳುಪಿ, ಮುಂತಣ್ಗೆ ನಡೆವುದುಂ; ಕಂದರ್ಪಂ

ಇದೆ ಮುಂ ತೋಱಿದ ವೇಶವಾಟಮಿದೆಲೇ ಭೂಸ್ವರ್ಗಮೀತಾಣದೊಳ್ |
ಚದುರರ್ ಜವ್ವನಮೆಲ್ಲಮಂ ಕಳೆದಪರ್ ಕಾಂತಾಮುಖಾಸ್ವಾದದಿಂ ||
ದಿದೆ ಪುಣ್ಯಂಗಳ ಭೋಗಭೂಮಿಯಿದಱೊಳ್ ಕಾಮಂ ನೆಗೞ್ದೀಪರ |
ಗ್ಗದ ಗಂಡಂಗಮನಾಣೆಯಿಟ್ಟುರೆದು ಕಾಣ್ಬಂ ತಾರತಮ್ಯಂಗಳಂ ||೬೪

ವ|| ಮತ್ತಂ ||

ಚದುರಿಲ್ಲಿಂದಮೆ ಪರ್ವಿತೆಲ್ಲಜಗಕಂ ಜಾಣ್ಪೊಂಗಿದತ್ತಿತ್ತಣಿಂ |
ಪದುರೀತಾಣದೆ ಬಲ್ಪುವೇವಸತಿಯಿಂ ... ಮೆಲ್ಪಾತು ಪಾ ||
ಯ್ದುದು ಗನ್ನಂ ಗಸಿಗಟ್ಟಿತಿಲ್ಲಿಯೆಡೆಯಿನೀತಾವಿಂದೆ ಸುಂದಿಚ್ಚೆಕಂ |
ಪದುಳಂಬೆತ್ತುದು ಮತ್ತಮೇಂ ಭವಸುಖಂ ಪೆಂಪಾದುದೀಬೀದಿಯಿಂ ||೬೫

ವ|| ಮತ್ತಂ||

ಬೇಟದ ಬೀಡು ಬಿಂಕದನುವಂಕದರಂ ಬಿನದಕ್ಕೆ ಪಟ್ಟಚೆ |
ಲ್ವಾಟದ ಪೇರ್ಮೆ ಜಾಣ್ಮುಡಿಯ ಚೌಕಿಗೆ ಸಿಂಗರಗೆಯ್ಮೆಯಂಗಳಂ ||
ಪಾಟದ ಪಾಳಿಯಂ ಪದಪಿನಾರವೆ ಕಾಮನಿಶಾಂತಕಾಮಿನೀ |
ನಾಟಕಶಾಲೆ ಸೋಲಿಸುವುದಗ್ಗದ ಸಗ್ಗದ ಭಾಗ್ಯದೇಳ್ಗೆಯಂ ||೬೬

ವ|| ಇಲ್ಲಿಗೆ ಬರ್ಪುದುಂ ||

ನೆಗೞ್ದುದು ನೇಹಮುಮ್ಮಳಸಿತಾಸೆ ಕೊನರ್ದುದು ಕೂಡೆ ಕೌತುಕಂ ।
ಬಗೆ ಪೊಗರೇಱಿತುರ್ಕಿತೊಡನುಕ್ಕಿದಮುಣ್ಮಿತು ಗರ್ವ್ವಮುರ್ಮ್ಮಹಂ ॥
ಸೊಗವೊಗೆದತ್ತು ಸೋರ್ಕಿನಿರವುರ್ಕಿಳಸಿತ್ತೊದವಿತ್ತು ಕಾತರಂ ।
ಬಗೆಬಗೆಯಾಯ್ತು ಭಾವಮೆನಿತೋ ಸಲೆ ಬಲ್ಮೆ ಮನೋಜವೀರನಾ ॥೬೭

ವ॥ ಈಯೆಡೆಯೊಳೈಸೆ,

ಸವಿಗೆಯ್ತಂಗಳನೊಲ್ದು ಸಾಣೆವಿಡಿದೊಪ್ಪಂಗೆಯ್ದು ಮೆಲ್ಪಾತಿನಿಂ ।
ಪವಣಿಂದಂಗೊಳೆ ಕೋದು ನಲ್ಗಣದೊಳಗ್ಗಂ ಮಾಱೆ ತೋರ್ಪನ್ನಮಾ ॥
ಭುವನಾನಂದಮೆನಲ್ಕೆ ನಾಂದಿಯುಮರ್ದಿಂ ಪಾದಾದಿಕೇಶಾಂತಮುಂ ।
ಭವಸರ್ವಸ್ವಮನಂಗಜಂ ಪಡೆದನೇಂ ಗಾಣಿಕ್ಯಮಾಣಿಕ್ಯಮಂ ॥೬೮

ವ॥ ಮತ್ತಮೇಂ,

ಸವಿನಯಹಾಸಿಯರ್ ಸರಸಮುಗ್ಧವಿದಗ್ಧಕಟಾಕ್ಷವೀಕ್ಷಣ ।
ಪ್ರವಣಿತವಿಷ್ಟಪತ್ರಿತಯಭಾವುಕಭಾವೆಯರಿಚ್ಛೆಗಾರ್ತಿಯರ್ ॥
ಯುವಜನಭಾಗ್ಯದೇವತೆಯರುತ್ಸವದೂತಿಯರೊಳ್ಪುಗಾರ್ತಿಯರ್ ।
ನವನವಕೌತುಕಾಹವಮನೋಹರಶೀಲೆಯರಲ್ತೆ ಸೂಳೆಯರ್ ॥೬೯

ಅಮರ್ದುಗಸರ್ಗಳಾತಿಳಗಳಂಗದಿರ್ಗಳ್ ತನಿತೆಂಬೆರಲ್ಗಳ ।
ಬ್ಜಮಧುರಕೀರಕೋದರವಿಯತ್ತುಗಳೆಂಬ ಪರಾರ್ಥ್ಯಪಂಚಭೂ ॥
ತಮನನುಗೂಡಿ ಕಾಮಪರಮೇಷ್ಠಿಯೊಡರ್ಚಿದ ನವ್ಯಸೃಷ್ಟಿಯೊಳ್ ।
ಸಮನಿಸಿ ಕಾರಣಾನುಗುಣಮೇಂ ಬಗೆವಂದುದೊ ವಾರಯೌವತಂ ॥೭೦

ವ॥ ಎಂದಿಂತು ಸಂತಸದಿಂ ಕಂದರ್ಪಂ ಕಲಾಧರನೊಡನೆ ನುಡಿಯುತ್ತಿರ್ಪನಂ ; ಬೆಂಗಡೆಯೊಳ್,

ಅರಸಱಿಕೆಯ ಬಿಜ್ಜಳಂ ।
ಪರಿಕಿಸೆ ಕಡುಮುದಮ ತಂದೆಗೋರ್ವನೆ ಕಂದಂ ॥

ಹರವಸದಿಂ ಹದವಱಿವೇಂ |
ಕರುಣಾಳುಗಳೊಳರೆ ಕಾವುದಱಿಯದ ಮುನ್ನಂ ‖೭೧

ವ‖ ಎಂಬ ನುಡಿಯನಾಲಿಸುತ್ತಿನು ವಸಂತಕನ ದನಿಯಂತಿರ್ಪುದಾಮಿಲ್ಲಿಗೆ ಬಂದೆವೆಂಬುದಂ ಕೇಳ್ದು ಬಱುವರುತ್ತ ಪರಿಹಾಸಪರಿಭವದಿಂ ಸಾಸಿಗರಿಂ ಮೋಸಂ ಬಂದುದರ್ಕೆ ಪುಯ್ಯಲ್ಚುವನಾಗವೇೞ್ಪುದು ಭರದೊಳವನಂ ಕಾಪಿ ಡುವವೆಂದಾಯೆಡೆಗೆ ಬರ್ಪುದುಮುಪಂ ಸಾಕ್ರಂದಂ ಕಂದರ್ಪನಂ ಕಾಲ್ವಿಡಿದು,

ಕರಣಂಗಳ್ ಕಳವಳಸುತೆ |
ಪುರುಳಂ ಪಲ್ಲಟಿಸಿ ಬಗೆವುದೇವಗೆಯುಡಱೋ ‖
ಮರುಳೋ ಮದೊ೯ ಮಾಟವೊ |
ನಿರವಿಸಿ ನೆಲೆಗೆಯ್ದು ಕಾವುಗೊಳ್ವುದು ಭರದೊಳ್ ‖೭೨
ವಿಪರೀತಮಾಗಿಯುಂ ಕಾ |
ಣಿಪುದೆನಗೀಕೇರಿಯಿರವುಮಾಕೆಗಳಿರವುಂ ‖
ವಿಪರೀತಬುದ್ಧಿ ಜನಿಸುವು |
ದಪಕರ್ಷದ ಕಾಲಕೆಂಬರೊದಱುವೆನದಱಿಂ ‖೭೩

ವ‖ ಕಲಾಧರಂ ಕಂದರ್ಪಂಗೆ ಕಾಮನ ಸೊರ್ಕು ಕೈಮಿಾಱಿ ಕಂಡದನಿಱಿ ಪಲ್ಕಿದೊಂದು ಕಪಟನಾಟಕಮುಂ ಕೈಕೊಂಡನೆಂದು ತನ್ನೊಳೆಣಿಸಿ ನಿನಗೆ ತೋರ್ಪಂದದಮುಂ ನಿರವಿಸೆಂಬುದುಮಾವಸಂತಕಂ—

ಠಕ್ಕಿನ ಪಱ್ಕೆ ಕಾಳಿಯ ತವರ್ ಕವಡಿಂಗಡೆ ಸೊರ್ಕಿನಿರ್ಕೆ ಬ |
ಲ್ವಕ್ಕಸದೊಕ್ಕಲೊಂಗಟೆಯ ಪೇಟೆ ಕವರ್ತೆಯ ಗೊತ್ತು ಕೈತವ ‖
ಕ್ಕೈಕ್ಕತಳಂ ಕನಲ್ಕೆಗಿರವಾಸಱವಾಸಮೊಡರ್ಗೆ ಬೀಡೆನಲ್ |
ತಕ್ಕರನೊಕ್ಕಲಿಕ್ಕೆ ಬೆಲೆವೆಣ್ಗಳ ಬೀದಿಯದೇಂ ಪೊದಳ್ದುದೋ ‖೭೪

ಪುರುಡಿಲ್ಲಿಂ ಪೊಸತಾಯ್ತು ಪೋರಟೆ ಪೊದಳ್ದಿತ್ತು ಕರ್ಕು ತೋಱಿತ್ತು ಪುಯ್ |
ಪಿರಿದಾಯ್ತು ಬಿರ್ಕಿತು ಕೊರ್ಬು ಸೂರುಳೊದವಿತ್ತು ಸರ್ಬಸಂಬೆತ್ತುದಾ ‖

ವರಿಸಿತ್ತಾಸೆ ಕನಲ್ಕೆ ಮಿಕ್ಕುಪುರುಬಿತ್ತೊಚ್ಚಾರವುಣ್ಕಿತ್ತು ಕಾ ।
ತರಮಿನ್ನೆಂತುಟು ಬಣ್ಣಿಪೆಂ ಕಳವು ಕೈವಿಮೀಱಿತ್ತಿದೇಂ ಕೇರಿಯಿಂ ॥೨೫

ವ॥ ಈಯೆಡೆಯೊಳ್,

ಬಿಸಗೆನೆಯಲಾತಿಳಿ ಪಾವಿನ ।
ನೊಸಲೊಳ್ಕಣ್ ಸುಯ್ಗಳಾಸ್ಯಕುಹರಂಗಳನು ॥
ಣ್ಕಿಸಿದಂ ಜವನವಱಿಂದೇ ।
ಪುಸಿವೆಣ್ಗಳ ಸೋಂಕಿನಱಿವುದೊಡವೆಯೊಡಲ್ಗಳ್ ॥೨೬

ಕವಡಿಂದಂ ಕರುವಿಕ್ಕಿತಕ್ಕಿನೆಱೆದೊಪ್ಪಂಗೆಯ್ದು ಕೂರ್ಪಿಂದೆ ಕೈ ।
ತವದಿಂದಂಗಕೆ ರಾಗಿಯಿಟ್ಟು ಪದಪಿಂದಂ ತುಂಬಿ ಚೈತನ್ಯಮಂ ॥
ಸವಿಪುಯ್ಯಾತನುಗೆಯ್ಮೆಯಿಂದೊಡರಿಸುತ್ತೊಳ್ಬಣ್ಣವಚ್ಚಂಗಳಂ ।
ಸವೆದಂ ಮಾಯದ ಬೊಂಬೆಯೆಂಬಿನವುನಂಗಂ ಸೂಳೆಯಂ ದಾಳೆಯಂ ॥೨೭

ವ॥ ಎನೆ ಕೇಳ್ದು ಕಳಾಧರಂ ಮನದೊಳ್ ವಸಂತಕನೀಕೇರಿಯೊಳ್ ತಿರುಗಿ ಪರಿಣತನಾದುದಱಿಂದೆಯುಮೆನಗೆ ಹಿತಪರನಾದುದಱಿಂದೆಯುಮೀಕೆಗಳ ಕೈತವಮಂ ಎನ್ನ ಪೊಸಜವ್ವನಗದುಬುಮಂ ಕಂಡು ನೆಲೆಯನೆಳಸಿ ಭಯದಾಕ್ಷಿಣ್ಯಂಗಳಂ ಪ್ರಕಟಮಾಗಿ ಪೇೞಲ್ಕಯಿದೊಂದು ನೆವದೊಳ್ ದಿಟ್ಟಂಗೊಳಿಸಿದನೆಂದಾಳೋಚಿಸಿ ಕಂದರ್ಪನೊಡನೆ—ಜೀಯ! ನಾವೀಸಬ್ಬವಕಾಱನ ಬೆಬ್ಬಳವಾತಿಂಗೆ

ಬೆಕ್ಕಸಮಪಡದೇತಕರ್ಗ ।
ಮುಕ್ಕತಳಂಗೊಂಬುದೊಳ್ಕೆಪ್ಪುಲ್ಲಮೆಯೆರಡಂ ॥
ತಕ್ಕರ್ ಕಳೆವರ್ ಗುಣಮಂ ।
ಮಿಕ್ಕರ್ ದೋಷಮನೆ ಕೊರ್ತು ದೂಱುವರಲ್ತೇ ॥೨೮

ವ॥ ಆದೊಡಮೀಮಿದಱೊಳ್ ಮುಗ್ಧರೆನಿಸದೆ ಪೂಸವಿಗೊಂಬ ತುಂಬಿಗಳಂ ತಲ್ಲಲ್ಲಿಗೆ ಕಿಱಿದುಂ ಬಿನದಂಗೆಯ್ಯುತ್ತೆ ಪೋಪಮೆಂದು ನುಡಿದು ವಸಂತಕನಂ ನೋಡಿ,—

ಆಂ ತಿಳಿದೆವಿದಱ ಗುಣಮಂ।
ಸೀಂ ತಿಳಿದ್ಯೆ ದೋಷಮಿರವನಿದನಾರಯ್ವ ॥
ನ್ನಂ ತಾತ್ಪರ್ಯಂ ಬೇಱರೆ।
ತಾಂ ತೋರ್ಕುಮೆ ಪೇೞ್ ವಿರೋಧಮಿಾಯೆರಡರ್ಕಂ ॥೭೯

ವ॥ ಅದೆಂತೆನೆ :—ಗುಣನಿರೂಪಣದಿಂದಿಲ್ಲಿ ಬಿನದಂಗೆಯ್ವಲ್ಕಕ್ಕುದೆಂದುಂ, ದೋಷಾನ್ವೇಷಣದಿಂದದಱೊಳಭಿನಿವೇಶಮಸಮಂಜಸಮೆಂಬುಂ ತೋರ್ಪುದ ಱಿಂ ಕಂದರ್ಪನೆಣಿಕೆಗಂ ನಿನ್ನೆಣಿಕೆಗಮಿಸಿತುಂ ಗೆಂಟಿಲ್ಲಮದಱಿಂದೇಕಹೃದಯು ರೆನಿಸಿ ಮುಂತಣ್ಗೆ ಪೋಪಮೆಂದು ಮೊತ್ತಮೊದಲ ಮನೆಯ ಮತ್ತವಾರ ಣಮಂ ಸಾರ್ವನಮಲ್ಲಿ ವಸಂತಕಂ ಸಂತಸದಿಂ,

ಇದೆ ಕಾನನ ನೆಲೆದೆಗುಲ।
ಮಿದೆ ಬೇಸೆವೆಣ್ತನದ ಸಿರಿಯ ಗುಡಿ ಬಿಂದಿಗಿದೇ ॥
ಮೊದಲ ಮನೆಯಿಲ್ಲಿ ನಿಂದಾಂ।
ಮದನಂಗಡಿಗೆಱಗಿ ಮಗುೞ್ ಪುಗವೇೞ್ಪುದಿದಂ ॥೮೦

ವ॥ ಎಂದು ಕೈಗಳಂ ಮುಗಿದು,

ಪೊಳೆಯುಮಂ ಪೊಕ್ಕೆವು ನಿ।
ನ್ನಾಳೆನಿಸಿದೆವಳ್ಕನೊದೆದು ನಾಣ್ಗಳಿದಿದೆಕೊಳ್ ॥
ಸೂಳೆಯರ್ಗೆ ಸೋಲಮಂ ಪೊಸ।
ಕಾಳೆಗದೊಳ್ ಜಯಮನೆಮಗೆ ಕರುಣಿಸು ಮದನಾ ॥೮೧

ವ॥ ಎಂಬಿನಮಾಮನೆಯ ಚಂದ್ರಶಾಲೆಯ ಕುಂದಣದ ಜಗುಲಿಯೊಳ್

ಬಾರೆನ್ನ ಭಾಗ್ಯಫಲಮೇ।
ಬಾರೆನ್ನೈಸಿರಿಯೆ ಮೆಱೆವ ಸಿಂಗರ ಸಿರಿಯೇ ॥

ವ॥ ಎಂದು ಪೊಣ್ಮಿದ ನುಡಿಯುಂ ಕೇಳ್ದು ಕಂದರ್ಪನೆಮ್ಮ ಮನದಮ್ಮ ಹಕ್ಕಿನುಡಿಯುಪಶ್ರುತಿಯಾದಪುದೆಂಬಿನಂ; ಮತ್ತಮಾಚಂದ್ರಶಾಲೆಯೊಳ್

ಬಾರಿಲ್ಲಿ ಬಾರ ಪೇೞ್ವೆಂ ।
ಪಾರಾಗಮತತ್ತ್ವಸಾರಮಂ ಬಗೆಗೊಳಿಸಾ ॥೮೦

ವ॥ ಎಂಬುದುಂ ಕೇಳ್ದು ವಸಂತಕನೀಯುಪಶ್ರುತಿ ಸಾಕ್ಷಾಚ್ಛ್ರುತಿಯಾದುದು, ಆವೆಲ್ಲರುಮಧಿಕರಿಸುವಮೆಂಬುದುಂ ; ನಸುನಗುತ್ತೆ ಕಲಾಧರಂ ವಸಂತಕನಂ ನೋಡಿ— ಎಲೆ ಧೂರ್ತ ಗಲಬೆಗಯ್ಯದಿರ್, ಬರ್ದ ಮುಪ್ಪುದುವೆಣ್ಗೆ ಪೇೞ್ವ ಬುದ್ಧಿವಾತನಾಲಿಪಮೆಂದು ಸ್ಮಿತಿಡುವುದುಮಾಚಂದ್ರಶಾಲೆಯೊಳ್ ॥

ಅಂಗದ ತನಿಸೊಬಗಿಂಗೆ ನೆ ।
ರಂಗೆಯೆ ಪ್ರಸವಸದನಂಗಳಾವಗಮೊಳ್ಪಂ ॥
ಸಿಂಗರವಡೆ ಪೆಣ್ಮಣಿಯೆ ಪ ।
ದಂಗೊಳಸೊಳ್ಗೊಂಡರೆರ್ದೆಯು ಪೊಸಪೊಸಸೊಗಸಿಂ ॥೮೩

ಬಗೆವಿನವಾವದೇಸೆಜೆಡೆಯಾವ ತುಱುಂಬುಗಳಾವ ಚೆಲ್ಲೆಯಂ ।
ಮೊಗಸಿಗಾವ ಬೊಟ್ಟು ತನಿಗತ್ತುರಿಗುಂಕುಮೆಗಪ್ಪುರಂಗಳೊಳ್ ॥
ಮೊಗಸಿಯುದಾವ ರನ್ನದೊಡವಾವನುವರ್ಣ್ಣದ ಪೆಟ್ಟೆಯುಂದು ವಾ ।
ರಿಗೆ ನಡೆವಂಗೆ ತಾಂ ಬಗೆಗೆ ವರ್ಪುದವಂತೆ ನೆಗಳ್ದು ಮೆಚ್ಚಿಸಾ ॥೮೪

ಮುನ್ನಿತ್ತುಡೆದೊಡವನಿದೆ ।
ನೆನ್ನದೆ ಕುಱುತಸನ ವಾರಿಯೊಳ್ ಧರಿಸದಱಿಂದಾ ॥
ತನ್ನೆಱ್ ಪಿಱ್ಗಿ ಬೆಸಂಗೆ ।
ಟ್ಟನ್ನೆಗವೊಲ್ದೀಪನೊಳ್ಪನೊಳ್ಕೈಡೆತೊಡವಂ ॥೮೫

ವ॥ ಎನೆ ಕೇಳ್ದು ವಸಂತಕಂ ಮೂಗಿನೊಳ್ ಬೆರಲನಿಟ್ಟು ತಲೆದೂಗಿ,

ಬದವಿಸಿ ನಡೆನುಡಿನೋಟದ ।
ಪದದಿಂ ಪೆಣ್ಗಳ್ಗೆ ಕಲಿಸುವರ್ ವೈಶಿಕವಂ ॥
ಮುದುಪಿ ದಲೀಕುಟ್ಟಣಿ ಮೆ ।
ಯ್ಪದುಳದ ಗಯ್ಮೆಯೊಳಮಿಂತು ಪತ್ತಿಪಳಮವಾ! ॥೮೬

ವ|| ಮತ್ತಮವಳಾಚಂದ್ರಶಾಲೆಯೊಳ್ ಮುನ್ನವಳಂ ಕಳುಪಿ, ಮತ್ತೊರ್ವಳಂ ನೋಡಿ,—

ಎಲಗೇ ಪೆಣ್ಮಣಿ ಚೆಲ್ಲಗಾತ್ರಿ ಚದುರೇ ಚಂದ್ರಾಸ್ಯೆ ಬಿಂಬೋಷ್ಠೆ ಕೋ |
ಕಿಲವಾಣೀ ಸವಿಗಾತ್ರಿ ಬಲ್ಕ್ಮೊಲೆಯುಳ್ಳೇ ಭಾವಜ್ಞೆ ಕಲ್ಯಾಣಿ ಕಾ ||
ದಲೆಯೇ ಕಾವನ ಪಟ್ಟದಾನೆ ಸೊಬಗೀ ಚೆಲ್ವೀ ಬೆಡಂಗೀ ಪೊದ |
ಱ್ದೊಲವಿಂ ಪುಣ್ಯದ ಬಳ್ಳಿ ಬಾರ ಸುಗುಣೇ ಬಾರೆನ್ನ ಭಾಗ್ಯೋದಯೇ ||೮೭

ವ|| ಎಂದು ಕರೆಯೆ ಬಂದ ಮಗಳಂ ನೋಡಿ—

ಮೂಡಿದುವೆಂದೀ ಮೊಲೆಗಳ್ |
ಮೂಡಿದುವೆಂದೀ ಕುರುಳ್ಗಳಂದಿಂದೆನ್ನೀ ||
ಬೀಡಂ ಬಿರುದುಭುಜಂಗರ್ |
ನಾಡಱುವಿನವೊತ್ತಿ ಸುತ್ತಿಮುತ್ತುವರೞ್ಗಂ ||೮೮

ಅತ್ತಗೆ ನೀಡಿಮೆಂದೊಸೆದು ತೊಟ್ಟರ ಕೈಗಳೊಳಿತ್ತವರ್ ಕೆಲರ್ |
ಪತ್ತಿಗೆ ಸಾರ್ದು ಬೆೞ್ ನೆನೆದಿಂದಿದಿರಿಟ್ಟು ತೆರಳ್ದವರ್ ಕೆಲರ್ ||
ಸುತ್ತುತೆ ಪಿಂತೆ ಮುಂತೆ ಕೆಲರೆನ್ನನೆ ಸೊಲ್ಲಿಸಿ ಬೀಱು ಪೋದರೀ |
ಯೊತ್ತಿಯು ಮೇಲೆ ಮೇಲೆ ಬರಲೆಂತುಟು ಕೋಂಬೆನದೆಂತು ಮಾಣ್ಬೆನಿಂ ||೮೯

ಪೊನ್ನಾಸೆ ಪಿರಿದು ಸೂಳೆಯು |
*ಗನ್ನಿರಪಂತಲ್ತು ಕಂದ ನಿನ್ನಾಸೆಯುವಳ್ ||
ಬನ್ನಂಬಡಿಸದೆ ಕಾಪಿಡು |
ಚೆನ್ನೊಡಲಂ ಪೊನ್ನ ಬೊಂಬೆ ಪೊಸಪಗರಂಬೇ ||೯೦

ವ|| ಎನೆ ಕೇಳ್ದು ಕಂದರ್ಪನಿಕ್ಕಿಗಿಪಳ್ ಬಸಿಱೊಳ್ ಬಂದಳಾಗವೇೞ್ಕುಮ ದಱಿಂ ಕಡುವಪಿಂನೊಂದಪಳೆಂದು ಮುಗುತ್ತಿರ್ಪೆಂಬುದುಂ; ವಸಂತಕಂ,—

ಪೆತ್ತೊಡಮೇಂ ಬಸಿಱೊಳ್ ಬೆಲೆ |
ಯಿತ್ತೊಡಮೇಂ ದತ್ತುಗೊಂಡು ಪೊರೆದೊಡೆ ಮೇಣಾ ||

ತುತ್ತುವ ಮಿಱುಗವೊತ್ತೆಯು |
ಪತ್ತುವ ಮುತ್ತಬ್ಬೆಗಳ್ಗೆ ಪುತ್ತಣ ಮೞಿಕಂ ||೯೧

ವ|| ಅವಱಿಂ ಕಡೆವರೆಗಂ ಕೇಳ್ದು ನಿರವಿಸವೇೞ್ಪುದೆಂಬುದುಂ ; ಆಚಂದ್ರ ಶಾಲೆಯೊಳ್ ಮತ್ತಮವಳ್

ಪರಕೆಯು ನೋಂಪಿಯುಂ ಪಡೆದಬ್ಬೆಗೆ ಪರ್ಬಿದೆ ಬೇನೆಯೆಂದು ಪೇ |
ರರಮನೆಗೆಯ್ದಿಮೆಂದು ಪೊಸಬಿೞ್ದಿವಳಂ ಪೊಸವಿೞ್ದಿದೋರ್ಪನೆಂ ||
ದೊರೆಯುತೆ ಸುಯ್ದ್ಯುತೇವೆಸಕಪೇಕೆನಗಿಂದಿದು ಬಂದುದೆಂದು ಬೋ |
ಸರಿಸುತೆ ಸೊಲ್ಲುತ್ತ ಬಂದ ಪಿಟರಂ ಕಳಿಪಾ ಅಳಿಪಾಱಿಪಂದದಿಂ ||೯೨

ಇತ್ತೊಡಮೆನೆಣಿಕೆಗೆ ಮಿಗೆ |
ತೆತ್ತೊಡಮೊಂ ಪಯುನದಱಿನಕ್ಕುಮೆ ತೇಜಂ ||
ಬಿತ್ತರಿಸಿ ನಿಚ್ಚಮುಂ ಪೊಸ |
ಬತ್ತ ಬರಲ್ಕುಮವೆ ಪೆರ್ಮೆ ಬೆಲೆವೆಣ್ತನದೊಳ್ ||೯೩

ಮಸಗುವ ಕುಸುಮವಿಸರದೊಳ್ |
ಪೊಸಪೊಸತಂ ಸವಿದು ಸಲಿವ ಪೆಣ್ದುಂಬಿಯ ವೋಲ್ ||
ಕಸಗಳೆದು ಪೞೆಯರಂ ಪೊಸ |
ಪೊಸಂಬರಂ ನಲಿಯಿಸೊಲಿಸು ಸಲಿಸಾಸೆಗಳಂ ||೯೪

ವ|| ಇನಿತಂ ಕೇಳ್ದು ಕಲಾಧರಂ ಕಂದರ್ಪನೊಡನಿದೆ ತಿಳದಂ ತನ್ನ ಮಗಳ ಬಗೆವರ್ಪನೊರ್ಪನಂ ಬಿಡಿಸಲ್ಕಿನಿತುರವಣಿಪಳೆನೆ ; ವಸಂತಕಂ—ಈಕೆಗಳ ಬಗೆಯಿಂತಲ್ತೆ—

ಇಚ್ಚೆಗನಾದೊಡಮೊಂ ಮಿಗೆ |
ವೆಚ್ಚಗನಾದೊಡಮದಾವನೆಳಸೊಳೆಯರಂ ||
ಮುಚ್ಚಿಪನವನೊಳ್ ಬೞಿದೇ |
ಮುಚ್ಚರಿಪರ್—

ವ॥ ಅನಿತಱೊಳದಱೊಳವಂ ತಿಳಿದು,—ಬಱಿದಲ್ತು ;

—ಪಕ್ಕುಗೊಂಬನೆಂದೆ ಮಗಳಂ ॥೯೫

ವ॥ ಎಂದು ನುಡಿದು, ಮತ್ತಂ ತಲೆದಗುತ್ತು ಮಿಲ್ಲಿಯ ತಾಯ್ಮಕ್ಕಳ್ ತಮ್ಮೊಳ್ತಾವೊರ್ವರನಾಳಗೊಂಬುದರ್ಕೆನಿತಾನುಮುಟಮುಟಂಗೆಯ್ದಪರ್ ; ಪೆಱರೊಳ್ ಪೇೞ್ವುದೇನಬೆಂತೆನೆ —

ಆವನ ಬಾರಿಯೊಳ್ ಮಗಳ ಮೆಯ್ ಕಯೇಱುವುದೊಳ್ಮೊಗಂ ಪೊಗ ।
ರ್ತೀವುವುದೋಜೆಯುಕ್ಕುವುದಿರುಳ್ ಬಳಗಪ್ಪಿನಮುಬ್ಬಿಯುಮ್ಮಹಂ ॥
ಗಾವಳಿಗಮ್ಮನುಣ್ಮುವುದಮಂ ಕಳೆಯಿಂ ಮನೆವಾೞ್ಗೆಯ್ಯೆ ಮೇ ।
ಣೀವನುಮಕ್ಕೆ ಪಟ್ಟೆಯೊಳೆ ಪಟ್ಟರೆ ಕುಟ್ಟನಿಯುಟ್ಟದಿರ್ಕುಮೋ ॥೯೬

ವ॥ ಇಂತಪ್ಪ ತಾಯ ಮಾಯಮುನಱಿತು ಪೆಣ್ಮಕ್ಕಳುಂ ತಕ್ಕನಿಂದೊಲ್ಮೆಗರೊಳ್,

ಮುನಿವರ್ ಮೊಡಿಯೊಳರ್ಪರೇಡಿಪರೆನಿತ್ತಲ್ಲೆಂದು ಪಿಂದಾಡುವರ್ ।
ಮೊನೆದೋರ್ಪರ್ಕೆಲಸಾರ್ವರುಮ್ಮಳಪರಾಸಗೊಂಬರತ್ತತ್ತ ಪೋ ॥
ಗೆನುತಾರ್ವರಿ ಬಿರುಬೊಂದುವರ್ ಬೆದಱಿಪರ್ ಬೇಱಪ್ಪರಿಂತೊಪ್ಪದಿಂ ।
ಮನದೊಳ್ಪಂ ಮಱಿಮಾಂಜೆಯುಬ್ಬೆಯುರನೇಂ ತಬ್ಬಿಬ್ಬುಗೆಯ್ದೆಬ್ಬುವರ್॥೯೭

ವ॥ ಅಂತಾದೆಡಮವರ್

ಮುಂ ತಮ್ಮಬ್ಬೆಯುರಂ ತಾ ।
ಮುಂ ಕಟಮಟದಿಂದೆ ತಿಂದು ತೇಗಿದ ಕತದಿಂ ॥
ದಂ ತಿಳಿದೊಳಗುಗಳಂ ಬೆಳ ।
ಗುಂ ತಿರುಗುವರವರ ಪಟ್ಟವನೆವಕ್ಕದೊಳೇ ॥೯೮

ವ॥ ಎನೆ ಕೇಳ್ದು ಕಲಾಧರಂ—ಎಲೆ ವಸಂತಕ, ನಿನ್ನ ಬಿನ್ನಣವಾತಂತಿರ್ಕೆ, ಇನ್ನೇತೆಱದ ಕೈತವದಿಂ ಸುತೆ ಮಾತೆಯುಂ ಸೈತಿಡುವಳದನಾಲಿಸುವ ಮುಸಿಕಂಗೊಂಡಿರೆಂಬುದುಮಾಚಂದ್ರಶಾಲೆಯೊಳ್,

ತಾಯೆಂದೊಡೆ ನಾಡಾಡಿಯ |
ತಾಯೇ ನೀಂ ನೊಂದ ಬಾಯೊಳೊಂದಿನಿಸಾನುಂ ||
ನೋಯಿಸಿದುದನವರಿವರಂ |
ತಾಯುಸವಡಿಸಿನುದನಱಯೆನಾನಿನ್ನೆವರಂ ||೯೯
ಪೞಯುಂ ಪೊಸಂಬನೋಪಂ |
ಮುಳಿವಂ ಕಾಲುರಿಚನೊಳ್ಪುಗಾಱಂ ಗಾಂಪಂ ||
ತಿಳಿವಿಗನೆಂದೆಣಿಪನೆ ನೀಂ |
ಕಳಿಪಿನೇ ಕಾವನನ್ನ ನಿನ್ನುಂ ಮುನ್ನುಂ ||೧೦೦
ಕೇಳ್ದಂತೆಸಗುವಳೊಡನೀ |
ಪೇಳ್ದನುವನೊಡಂಬಡಿಪ್ಪ ಕೋಟಲೆಯೇಕಿಂ ||
ಪೊೞ್ದೇಯೆನಲೊಡಲಂ ಕಿತಿ |
ದಾಳ್ದದೊಡಾಂ ಬಂದಳಲ್ತು ನಿನ್ನಯ ಬಸಿಱೊಳ್ || ೧೦೧

ವ|| ಎಂದ ಮಗಳ ಮೆಲ್ನುಡಿಗೆ

ಅೞ್ಕಿತರ್ಗ ಮೆಯ್ಯನಿತ್ತುಂ |
ಗೞ್ಕನೆ ನವಿರೇಱಯಾಲಿನೀರೊಱವಿನೆಗಂ ||
ತಳ್ಕೈಸಿ ಬಿಗಿದು ಮುದ್ದಿಸಿ |
ನೀೞ್ಕರಿಸಿದಳಂದು ಮನದೊಳಣ್ಮಿದ ಕಿತಿಯುಂ ||೧೦೨

ವ|| ಇಂತು ಮುದ್ದಿಸಿ ಮುಂಬರಿಯಿಪ ತನ್ನ ಮನೋರಥಕ್ಕೆ ಸಾರಥಿಯಾಗಿ ನುಡಿದಳ್— ಎಲೆ ಮಗಳೆ, ಈವೇಳೆಯಿರವಂ ನಿರವಿಸೆಂಬನಿತಱೊಳ್ ವಸಂತಕನಕಟಕಟಾಯು ಮಾಯೆಗಿಪಳ್ ಮಾಯೆಯೆಸಗಿದಳೆಂಬಿನಂ; ಮತ್ತಮವಳ್—

ಸೊಗಸು ಮಿಗೆ ಸೊಬಗನೆಂದೇ |
ಜಗಮನಿತುಂ ಪೊಗೞ್ಗೆ...ಚೈತ್ರಯೊಳೀಗಳ್ ||

ಸೊಗಿಸುತೆ ಬಗೆಗಾರ್ತಿಯರೊ |
ಳ್ವಗೆಯುಂ ನೆಲೆವೀಡುಗೊಂಡಪಂ ಕಂದರ್ಪಂ ||೧೦೩

ವ|| ಅವನ ಬೞಿಯಿಂ,

ಸಂದಿರೆ ಸೌಮ್ಯತೆ ಕುವಲಯ |
ಕೊಂದಿಸಿಯಮಾನಂದದೇೞ್ಗೆಯುಂ ತೇಜದೊಳ್ ||
ಕಂದರ್ಪವೀರವಿಜಯಮುಮ |
ನಿಂದೆಸಗುತೆ ಬಂದಪಂ ಕಲಾಧರನೊಲವಿಂ ||೧೦೪

ವ|| ಮತ್ತಂ,

ಸುಮನಸ್ಸುಗಳ್ಗೆ ಗಲ್ಗೆಲ |
ನಮುಱಿಸಿ ಹಾಸಮನಶೇಷಜನಕಾಮೋದಂ ||
ಸಮನಿಸೆ ವಸಂತನುಚಿತ |
ಕ್ರಮದಿಂ ಕಂದರ್ಪವಿಜಯಮಮಂ ಕೈಗೊಳ್ಕುಂ ||೧೦೫

ವ|| ಎನೆ; ವಸಂತಕಂ— ಎಲೆಲೆ ಕುಟ್ಟನಿ ತೊಟ್ಟನೆ ತಿಳಿದಪಳ್, ಗುಟ್ಟು ಬಯಲಾದುದೆನೆ; ಕಲಾಧರಂ—ಎಲವೊ ಕಮಬದಿರ್, ವಸಂತಕಾಲಮುಂ ಚಂದ್ರೋದಯಮುಮಾದುದಱಿಂ ಕಾಮಂ ಕೈಗಣ್ಮುವುದೆಂದು ಪೇೞ್ದಪೋಲ್ ತೋರ್ಕುಮಿನ್ನುಮಾಲಿಸುವಂ ತರಹರಿಸೆಂಬುದುಂ; ಮತ್ತಮವಳ್—

ಕಂದರ್ಪಂ ದೆಸೆಗೆಲಲೆ |
ಯ್ತಂದಪ್ಪಂ ಬಂದಪಂ ಕಲಾಧರನಿವರಂ ||
ಪಿಂದಳ್ದು ವಸಂತಕನುಂ |
ಸಂದಪನಿಂದೆಮ್ಮ ಭಾಗ್ಯದೇೞ್ಗೆಯುದೆಂತೋ ||೧೦೬

ವ|| ಎಂಬುದುಂ; ವಸಂತಕನೀಕಂದಂಗಳಂದಂಗಳಾದೊಡಮಿವಳ ಕಂದಂಗಳಂತನೇಕಾರ್ಥಪರಂಗಳಾಗಿರ್ಪುದೆಂಬಿನಂ; ಮತ್ತಮವಳ್—

ದೇಸಿಯ ಸಿಂಗರಂಬಡೆದು ಸಂಗಡಿಗರ್ವೆರಸುಕರ್ಬಸೊರ್ಕಿನಿಂ ।
ಬೇಸಱನಟ್ಟಿಸಲ್ ಬಿನದಗೆಯ್ಮೆಯ ಚಿತ್ತರದಿಂ ವಿಲಾಸಿನೀ ॥
ವಾಸದ ಮತ್ತವಾರಣಮನೇಱಿಯುಮುಳ್ಕಿ ನೆಗೞ್ತೆಗಲ್ಲಿ ನಿಂ ।
ದೋಸಱಿಗೇಳ್ವರಂ ಗಲಬೆಗಯ್ವುದೆ ಸಯ್ಪಿನೆ ಬಾಲೆ ಲಾಲಿಸಾ ॥೧೦೩

ವ॥ ಎಂಬುದುಮಾವಸಂತಕಂ ಕಂದಂಗಳಿಂದೆಯುಮಿವಳ ವೃತ್ತಮೋ ಪಿರಿದೆನಿಸಿ ನಾನಾರ್ಥಪರಮಾಗಿರ್ಪಮೀಸಂದೆಯುದೊಳನ್ನೆಗಂ ಮುಂದುಗಾಣದಿರ್ಪಂ, ನೀನಿಲ್ಲಿ ಪದುಳಮಿರ್ಪುದಾಂ ಪೋಗಿ ಬಗೆಯಂ ಬಯಲ್ಗೆಯ್ದು ಬರ್ಪೆನೆಂದಾಚಂದ್ರಶಾಲೆಯ ಸೋಪಾನಮನೇಱಿ ಪೋಪಿನಂ; ಮತ್ತಮವಳ್,

ತಲೆವಾಗಿಲ್ವೊಕ್ಕು ಸಿಂಹಂಗಳದೊಳರೆಪೊಗಂ ದೊಱೆ ಕರ್ಬಟ್ಟೆಯಿಂ ಮೆ । ಯ್ಮೆಲೆಯೆಲ್ಲಂ ಪೂಂಜೆ ಕಾರೊಳ್ ಮುಗಿಲೆಡೆಮಱಿಗೊಂಡಿಂಪುವಂ ಪೋಲ್ವ ನಲ್ಗ ॥ದಲರಂ ಕಂಡಳ್ಕಿಱಿಂದೆಟ್ಟಿಱಿತಱಿಯುವ ಪಾಂಗಂ ತೆಱಂಗೋಱಿ ಕೂರ್ತಂ । ತೊಲವಿಂ ಮಲ್ವಾತಿನಿಂ ಪಂಗಱಿತೊರೆ ದೊರೆಮಕ್ಕಳ್ ಮನಂಮಿಕ್ಕು ಬರ್ಪರ್ ॥೧೦೪

ವ॥ ಎನೆ; ಕೇಳ್ದು ವಸಂತಕಂ ಪೊಱಜಗಲಿಯೊಳಮಂಗಳದೊಳಮಿರ್ಪರ ನಾವರಿಪುವಂತಿರ್ಕೆ, ಮಿಕ್ಕು ಮನೆವೊಕ್ಕನಂ ಬೋಸರಿಸುವ ಬಗೆಯಾವುದದಂ ತಿಳಿವುದರ್ಕೇಗೆಯ್ತಂದೆನೆಂದು ಮುಂದೆ ನಿಲ್ವಿನಂ; ಕಂಡೆಳಸೂಳ್ ಬೆರ್ಚಿದಂತೆ– ಎಲೆಯಬ್ಬೆ ಸಬ್ಬವಕಾಱನೇಱ್ತಂದನಿನ್ನೇವೆನೆಂಬುದುಮವಳ್–

ತಬ್ಬಿಬ್ಬುವಾತಿನಿಂ ಪೆಱ ।
ಗರ್ಬ್ಬಿಗಮಂ ನೆಗೞ್ವ ಬಱಿಯ ಬೆಬ್ಬಳಮುಳ್ತೊ ॥
ಳ್ಗಬ್ಬಿಗರನುಗೊಳಿಸಿದ ಪೊಸ ।
ಕಬ್ಬದ ಪವಣಂತುಟವನ ಸಬ್ಬವನುಡಿಗಳ್ ॥೧೦೫

ವ॥ ಎಂದು ಸುತೆಯುಂ ಸೈತಿಟ್ಟು ವಸಂತಕನಂ ನೋಡಿ,

ಬನ್ನಿಂ ಪಲವುಂ ದಿವಸಿ ।
ಕ್ಕಿನ್ನೆಗಮೇೞ್ತಂದಿರಕಟದೇಂ ನೋಂತೆವೊ ನೀಂ ॥
ಮುನ್ನಂ ಬರ್ಪಂದಿವಳಿ ।
ಗನ್ನೆ ಕರಂ ನೆನೆವಳಂದಿನನುಗೆಯ್ಮೆಗಳಂ ॥೧೧೦

ವ॥ ಎನೆ; ಪತ್ತಿಸಾರ್ದು ಕುಳ್ಳಿರ್ದು ವಸಂತಕನವಳ ಮಗಳಂವಂ ನಿರವಿಸಿ ಕುಱುಪುಗೊಂಡು –

ಎಲೆಲೆ ಕಲಾವತಿಗಿಂಪರಿ ।
ನೆಲೆಜವ್ವನವೊದವಿತಮಮ ! ನಿನ್ನಿನ ಮಗಳಗೆಂ ॥
ಕಲೆವೆತ್ತುದೊಳ್ಮೊಗಂ ಮಿಗೆ ।
ಪಲವುಂ ಬಗೆಗಲ್ತುವಕಟ ! ಕಣ್ಗಳ ಕಡೆಗಳ್ ॥೧೧೧

ವ॥ ಎನುತೊಕ್ಕೈಯಿಂದವಳ ಗಲ್ಲವಂ ಪಿಡಿದು ಮತ್ತೊಕ್ಕೈಯಿಂ ಮಂಡೆದಡೆವುತ್ತಿವಳ್ ಅಂದಿಂಗೆ,

ಎಳದಾವರೆದಂಟುಗಳನೆ ।
ನಳನಳಸುವ ಮುದ್ದು ಮುದ್ದುಗೈಕಾಲ್ ಪಮಳಂ ॥
ಪಳೆಯುವ ನಡೆನುಡಿನೋಟದ ।
ಚಳಕದೆ ಬಂದಂಕವೇಱು ಕೂಂಕುವಳೆರ್ದೆಯಂ ॥೧೧೨

ವ॥ ಕಿಱಿದುಂ ದಿನದೊಳ್,

ಮೆಲ್ಪಿಡಿದುದು ನಡೆ ನುಡಿಗಳ ।
ನಲ್ಪಾಭಿಪ್ರಾಯಗರ್ಭವಾದುವು ನೋಟಂ ॥
ಕಲ್ಪಿಪ್ಪದೊಳ್ಪಂ ಕೃತಸಂ ।
ಕಲ್ಪರ ಕಾದಿರ್ಪರೆಂದು ತಲ್ಪಾತಿಥಿಗಳ್ ॥೧೧೩

ವ॥ ಎಲೆ ಸುಗುಣೆ ನಿಂನೀಗಳೆಟ್ಟತ್ತು,

ಪುಸಿಗನನೆಗ್ಗನಂ ಪುರುಡುಗಾಱನನುರ್ಬುಗನಂ ಕನಲ್ವನಂ ।
ಪಿಸುಣನನಾಳಿಕಾಱನಳುಂಬದ ಡಂಬಿಗನಂ ಬಿಕಾರಿಯಂ ॥
ಬೆಸನಿಗನಂ ಕಟುಂಬನನಿದಿರ್ಚುವನಂ ಬಱುವಱುಗಾಱನಂ ।
ಕಸಗಳೆದಿತ್ತು ಮನ್ನಿಪರಮಕ್ಕಳ ಪಕ್ಕೆಗೆ ತಂದು ಸೊರ್ಕಿಸಾ ॥೧೧೪

ವ॥ ಎಂದು ನುಡಿದಪರಿರವನಾರಯ್ಯುತ್ತಿ ನಿಸುಂ ಪೊಱಿತ್ತಿಸಿಕವಿರ್ದುರ್,

ಮಿಸುನಿಯ ಮೊದೆಗಳನಬ್ಬೆಯ ।
ನಸಿಮೆಯ್ಯಂ ಸೊಬಗನೊಡಲ ಸೋಂಕಿದೆನ್ನಂ ॥
ಪಸಗೆಯ್ಮೆಯ ಚಳಕದೆ ಸಂ ।
ತಸಪಡೆದನುವದಿಪ ಕೆಳೆಯನನುವಿಂ ತಣಿಸಾ ॥೧೧೫

ವ॥ ಮತ್ತಮಿಂಗಿತಮನಾರಯ್ಯುತ್ತೆ—ಅಂತಪ್ಪರೇಂ ಬಱಿದೆ ಬರ್ಪರೆ,—

ಬೋಳೈಸಿ ತೆತ್ತು ಕಾಮನ ।
ಕೇಳಿಯೊಳನುವೆತ್ತು ಪ್ರೇರಿವ ಪ್ರರುಳಗನಂ ತಾಂ ॥
ಮೇಳೈಸುವ ದೂದುಗನಿಂ ।
ಸೂಳೆಗಮುಪರಬ್ಬೆಯುರ್ಗಮುಪ್ಪುದು ಪಬ್ಬಂ ॥೧೧೬

ವ॥ ಎನೆ ; ಕೇಳ್ದು ಕಲಾಧರಂ ಕಂದರ್ಪನಂ ನೋಡಿ— ಈಗಳವನಿವಳ ಸೊಬಗಂ ನಿರವಿಸಿ ತನ್ನ ಮಗಳೆತ್ತಿದೊಂದು ಪ್ರೇಸಜೋಹಮಂ ವಹಿಸುವ ನೆಂಬಿನಮುಮಂ ಮಗಳಂ ಸನ್ನೆಗೆಯ್ದು ವಸಂತಕನಂ ನೋಡಿ—

ನೆವಮಿಲ್ಲದೆ ನಿಮಗಿವಳೊಳ್ ।
ಕವಿಯುತ್ತಿದೆಯಳ್ಕಱಿಂತು ನೆಗೞುಸುವೊಡಮೇ ॥
ಪವಣೊಳ್ ಬಳೆಯಿಪ್ಪೊಡಂ ನೀಂ ।
ಮೆ ವಲಮಿದೇ ಮಾಗುವನೆತ್ತಿ ಕೈಯೆಡೆಯಿತ್ತಂ ॥೧೧೭

ವ॥ ಎಂಬಿನಂ; ವಸಂತಕಸಿದೆ ಕಲಾಧರಂ ಸಾಕ್ಷಿ, ಕಂದರ್ಪಂಗರ್ಪಿತಮಾಗೆ ನತ್ತುಗೊಂಡೆಂ, ಮತ್ತೆನಲೇತರ್ಕೀಗಳಂತಿವಳ ಕಜ್ಜಮುಂ ಸಜ್ಜುಗೊಳಿಪೆನೆಂ

ದೆತ್ತುವಳ ಕೈಲಾಗಿನಿಂ ಸೆಜ್ಜೆಯಂನಿಱಿಸು ಪ್ರೋಱವಾಗಿಲ್ಗೆ ಬಂದಲ್ಲವಳಂ ನಿಲಿಸಿ,

ಸಪತ್ರ್ಯಯುಮಿದೆ ನುಡಿವೆಂ ।
ವಿಪ್ರನೆ ಆಂ ವಿವಿಧವೇದವಿದ್ವಲ್ಲಭನೇ ॥
ನಪ್ರವಿತಾನಂದವುತಿ ।
ಕ್ಷಿಪ್ರದೊಳನುವಪ್ಪವನ್ನವಿಪ್ರರ್ದು ಪದುಳಂ ॥೧೧೮

ವ॥ ಎಂದವಳಂ ಸೈತಿಟ್ಟು ಸನಿಯುಕ್ಕೆ ಬಪ್ಪರ್ದುಂ; ಕಲಾಧರಂ ಕಂದರ್ಪ ನೊಡನೆ– ಇದೆ ಮಾಸಂದಿರೇಟ್ಟಂದರ್, ಮುನ್ನಿ ಸಪ್ತೋಟ್ಟುದೆಂಬುದುಮುನಿಬ ರುಂ ನಗುತ್ತೆ ಮುಂತಣ್ಗೆ ನಡೆದು ಮೆಯ್ಯುಱೆದಾನೆರೆಮನೆಯು ತಲೆವಾಗಿಲನಂ ಗಳಮುಮಂ ಬೆಂಗಳೆದೊಳವಾಗಿಲಂ ಪುಗುವನಿತಱೊಳಾಪಸಂತಕನಾಪ್ರೋಸಂ ತಿಲನೆಡಪಿಪ್ಪಂತಡ್ಡವಿಟ್ಟು,

ತಳೆದರ್ ಬೀಱಿಯುನಳ್ಕುತಳ್ಕುತ ಮೊವಲ್ಪಕ್ಕಂಗಳಂ ನೋಡಿ ಗೇ ।
ಱಳಿಯುಂ ಸಾರ್ದರದಕೆ ಮೇಲೆ ನಸುಬೆರ್ಚುತ್ತಂಗಳಂಬೊಕ್ಕರಾ ॥
ಗಳೆ ಕೈಗಣ್ಮಿ ದರಳ್ಕದಿಂತು ಕೆಡೆದೀಕಾಳ್ಪುರ್ವನಂ ತೊತ್ತಿಱಂ ।
ಮುಱಿದರ್ ಪೊಕ್ಕುಸರುಕೆನಿಂದೆ ಮನೆಯುಂ ಮಿಕ್ಕಿನ್ನದೇನಕ್ಕುಮೋ ॥೧೧೯

ವ॥ ಎನೆ; ಕೇಳ್ದು ಕಲಾಧರಂ ಕಂದರ್ಪನೊಡನೆ–ಬಿನದವಾತಿಂದಾಂ ಮೆ ಯ್ಯುಱೆಯ ಇದೊಂದು ನೆವದೊಳೆಟ್ಟುಱಿಸಿವನೆಂದು ನುಡಿಯುತ್ತಿರ್ವರುಂ ಪೆಱ ಸಾರ್ದನವಾಗಲಬೆಗೆಳ್ದಮನೆಯು ತೂಱ್ದುರೇಟ್ಟಂದು–ಅಕಟಕಟಾಪಾರ್ವಂ ಬಿಟ್ಟನೆಂದು ಕೈಪಿಡಿವಿನಂ; ವಸಂತಕಂ ಪುಯ್ಯಲ್ಚುತ್ತೆ,

ಕಸಕಿಲ್ಗೆಯ್ಮೆಯುನೆಸಗುವ ।
ಮುಸಕದ ಕಡುದಡ್ಡವಿಟ್ಟ ಪಡಿಗದ ಪೞನೀ ॥
ಪಸೆಯಱಿದ ಪಾಱ್ಗೆಯಿಂ ।
ದಸತಿಯಱಿದೆ ಪಿಡಿಸರಯ್ಯ ಪೊಸಮುಡಿ ಮೆಯ್ಯಂ ॥೧೨೦

ವ॥ ಎಂದು ಬಾಯ್ಬಿಡುವಿನಂ;

ಬಿದಿರುವ ದನಿಗೊಳಗರುಡಿಯು ।
ಪದಪೋಳಮಸುರಿದು ಬಾಗಿಲೆಡೆಗೆಟ್ಟಿಂದರ್ ॥
ಮದನನ ಕೇಳೀವನದಿಂ ।
ಬೆದಱಿದ ಪೆಣ್ಬುಲ್ಲೆವಿಂಡವೋಲ್ ಬೆಲೆವೆಣ್ಗಳ್ ॥೧೦೧

ವ॥ ಅನಿತಱೊಳ್ ವಸಂತಕನೆಬ್ಬು ಪೊದೆದುತ್ತರಿಗೆಯುಂ ಪೊಱಗಣ್ಗೆ ತೆಱೆ ವಿಡಿದು ಪೊಸಂತಿಲೊಳ್ ನಿಂದಿರೆ, ಕಂಡವರ್ ಕೌತುಕದಿಂದಿದೇನಿದೇನೆನೆ; ಅವಂ—

ಪೊಸಮುಯ್ವೆತ್ತಸಮಸರಂ ।
ಸಸಿಯು ನೆರಂಗೊಂಡು ಗಂಡುಮಿಱುತ್ತಾಪ್ಪಿನಂ ॥
ದಿಸುತಿಸುತಿದೆ ಮಸಗಿದಪಂ ।
ಪಸಮುಟಿತಳಿಗರ್ಪಿಯುಡೆಯನಪ್ಪಣೆಗೆಯ್ದಂ ॥೧೦೨

ವ॥ ಎಂಬುದುಮವರ್ ನಸ ನಗುತ್ತಾ ಕಾವನೆಲ್ಲಿದನೆನೆ; ಇದೆ ಮಱೆಯೊಳ ರ್ದಪಂ, ಪೊಱಗಣ್ಗೆವರೆ ತೋಱುವಪೆನೆಂದಂಗಳದ ಬೆಳ್ದಿಂಗಳ ಬಯಲೊಳ್ ನಿಲಿಸಿ, ಪೊಱವಾಗಿಲೆಡೆಯಂ ನೋಡಿ,

ಎಲ್ಲಿಗೆ ಪೋಪುದು ಮದನಾ ।
ನಿಲ್ಲಳವಿಂದೀನೆಲಕ್ಕೆ ಬಲ್ಲಿದನಾನಿಂ ॥
ಚೆಲ್ಲಾಡುತೆ ಚಮರಿಯುರಿಂ ।
ಮಲ್ಲಾಮಲ್ಲಿಯನೊಡರ್ಚಿ ಮನಮಂ ಪಿಡಿವೆಂ ॥೧೦೩

ವ॥ ಎಂದು ಬಳಸಿ ಬಂದೊರ್ವಳ ಮೊಗಮಂ ನೋಡಿ,

ಬಿಲ್ಲಂ ಬಿಸುಟ್ಟನುಡಿದಿದೆ ।
ಘಲ್ಲೈಪುವು ಪುರ್ಬುವರಜೆನಿಂ ಕಡಿಯೆರಡುಂ ॥
ಫುಲ್ಲಶರಂಗಳನಲ್ಲಿಯೆ ।
ಚೆಲ್ಲಿದಪಂ ಚೆಲ್ಲನೋಟವಮಾದಪ್ರವಾಹಮಂ ॥೧೦೪

ವ|| ಎನೆ ; ಕೇಳ್ದು ಕಲಾಧರಂ ಕಂದರ್ಪನೊಡನೆ–ಇವನಂ ಬಲ್ಲಿದರೊಳ್ ಬಲ್ಲಿದನೆನೆವರ್ಪುದು :

ಅಱಿವಿಲಿತನದಭಿನಯದಿಂ |
ಪೊಱದೆಗೆದಿರ್ಕೆಗಳನಿಂತು ಬೋಸರಿಸುವನೆ ||
ಬ್ಬಿಱಿಸುವನಡಿಗಡಿಗೆಮ್ಮಂ |
ನೆಱಗಲಿಯಿೀಬಿಡಗಿತನಿಟ್ಟುದೆ ತಿಟ್ಟಂ ||೧೨೫||

ವ|| ಅನಿತಱೊಳಾಕೆಗಳ್– ಕಾವನೆಲ್ಲಿದಂ ತೋಱಿಮೆಂಬುದುಂ ; ವಸಂತ ಕಂ–ದೇವಮಾಯಾಯನಾರಱಿವರೆಂಬಿನಂ ; ಅಬ್ಬೆ ಸಬ್ಬವಕಾಱನ ದನಿಗೇಳ್ದು ತನ್ನ ಪೆಣ್ಮಗಳನೆಕ್ಕಟಿಗರೆದು–

ಜೇಯುಂ ಬಂದಪನುಚಿತರ್ |
ಪಾಯದಿನುಪಚರಿಪುದಿವನನೇಪೊಱ್ತುಮಿವಂ ||
ರಾಯರ ಸವಿಕ್ರಗಮಿರ್ದಪಿ |
ನೇಯರನನುಗೆಡಿಪ ಗಬ್ಬಿ ಸಬ್ಬವಕಾಱಂ ||೧೨೬||

ವ|| ಎನೆ ; ಅವರ್ ವಿನಯದಿಂ ವಸಂತಕನಂ ನೋಡಿಯಾಕಂದರ್ಪದೇವ ನೆಂದು ಕಾಣ್ಬುಡುವಂದವಾವುದದಂ ನಿರವಿಸಿಮೆನೆ ; ಅವಂ ಕಿಱಿದುಂ ಪೊಱ್ತು ಜಾನದಿಂ ಮೋನಮಿರ್ದು,

ಮದನನವನಕ್ಕೆ ಮೋಣಾ |
ಮದನನ ಪಿತನಕ್ಕೆ ಜಾನಮುಂ ಕೀರ್ತನಮುಂ ||
ಪದಪಿಂದುಪಾಯಮೊರಡೇ |
ಮದವತಿಯರ್ ಮನಕೆ ತಪ್ಪದವರಿರವುಗಳಂ ||೧೨೭||

ಬಂದೆನಿಸಿ ಕೀರ್ತನಂಗೆಯೆ |
ಸಂದಣಿಯೆಳ್ ಬಂದು ನಿಂದು ಸಂತಸಗೊಳಿಪಂ ||
ಚೆಂದದೊಳಕ್ಕಟಿಜಾನದು |
ನೊಂದಿರೆ ತಾನೊಬ್ಬ ಬಂದು ತನ್ನುಮನೀವಂ ||೧೨೮||

ವ|| ಎನೆ; ಅವರ್ ಮೊದಲೊಳಾ ಮೇಳಂಗೊಂಡು ಸಂಗೀತಂಗೆಯ್ವೆವೆಂದು, ತಂತವುಮುಪಕರಣಂಗಳನಾರಯ್ವಿನಂ; ಇವನೀಯಂಗಳದೊಳ್ ಮೇಳವಾಗೆ ಎರಟ್ಕುರೆನೆರೆವಪ್ಪುದದಂ ತಪ್ಪಿಸವೇಟ್ಪುದೆಂದು ತನ್ನೊಳೆಣಿಸಿ ಕೊಬಿಲ್ಬಾಜಿಪಳಂ ಬೞಿಸಂದಚ್ಚಱಿವಡುತ್ತುಂ— ಹಾ! ನಿಲ್, ನಿಲ್, ತಿಳಿದೆಂ ತಿಳಿದೆಂ,

ಪುಟ್ಟುಗೆ ಸದ್ವಂಶದೆ ಸವಿ |
ನಟ್ಟಿಕೆ ಸಲೆ ಸರಸಮೆನಿಸೆ ರೂಪುಂ ನಡಿಯುಂ ||
ಕಟ್ಟೞಕದೆ ಮೊಗದೊಳ್ ಮೊಗ |
ಮಿಟ್ಟಿರೆಯುಂ ಛಿದ್ರವೆಣಿಸಿಯೂದುವಿರಿನ್ನುಂ ||೧೦೮

ವ|| ಅವರ್ಗಾವಳ್

ನುಣ್ಣನೆ ನುಡಿದೋಱುತೆ ಪಲ |
ವಣ್ಣಂಗೊಂಡೆಱಿಯಿಂದು ಸರಸಂಬಡೆದುಂ ||
ಬಣ್ಣಿಗೆವಡಿಸುವುದಲ್ಲದೆ |
ಬಣ್ಣಿಸಿಮೆನ್ನೊಳವೆ ತಿರುಳುಮಿದಱೊಳ್ ಪುರುಳುಂ ||೧೦೯

ವ|| ವಸಂತಕಂ—ಆದೊಡಿದು ನಿಲ್ಕೆಂದು ಮುತ್ತೊದರ್ಗಳಂ ಪತ್ತೆಸಾರ್ದು,

ತಾಳದವಳ್ ನೀನಿರ್ಘನ |
ತಾಳಂಗಳನೆಂತು ಪೊತ್ತು ತಲ್ಲಟಗೊಂಬೈ ||
ತಾಳವರಿಗೆಯೆಡ್ಡೆಡೆನ್ನುಂ |
ಮೇಳವನನುಗೊಳಿಸಿ ರಕ್ತಿದೋಱುವೆನೊಳ್ಪಂ ||೧೧೦

ವ|| ಎನಲೊಡಮವಳಾ ತಾಳಂಗಳನವಂಗೆ ಕೈಗೊಳಿಪಿನಮದನಾನುತ್ತುಂ ತತ್ತರಿಸಿ ಬಸವೞಿಯುತ್ತುಂ,

ಕೆಲದೊಳ್ ಕೆಕ್ಕರಿಸುತೆ ಪಲ |
ಪಲವುಂ ಪಸಗೆಯ್ಮೆವಾತುಗೊಂಬವೊಲಲ್ತೇ ||

ಕಲೆಗಾರ್ತಿಯರುಱುಬಿನೊಳಂ ।
ನೆಲೆದೊಲಗದೆ ಮಲೆತು ನಿಲ್ವ ಗಂಡನದೊರ್ವಂ ॥೧೩೧

ವ॥ ಅದರ್ಕವಳ್ದಿರ್ ಪಿಳ್ಗ ಬಿಂಕಂಬಡೆಯೆ ಕಂಡಾಪಸಂತಕಂ —

ಕಲಸಲೊಡವೊಲ್ದು ನಲವಿಂ ।
ನಲಿನಲಿಯಿಸಿ ನಜ್ಜುನಜ್ಜುಗೆಯ್ದಾಸೊಗದೊಳ್ ॥
ಜಲವೆತ್ತು ನವನೆ ಬಿಡಿಸುವ ।
ನೆಲೆಗಂಡೆನೆ ನೆಗೞ್ದುಡವನೆ ಗಡ ಕಂದರ್ಪಂ ॥೧೩೨

ವ॥ ಎಂದವರ ಸೊರ್ಕಱಿಪಿ ಕಟ್ಟಿನೆಟ್ಟು ಮುದ್ದುವೆಣ್ಣೊರ್ವಳ್ ಕಂದದೊಳ್ ನಟ್ಟು ಮೊಱಗುವ ಮುದ್ದಳಮಂ ನೋಡಿ ॥

ಧಣಧಣವೆಂದುಲಿದೊಡನೇಂ ।
ತಣಿದುಱಿಸರೆ ನಿಂ ಧನಂಧನಂಧನವೆನಲ್ — ॥

ವ॥ ಎಂದನಿತಱೊಳವಳ ಬಾಜಿಸ ಕೈಗಳಂ ಪಿಡಿದು ನಿಲಿಸಿ, ॥— ಈ

ಪೊಣಗುವ ಕಂಠಾಶ್ಲೇಷ ।
ಪ್ರಣಯಿಯನೀತಂದೆ ಪೊಯ್ದು ಪುಯ್ಯೋಱಸರೇ ॥೧೩೩

ವ॥ ಎಂದನಿಬರಂ ನಗಿಸಿ ಕುಳ್ಳಿರಿಸಿ ಸ್ವೈಯನಂಗನಂ ಪ್ರೊಂಗುವಂತೊಂದು ಸಿಂಗರವಾಡಂ ಪಾಡಿವೆಂಬುದುಮವರ್ಜತೆಗೊಡಿ,

( ರಾಗ—ಕೇದಾರಗೌಳ ॥ ಆದಿತಾಳ ॥ )

ಸೊಗಸುವಡಿಸುವೆಂ । ಸುಗುಣನೇಱ್ಱುವರ್ಸನೆಂಬ ಸು । ದ್ದಿಗೇಳಲೆಳಸಿ ಬಗೆದು ಕಾದಿರ್ದ ಕಿವಿ । ವಗೆಗಳನಿಂದು ॥ ಪಲ್ಲವಿ ॥

ಸಂದಣಿಯೋಲಗದಿಂದೆ ಸಾರ್ದನೇಕಾಂತ । ಕೆಂದು ಪಿಂದಳೆದು ಬರ್ಪ ಬೆಸಸುವೆನೆಂದು ॥ ಅಂದವೆನೆ ಸಿಂಗಾರವಾಗಿ ಸಿಂದಪನೆಂದು । ಬಂದು ಬಂದು ಬಣ್ಣಿಪ ಬಾಲೆಯರ ನುಡಿಯಿಂ ॥೧

ಪೊದೆದು ಕರ್ಬಟ್ಟೆಯು ಪೂಣ್ದು ಪೊಱಮಟ್ಟನೆಂದು । ಪದುಳದಿಕ್ಕೈದುವ ಕೈಪಡಿಸಿದನೆಂದು ॥ ಪದೆದರಮನೆಯ ಪೊಱವಾಗಿಲ್ಗೆಯ್ತಂದನೆಂದು । ಕದಬದೊರೆವ ಪರಿಕಾರ್ತಿಯರ ನುಡಿಯಿಂ ॥೨

ಇದನೋಡೀಕೇರಿಯಾನೇಱ ಬಂದಪನೆಂದು | ಮೊದಲ ಮಾನೆಗಳಿದು ಮುಂಚಿದನೆಂದು ‖ ಮುದದಿಂದೀಬಾಗಿಲ ಮುಂದಕೆೞ್ತಂದನೆಂದು | ಕದುಬಿ ದೂದವಿಯುಗ್ಗಡಿಸುವ ನುಡಿಯಿಂ ‖ ೩

( ರಾಗ—ಕಾಂಭೋದಿ ‖ ಜಂಪೆತಾಳ ‖ )

ಬಡಲಱ್ದ ಸಲೆ ಗೆಲವಿನಾರವಣಿಸಿ ನಲಿವೆಂ | ಕಡುಗಿ ಸಿಡಿಮಿಡಿಗೊಂಡು ಕವಿದು ಕಾತರಿಸುವೀ ‖ ಪಲ್ಲವಿ ‖

ಇದೆ ಬಂದನೆಂದು ಕೇಳ್ದಿದಿಗೊಂಡು ಪೆರ್ಚಳದೆ | ಪದಕೆಱಗಿ ಕೈಲಾಗುವಡಿಸಿ ತಂದು ‖ ಸದನದೊಳಸಂದಲ್ಲಿ ಸರಸಗತಿ ಮಿತಿಗಳಿಯೆ | ಹದಮೀಱ ಹರವಸದೆ ಹದಿರಿಚದುರಱದು ‖ ೧

ಮುಸುಕಸೀಳ್ದೊಳ್ಳೊಗವೆ ಮೊಗವಿಟ್ಟು ಮುಂಡಾಡಿ | ಪಸಸವಿಯ ಬಾಯ್ದೆಱೆಗೆ ಪಾಯ್ದು ಸವಿದು ‖ ಬೆಸಗೊಂಡು ಸೆರೆಗಳುೞ್ ಬಿಗಿದ ಬಿಣ್ಮೊಲೆಗಳೊಳ್ | ಮಸೆದಿರಲಮರ್ದಮರ್ದ ನವಿರೇೞಲಪ್ಪಿ ‖ ೨

ಸಡಿಲೆಮುಡಿ ತೋಳ್ತೊಡೆಯು ತೊಡರ್ನೊಳು ಮೆಯ್ಗಾಸಿ | ಪಡೆಯೆ ಕಡುಪಿಂದೆ ಕೈದುಡುಕಾನಡೆಯು ‖ ಜಡಿದು ಜಡಿಮುಡಿಗೊಂಡು ಜತೆಯಾಗಲದಂತೆನ್ರೋ | ಲೊಡನೆ ಮೊಲ್ಲ್ಯಾಸಿಗೆಳೆದುಯ್ದೊಳ್ಪುವಡೆದು ‖ ೩

( ರಾಗ—ಘಂಟಾರವ ‖ ಆದಿತಾಳ ‖ )

ಇಂದೆನ್ನ ಪೆಣ್ತನವನೀಡೇಱಪೆಂ | ಇಂದೆನ್ನ ಬಿನ್ನಣವನಲ್ಲಿ ಬಿತ್ತರಿಸುವೆಂ ‖ ಪಲ್ಲವಿ ‖

ಬಡವೆ ಪಾಸಿಕೆಗೆಯ್ದುದಾರವಣೇಯೊಳುದೇಸೆ | ಪಡೆದ ಸೊಗಸುಗಳನೊದವಿಸುತೆ ‖ ಪಡಿಬರಿಸಿ ಬವಲ್ಗೆ ಬದಲನೊಡರಿಸುವ | ಸಡಗರದಿಂದವಂಗೆ ಸರಿಮಿಗಿಲೆನಿಸುತ್ತೆ ‖

ತೊಡಕಿ ತೊಡರ್ದು ಮೋಲ್ಕೆ ದೊರಕೆ ದುರುಸುಗೆಯ್ಕೆ | ದೊಡಗಿ ಬೇಱೊಂದೋಜೆದೋಱವಿಱ ‖ ಅಡಸಿ ಪೊನ್ನ ಮುಗಿಲನಡರ್ದು ಕುಣಿಹಗೊಂಬ | ಕುಡುಮಿಂಚಿನೆಳಕವ ಕೊಂಡು ಕೊನರಿಸುತೆ ‖ ೨

ಕಡುಪುವಗೆಗಳಿಂದಗಾಸೆವಡೆದು ಸೊರ್ಕಿ | ತಡೆದು ನಿಲಿಸಿ ಮಿಗೆ ದೈನ್ಯವೆತ್ತು ‖ ತಡಬಡಿಸುತಲಸಿತಲ್ಲಣಗೊಂಡುಕಡು | ಮಿಡುಕಿ ಮೊಲ್ಯಾತುಗಳಿಂ ಮಿತಿಮೀಱಯುಬ್ಬಿಯುತ್ತೆ ‖ ೩

ವ॥ ಇನಿತಂ ಕೇಳ್ದು ವಸಂತಕಂ—ಇದಲ್ಪದೊಳ್ತೀರದು, ತಲ್ಪಯೋಗಕ್ಕಿದು ಪ್ರಯೋಗಪದ್ಧತಿಯಂತಿರ್ಪುದು . ಇದಂ ತವಿಸಿ ಮುಂತಣ್ಗೆ ನಡೆಯವೇಳ್ಪುದೆಂದು ಮನದೊಳೆಣಿಸಿ, ಅವರೊಡನೆ—ಈ ಮಹಾಸಂಕಲ್ಪದಿಂ ಸಂಕಲ್ಪಜನ್ಮನಪ್ಪ ಕಂದರ್ಪಂ ಕೈಪಟ್ಟಂ ಕಾಣಿಮೆಂಬುದುಂ ; ಅವರ್—ಅವನೆಲ್ಲಿದನೆ ; ವಸಂತಕಂ— ಇದು ಕಂಠಚಾಮೀಕರನ್ಯಾಯಮಾದುದು, ನಿಮ್ಮೆಳೆನೆಲೆಗೊಂಡಿರ್ಪಂ, ಭಾವಿಸಿ ತಿಳಿಯಿಮೆಂಬನ್ನವರಂ ನಗಿಸಿ, ಬಳಿಕ್ಕಿದು ಕಾಡುವಬಗೆಯಲ್ತು ಕಾಣವೇಳ್ಪೊಡೆ ಕಡುನೇಹಂಬಡೆಯಿಂ, ಕೆಲದುಂ ದಿನದೊಳ್ಕರೆತಂದು ಕಣ್ಬಡಿಸುವೆಂ ಪೋಗಿಬರ್ಪೆನೆಂದಲ್ಲಿಂ ಪೊರಮಟ್ಟು ಕಂದರ್ಪನೆಡೆಗೆ ಬಂದು ನಿಲ್ವುದುಂ, ಕಲಾಧರಂ—ಎಲೆ ವಸಂತಕ, ನೀಂ ಕಾಡುವಂಕಂಡಂತೊರೆದು ಗಂಡನಲೆದು ಬಂಡುಗೆಯ್ದು ಸಬ್ಬವಂಗೊಳವೇಳ್ಪುದಲ್ಲದೆಸೂಕ್ತಿಯೊಳ್ ಸಮಾಸೋಕ್ತಿಯುಂ ಶ್ಲೇಷೆಯುಂ ವ್ಯಾಂಗ್ಯಮುಮಾಗಿ ಪೇಳ್ವುದೆ ಚದುರೆಂಬುದುಮಿನಿಸುಂ ಮುನಿಸುವೆರಸು—ನೀಂ ಪಲವುಂ ರಾಯಭಾರಿಗಳೊಳಂ ಮೆಲ್ಪುಂ ಬಲ್ಪುಂ ತೆಱಪುಂ ಮಱಪುಂ ಅನುವುಂ ಮೊನೆಯುಮಾಗಿ ನುಡಿದು ನಿನ್ನ ಬಿನ್ನಣಮುಂ ಬಿತ್ತರಿಪಂತಾನುಮಿವಳ್ದರಂತರಮುಂ ತಿಳಿದುನುಡಿವೆಂ : ಇನ್ನುಂ ಪಲವುಂ ಮನೆಗಳೊಳ್ ಸಾಹಿತ್ಯಸಿಪ್ರಣೆಯರಿರ್ಪರನ್ನೆವರಂ ಸೈರಿಪುದು : ಆಬಳಿಕ್ಕ ನಿನ್ನನ್ನೆಯರಪ್ಪ ಬಱಬನ್ನಣೆಗಾತಿಯರುಮೆನ್ನನ್ನೆಯರಪ್ಪ ಗಾಂಪೆಯರುಂ ಪಲಂಬೆಯರಿರ್ಪರ್ . ಆಬಳಿಯೊಳೆನ್ನ ಸಬ್ಬವದೇಟ್ರದಿಂ ನಿನ್ನ ಚಿತ್ತಮಂ ಪಡೆವೆನೆಂದು ಮುಂತಣ್ಗೆ ನಡೆದೊಂದು ಮನೆಯಕುಂದಣದ ದಾರಮಂದಮಂದದಿಂ ನೆಮ್ಮಿ ನಿಂದಾಕೆಳಜಗಲಿಯ ಕರ್ವಣಿಗಂಭದ ತುಂಬುನೆಳಲನಿಂಬುಗೊಂಡು ಮೆಯ್ಮಱಸಿರ್ದ ಮನಮನ್ನನೊರ್ವನಂಸನ್ನೆಗೆಯ್ವ ಕನ್ನೆವರೆಯುವ ಚೆನ್ನೆಯುಂ ಕಂಡಿವಳಾರೆಂದಿನಿಸುಂ ಪೊಲ್ತುಸಂದೆಯಂಗೊಂಡು ನಿರವಿಸಿ ಹಾ ! ತಿಳಿದೆಂ, ಕುಮುದಿನಿ ಈಸವರ್ಾತಿಶಯಿತಚಾರ್ವಂಗಿಯುಂ ಪೆರ್ವೆಲೆದೆತ್ತು ಪೆತ್ತಳಿವಳೊಳಗಂ ತಿಳಿದಿರ್ಪನಿಲ್ಲಿ ಪಲ

ವ್ರಂ ಚೆಲ್ಲಂದೋಱುವೆಂ ನಿಲ್ಲಿಮೆಂದು, ಕಂದರ್ಪಕಲಾಧರರಂ ಸ್ಮೈತಿರಿಸಿಯುಡಿ ಸೊಪ್ಪುಳಾಗವಂತೊಪ್ಪದೊಳವಳ ಸನಿಯುನುಂ ಸಾರ್ದು– ಎಲೆ ರತ್ನಾವಲಿ ಬೆಲೆವೆಣ್ಣುಳಾವ ಬೊಜಗನೊಳ್ ‖

ಅನ್ಯರನವಟಯಿಸುವ ಸಾ ।
ಮಾನ್ಯತೆಯುಂ ಮಾಣ್ದು ಸನ್ನೆಗೆಯ್ಯುತ್ತಿರ್ಪಳ್ ‖
ಧನ್ಯನವನಲ್ತೆ ಜಗದೊಳ ।
ನನ್ಯಜರಾಜನ್ಯಜನ್ಯವೈಭವಮಾನ್ಯಂ ‖೧೩೪

ವ‖ ಎಂಬುದುಮುವಳ್ ಬೆರ್ಚಿದಂತೆ– ಅಯ್ಯಾ ನೀಂ ಬಂದುದಂ ಕಾಣದೆ, ಈ ಗುಂಬಳಂಬಱೆಯುವರ್ ದೊಂಬಿಗೂಡಿ ಪಾಡುವ ಬಣ್ಣವಾಡಂ ಕೇಳುತ್ತ ಪತ್ತಿಸಾರ್ದ ನಿಮ್ಮನಱಿಯದಾದೆಂ ಬನ್ನಿಂಬನ್ನಿಮೆಂಬುದುಮುವಂ ನಸು ನಗುತ್ತ,

ಏನೆವದಿಂದಿರ್ಕಿನ್ನೆರೆ ।
ಜಾನವುನುಱದಿಂತು ಮನ್ನಿಪೈ ಸಾರಸನಂ ‖
ಮಾನಿನಿ ಕೇಳ್ವನಗಿದು ಬಹು ।
ಮಾನಮಿಪಂಗೆನಗೆ ಭೇದಮೆಣಿಪರುಮೊಳರೇ ‖೧೩೫

ವ‖ ಎನೆ ಕೇಳ್ದವಳ್ ಹಮ್ಮೈಸಿ ಗಮ್ಮನೆ ತಮ್ಮಬ್ಬೆಯಿರ್ಪ ತಾಣವಂ ತೋಱುತ್ತ

ಅಯ್ಯಯಿದೇನಿದೇನಾ ।
ರಯ್ಯದೆ ನೀಂ ಗಲಭೆಗೆಯ್ದು ಗಾರೆಱೆಪರೇ ‖
ಕಯ್ಯಂ ಮುಗಿವೆಂ ಸೈತಿ ।
ರ್ದೊಯ್ಯನೆ ಪೆ ಸಾಱಿಮಿಾಗಳಡಿಗೆಱಗಿದಪೆಂ ‖೧೩೬

ವ‖ ಎಂದು ಮತ್ತಮವಳ್ ಗಬ್ಬನೆ ನಿಡುಸುಯ್ಯುತ್ತ ಕ್ಕಟಿಯೊಳ್,

ಪಣಮುಂ ಪಿರಿದುವಿನಮೊಣ ।
ಮಣದೊಳ್ ಪೆಸೆಗೊಳಿಸಿಯುಮುಕ್ಕುಮಂ ಮನಗೊಂಬೀ ॥
ಪೆಣದಿನಿಗಳ ಬಸಮೆನೆ ಬೂ ।
ಣ್ಣಂಗಳಮಗೆಲ್ಲಿ ರಸಿಕರೆಲ್ಲಿಯು ನೇಹಂ ॥೧೩೭

ವ॥ ಎನೆ ಕೇಳ್ದು ಕರುಣದಿಂ ಕಂದರ್ಪಂ ಕಲಾಧರನೊಡನೆ—

ಫುಲ್ಲೋತ್ಪಲ ಸರಸಸುಮನಃ ।
ಪಲ್ಲವಸಂಗದೆ ಪೊದಲ್ದು ಪೊಂಗುವನಿತಱೊಳ್ ॥
ಮಲ್ಲೀವಲ್ಲಿಮತಲ್ಲಿಗಿ ।
ದೆಲ್ಲಿಯು ಕಡುಮೆಂಕಿ ಸೊಂಕಿ ಕೊಂಕುವುದಕಟಾ ॥೧೩೮

ವ॥ ಅನ್ನೆಗಂ ವಸಂತಕಂ ಕೆಱುಮೊಗಂಗೊಂಡು ನಿಡುಸುಯ್ಯುತೆ ತಾನು ಮಿದೇ ಕಂದರೊಳ್ ಮೂಱುಂ ಚರಣಮನೋದಿ—

—ದೆಲ್ಲಿಯು ಮುದಿದೊಱು ವೇಗೆ ಮುತ್ತಿತ್ತಕಟಾ ॥೧೩೯

ವ॥ ಮತ್ತಂ, ಕಂದರ್ಪಂ

ತಾನೆಱ್ದು ತನಿವಳಂಗಳ ।
ಜೇನಂ ಸವಿದಲ್ಲಿಗಲ್ಲಿ ನಿಲ್ತಿಗದೊಳ್ಕಂ ॥
ದಾನಂದಿಸುವೆಳಸಾರಿಗೆ ।
ಗೇನಿಂಬಗೆವಂದು ಬಂದುದಿಂದಿಂಗಕಟಾ ! ॥೧೪೦

ವ॥ ಅನ್ನೆಗಂ ವಸಂತಕಂ ಮುನ್ನಿನಂತೆ ಮೂಱುಂ ಚರಣಮನೋದಿ,

—ಸೂನಾಲಯದೊಲೆಯು ಮುಂದೆ ಸಂದಪ್ಪುದಕಟಾ ! ॥೧೪೧

ವ॥ ಎಂಬುದುಮವಳ್ ಕಣ್ಬಸಿದುಂಬಿ ಕೆಂಬೆರಲ್ದುದಿಯಿಂ ನುಣ್ಬೆಸೆಯುಂ ಸೊಂಕುತೆ ಕಡುನೊಂದುಂ ಪಡೆದುಮಂದುದಿಂತುಟೆಂಬುದುಮವಂ ನೀಡುಂ ಪೊಱ್ತು ಜಾನಿಸಿ ಮುಂದಣೆಸಕಮಂ ನೆಟ್ಟನೆ ಪಡಿಗಟ್ಟಿ ಕಟ್ಟೆಱಕದೊಳ್—

ಬಿಸುಪ್ರೊನಲೊಳ್ ಬೞಲ್ದು ಬಸಗುಂದಿದ ಕಂದಿದ ಬಾಳೆಮೀಂಗಳೊಂ ।
ದೆಸಕಮನಾಳ್ದುವಿಂತುಟೆಸಳ್ಗಳ ಬಿಸಿಲೊಳ್ ಮಸುಳ್ಗೊಂಡ ತೊಂಡೆವ ॥
ಸೊಗಸುಮಿದಾಯ್ತು ಬಾಯ್ದೆರೆ ಪೞಂಚುವ ಪ್ರಣ್ಣವೆಗನ್ನೆ ಜೊನ್ನದೊಳ್ ।
ಮಿಸುಕುವ ಜಕ್ಕವಕ್ಕಿಗಳನಲ್ಕಿದೆ ಬಲ್ಕೆಲೆಯಕ್ಕಭೇವೆನಾಂ ॥೧೪೨

ವ॥ ಎನುತ್ತಮಳುತ್ತರಿಗೆಯುಸೆಱಂಗಿನಿಂ ಕಣ್ಣೀರ್ದೊಡೆದು ಮುಂಡೆದಡ
ವುತ್ತೆ,

ಪಕೆಂಬರೀಕೆಗೊಳರೇ ।
ಜೊಕೆಯೊಳಿಸಿಸಿನಿಸು ತಣ್ಪುವಡಿಪರುವೊಳರೇ ॥
ಈಕಾತರೆಯೊರ್ದೆಯೊಳ್ ಪುಟ ।
ಪಾಕಂಗೊಂಡಳುರ್ವುದನಿಶದಾಹಂ ಮೋಹಂ ॥೧೪೩

ವ॥ ಆದೊಡಮಾದುಗುಡಬಂದೊಂದೆಡೆಯೊಳ್ ಮುದುಡುಗೊಂಡು ಮು
ಸುಂಕಿ ಪಟ್ಟಿರಲೀಯದೀಕುಟ್ಟಿನಿಯರ್ ॥

ನಡೆವಳಿಯುಮನೆಂದೊರ್ವನ ।
ನೊಡನೀಗುಂ ಪಱ್ಕೆಗೆಂದು ಪೆಱನೊರ್ವನನಾ ।
ಯೆಡೆಯೊಳ್ ಕಿಱಿಯೊತ್ತಿಯುನಿ ।
ತ್ತೊಡೆ ಮತ್ತೊರ್ವನುಮನಡಸಿ ಬಿಡದಮರಿಸುವರ್ ॥೧೪೪

ವ॥ ಎನೆಯುಮವಳುಕರ್ಣಪಱ್ಕೆಯಿಂ ಬಿಕ್ಕುತ್ತೆ,

ಆಪಡುವ ಪಲವು ಪಾಟುಗ ।
ಳಾಪ್ರೋರಟೆಯಾಪ್ರೇರಕ್ಕೆಯಾಪ್ರುಯ್ವಾಗೆ ಮು ॥
ತ್ತಾಪರಮಣಿಗೆಗಳಾಪಱು ।
ವಾಪೇಸಿಕೆಗೆಯ್ಮೆಯಿರಮನೇವಗಯೊರೆವಂ ॥೧೪೫

ಪಸಗೆಟ್ಟುರವಣಿಸುವ ಬೞು ।
ಬೆಸನಿಗನೊಳ್ಪಸೆಗೆ ಸಂದು ಬೆಸವಱಿವುದಱಿಂ ॥

ಪಸುಸೂಲದ ಬಿಸುನೆತ್ತ |
ರ್ಬಸಿವರೆಯುಸಿರ್ವೆಣದ ಬಾೞ್ತೆಯೋ ಪಸನಲ್ತೇ ||೧೪೬

ವ|| ಎನೆ ; ವಸಂತಕಂ—ಇಂತಿರ್ದ ಬೞಿಕ್ಕೆಯುೞ್ಕೆಯೋಂ ನಿಲ್ಕೆ ||

ಪಸು ಪಿನಂಬರಂ ಮಸಗುವೀಪ್ರೊಸಜನ್ಮನದೋಜೆಗೆಯ್ತವಂ |
ಮೀಸಕೆ ಮಾಱು ಮಾಱು ಕಸಮಾಱುಯ ಬರ್ದೆಯು ತಳ್ತ ಬಾೞ್ತೆಯುಂ ||
ನೀಸುವೆ ಸಾಕು ಸಾಕು ನೆರೆ ಸಾಸಮನೇಱದೆ ಪಂದೆಮಾಸಿಸರ್ |
ಲೇಸನೆ ಕಾಣರೆಂಬ ಪೞನಾಣ್ಣುಡಿಯುಂ ಪಿಡಿ ಗೆಲ್ಕನಳ್ಕದಿರ್ ||೧೪೭

ವ|| ಎನೆ ; ಕೇಳ್ದವಳ್ದಟಂಗೊಂಡಾದರಿಸಿಮಿಂದುನಾಳನೊಳ್ ನಿಮ್ಮ ಕಿವಿಗುಮ್ಮಹಮಿಾವನೆಂದು ನಸುನಗೆದೋಱ್ಪುದುಮಿವಂ ಬೆಚರ್ುತ್ತೆಲೆಲೆ ಮೋಸಂಬಂದುದು, ಸಾಸಮೆಂದೋಡಿವಳ್ ಕಿಱುವಿಯನಳವಿಗೆಳಸದೆ ತನ್ನಱುವಿಂಗಂಗವಿಸಿದಪಳಿದಂ ತವಿಪೆನೆಂದು ಪೊಣ್ದು,

ಏವೆನಿದೇನಕಟಕಟಾ |
ಜೀರ್ಣ ಭದ್ರಾಣಿ ಪಶ್ಯತೀತ್ಯಾದಿಗಳಂ ||
ಭಾವಿಸುವ ಬಗೆಯು ಬಿಗಿವಿಡಿ |
ಜೀವಂ ಬಿಡೆ ನಮಗೆ ವರ್ಪ ಪುರುಳೇಂ ಮರುಳೇ ||೧೪೮

ಕನಕಖನಿಗೆತ್ತು ನಿನ್ನಂ |
ಕನಕಾಶೆಯೆ ತಳ್ತ ಮುತ್ತ ಮುದುಗುಂಟಣಿಗೇ ||
ಕನಕಾಂಗಿ ಮನಂಗೊಳಿಸಾ |
ಕನಕದಿನನಿವರ್ತ್ಯಮೋಹಮುಂ ಬಿತ್ತರಿಸಾ ||೧೪೯

ವ|| ಬೞಿಕ್ಕೆ ಸಾರಸನಿರ್ಪಿಡೆಯುಂ ತೋಱಿ—

ತನುಮನಂಗಳನುೞಿದೀ |
ತನುಮಾನಂದದೊಳ್ ಪೊಣ್ದನೀಯೆಸಕಕ್ಕೆ ||

ನ್ನನುವಮಾನಿಸದಿರ್ ಮಾನಿನಿ ।
ಯನುವಮಾನಿಸನೀವನಕ್ಕುಮಕ್ಕನೆ ಕಜ್ಜಂ ॥೧೫೦

ವ॥ ಎಂದು ಬಱಿಕ್ಕೆ ಸಾರಸನೊಡನೆ,

ತೊಲಗಿಸಿ ಕಳಿದ್ಯೈ ಭಳಿಯಂ ।
ಡಲೆಯುತೆ ಗಲಗಲನೆ ಕೆಲೆವ ಪಳಶಂಭಳಿಯಂ ॥
ಕೆಲಕಿಡು ಪೞಗೆಂಬೞಿಯಂ ।
ನೆಲೆಗೊಳಿಸೀನೀಱಿಯೊಡಲನೆರೆವುಂಬೞಿಯಂ ॥೧೫೧

ವ॥ ಎಂದವರಿರ್ವರುಂ ಬೆಸಗೊಂಡು ಕಂದರ್ಪಕಲಾಧರರಂ ಬೆಂಗೊಂಡು ನಡೆವಿನಮಾಯೆಡೆಯೊಳ್ ಭದ್ರಾನತಿಯ ಭದ್ರಶಾಲೆಯ ಮುಂದೆಸೆವ ಸಾಂದ್ರಚಂದ್ರೋಪಲಪಟ್ಟಿಕಾಪರಿಘಟ್ಟಿತಕುಟ್ಟಿಮಾಂಕಣದೊಳ್ ತಿಂತಿಣಿಸಿದ ಗಣಿಕೆಯರಂ ಕಂಡು ಕಲಾಧರಂ ಕಂದರ್ಪನೊಡನೆ—

ಗಣನೆಗೊಳಲ್ಕದೇಂ ನೆರಪಿದಂ ಮದನಂ ಕದನೋತ್ಸವಕ್ಕೆ ಮೇಣ್ ।
ಪೂಣರಿಸಲೆಂದು ಪೇರಿಸುವನಲ್ಲದೊಡೇಂ ಪೆಱಸಾರದಂತೆವ್ರೋಲ್ ॥
ಬೆಣೆಯುನಮರ್ಚೆ ಪೂಣ್ದಪನಿದೆಂಬಿನಮೇಂ ಬಗೆವಂದದಿಂದು ಸಂ ।
ದಣಿಸುತೆ ಗುಂಬದಂಬಟೆವುಯಿಲ್ವಱಿಯಿಂ ಗಣಿಕಾಕದಂಬಕಂ ॥೧೫೨

ವ॥ ಮತ್ತಂ,

ಸನ್ನೆಯ ದುಂದುಭಿರವದಿಂ ।
ದನ್ನೆರೆಯುರ್ಬೇಱಿಸಬ್ಬ ಲಗ್ಗೆಗೊಳಲ್ಕಿಂ ॥
ದೆನ್ನ ಬಿಡು ತನ್ನ ಬಿಡೆನು ।
ತ್ತೇನ್ನೆರೆದುದೊ ಬೀರರೆಂಬಿನಂ ಬೆಲೆವೆಣ್ಗಳ್ ॥೧೫೩

ವ॥ ಎನೆ; ಕೇಳ್ದು ವಸಂತಕಂ— ಐಯಾ ನಿನಗೀವೀರಕಂದರ್ಪಪರಿಚಯಪ್ರಾಚುರ್ಯದಿಂ ಮೆಲ್ಪಿಡಿದ ಬೆಲೆವೆಣ್ಗಳ ಸಿಂಗರಗೆಯ್ಮೆಗಳುಂ ಪ್ರಯುಲ್ಲಂ ಪೋಣ

ರ್ಕೆಯುವನಾಗಿ ತೊಱೆದೊಡೆನಗಂ ನಿನ್ನಿರ್ವರ ಕೆಳೆಯಿಂ ಬೀರಮಿರ್ಪು ಡಿಸಿ ತೋರ್ಕುವುದೆಂತೆನೆ :—

( ವಾರ್ಧಕ ಷಟ್ಪದಿ )

ಕಳೆದಿಟ್ಟ ಕರ್ಬಟ್ಟೆಯೊರೆಗಳೆಡೆನೆ ಪ್ರಜ್ವ |
ಜ್ವಳಿಪಿಸಿದುದೋ ಖಂಡೆಯಂಗಳೆನೆ ನಿಡುಗಣ್ಣ |
ಳಳವಿನಿಂದೊಡ್ಡಿದವುಳಡ್ಡಣದ ಪಾಂಗಿನಿಂ ತೊಳಗೆ ಕಡುತೋರವೊಲೆಗಳ್ ||
ಚಳಕದಿಂ ಕಡಿದಿಱಿದು ಪಾಯ್ದು ಕೇಶಾಕೇಶಿ |
ದಳೆದು ಮುಷ್ಟಾಮುಷ್ಟಿ ಚೇಷ್ಟಿತದೊಳಿದಿರಾಂತ |
ರಳವನಸಕಳದು ಪಾಡಿಱಿಸಿ ಬಸನಱಿ ಭಟ್ಟೀಚೆಲ್ವೆಯುರದೇಂ ನಿಲ್ವರೇ ||೧೫೪

ವ|| ಎನುತ್ತೆ ತನ್ನೊಳ್ ತಾಂ ಭೋಂಕನೆ ಕೆಂಕರಿಸಿ ಬಿಱುಬಿಱನೆ ನಗುತ್ತೆ —ಅಯ್ಯಾ ಬೀರದಿಂದೆನ್ನ ನುಡಿ ನಿನ್ನ ನುಡಿಗಳನಿರ್ಪಡಿಸಿ ಪೆರ್ಚಿದಂತೆ ಡೊಂಬಿಯ ತಂಬಟೆಗರ್ ಪಾಡುವ ತಿವದಿಯನಿರ್ಪಡಿಸಿ ಷಟ್ಪದಿಯಾದುದೆನುತ್ತೆ ಪತ್ತೆಸಾರ್ವಿನವನಿತಱೊಳಾವಾದ್ಯವಿದ್ಯಾಧಿಕರ್ ಮರ್ದಳಪನುದ್ರ್ ಮಯೂರವಾರ್ಜನೆಯಿಂದನಿಬರ ಮನವನಾವರ್ಜಿಸಿ ದೇಶಕಾಲಾನುಗುಣದಿಂ ಕಾಮತಂತ್ರದ ವೈಶಿಕಪ್ರಕರಣಮಂ ಬಣ್ಣವಾಡುಗೆಯ್ದು ಪಾಡಿದರದೆಂತೆನೆ :—

(ತಿವದಿ)

ಸಿರಿರಾಣಿಯಣುಗಂಗೆ ಸಿಂಗಾರದೆಱೆಯಂಗೆ |
ಸರಸಶೀಲಂಗೆ ಚದುರಂಗೆ, ಮದನಂಗೆ |
ಸುರುಚಿರಾಂಗಂಗೆ ಸುಖಮಕ್ಕೆ ||೧

ಮೇಳದೊಳ್ಗಂಡರ್ಗೆ ಮೆಚ್ಚುವಂದದೆ ಕಾಮ |
ಕೇಳಿಕೌಶಲದೆ ಗೆಲವಿತ್ತು, ಚಲೆವೆತ್ತ |
ಸೂಳೆಗೆಯ್ತಕ್ಕೆ ಶುಭಮಕ್ಕೆ ||೨

ಸಾಣೆಕೊರ್ದೇಜೆಯಂ ಸೈತೇಜಮಂತೆವೊಲ್ |
ಮಾಣದೊಳ್ಪುರ್ವ ಮನವೊಲ್ದು ಪೆಣ್ಗೊಂಬ |
ಜಾಣಗಂಡರ್ಗೆ ಜಯಮಕ್ಕೆ ||೩

ಅಗ್ಗದೊಳ್ ಜೂಜಗನಾವುಗ್ಗಲಲ್ಲಿರೆ ಪೊನ್ನ |
ಸುಗ್ಗಿಯೊಂದುರ್ಕಿ ಸೊಗವೊಂದು, ಪೆಲೆವೆಣ್ಗೆ |
ವೆಗ್ಗಳದ ಫಲಮಿವೆರಡೈಸೆ ||೪

ತನ್ನಿಂದೆ ತಾನಪ್ಪುದಾನಂದಮುದು ನಿಲ್ಕೆ |
ಪೊನ್ನ ಕೊಂಪೋಜೆ ಪೊಸತಲ್ತೆ, ಅದರಿಂದು |
ಬಿನ್ನಣಮೆ ಬೇಕು ಪೆಲೆವೆಣ್ಗೆ ||೫

ತನ್ನಾಸೆಯುಲ್ಲದೀಚೆನ್ನಿಗನ್ನರ ಮೇಲೆ |
ಪೊನ್ನಾಸೆಯಿಲ್ಲೆಂದಣಿಪಂತೆ, ನಡೆವಳ್ಗೆ |
ಸೊನ್ನೆಯಾಸೋನೆ ಸುರಿಯದೇ ||೬

ಬೇಡಳೇನುಮನೆನ್ನ ಬೇಳ್ಪ ವಸ್ತುವನಾನೆ|
ನೀಡಬೇಕೆಂದು ನೆಲೆಗೆಯ್ದು, ವಿಟನೊಲ್ದು |
ಮಾಡೆ ಪೆಂಪಿಡದೆ ಮನೆವಾಳ್ತೆ ||೭

ವ|| ಇನಿತಂ ಕೇಳ್ದು ಕಲಾಧರಂ ಕಂದರ್ಪನೊಡನೆ— ಸೂಳೆಯರ್ಗೆ ಬೊಜಗನಿಂ ಪೊನ್ನುಂ ಸೊಗಮುಮಂ ಬರ್ಕುಂ, ಅದರೊಳ್ ಸೊಗಮಿವರ್ಗಂ ಪುದುಗಾದುದರಿಂದವರ್ಕಿರ್ವರುಂ ಪೊಣ್ದಪರ್, ಪೊನ್ನವಂಗೆ ಪೋಪುದುಮಿವಳ್ಗೆ ಬರ್ಪುದುಮಾದುದರಿಂದಿವಳವರ್ಕೆ ಪಲವುಂ ಪ್ರಯತ್ನಂಗೆಯ್ವುವೇಳ್ಪುದದರೊಳವೊಲ್ದಿರ್ಪುದೆಂಬರ ಸಹಜಮಾದುದರಿಂದಿವಳರ್ಥಪರೆಯುಲ್ತು ಕಾಮುಪರೆಯೆಂದು ತೋರ್ಪಂತೆ ಅಭಿನಯಿಪುದೇ ಪ್ರಧಾನಕರ್ಮಮಾಯ್ತೆನೆ; ವಸಂತಕಂ— ಅಯ್ಯಾ ನಿನ್ನ ಬಿನ್ನಣದ ಪಿಸಿಪಿಸಿಮಾತಂತಿರ್ಕೆ ಮಿಕ್ಕುಂ ಪೆರ್ಚಿಸಿ ಪಾಡುಪರೊಳಾಂ ಪಡಿಬರಿಸಿ ಪಾಡುವೆಂ ಕೇಳೆಮೆಂದು ಸಡಗರಿಸಿ ನಡೆದಾಡೊಂಬಿಯುಂ ಪೊಕ್ಕು ತಂಬಟೆಗರಂ ಬಾಯ್ವಿಟ್ಟು— ಹೋ ಹೋ ಗಲಬೆಗೆಯ್ಯದಿರಿಮೆಂಬುದುಮವರ್ ಬೆಱಗುವಟ್ಟು ನಿಟ್ಟಿಸಿ ತೊಟ್ಟನೆ ಪಾಡುವುದಂ ಬಿಟ್ಟು ನಿಲ್ವಿನಮಿವಸೆಳೆ ಈಸೂಳ್ವಾಡಂ ನೀಮುಮಾನುಂ ಸೋಱ್ಗೊಂಡು ಪಾಡುವಂ ಬಡಬಡನೆಡೆವಿಡದೆ ಬಾಜಿಸದೆ ಪದದ ಪಾದದ ಮುಗಿವಿನೊಳ್ ಕಿಱಿದೊಂದೊಂದು ಜತಿಗಳಂ ಬಾಜಿಸಿಮೆಂದು ನಿರವಿಸಿ ವಸಂತಕಂ—

(ತ್ರಿಪದಿ)

ಸೂಳೆಗಲ್ಕದೊಳಿರ್ಕೆ ಸೂಳೆಯಾಬಗೆ ತಳ್ಗೆ ।
ಸೂಳೆಗಾಜಂಗೆ ಸೊಗಸಕ್ಕೆ, ನೋಡುವಾ ।
ಸೂಳೆಯಾತಾಯ್ಗೆ ಸುಳಿಗಳ್ಗೆ ॥೮ (?)

ಬಲ್ಲಾದುಗೆಯ್ದಿಬ್ಬ ಮೆಲ್ಲಾತಿನೊಳ್ ಸೂಳೆ ।
ಯಿಲ್ಲಲಾಮಾತಾಪಿಗೆಣೆ ಯೆನೆ ಕೊಯ್ದುಟ್ಟು ।
ಮೆಲ್ಲಗೆಯ್ತ್ರಯೊಳ್ ಮಿಡುತಕ್ಕೆ ॥೯

ವ॥ ಎಂದು ಪಾಡುತ್ತೆ ವಸಂತಕಂ ತನ್ನೊಳಾನೀತಂಬಟೆಗರಂ ವಿಡಂಬಿಪ್ಪ ದರ್ಕೆಂಬಿನದವಾಡಂ ಪಾಡೆಯಿವನಿತುಮೀನರ್ಸಖಿಯುರ್ಗೆ ಮರ್ಮೋಕ್ತಿಗಳಾದುವಱಿಂದೆನ್ನೊಳ್ ಬಗೆದೆಗೆದಪರೀಕ್ಷಣಿಹದೆ ಕೋಪಂ ಸಾರಿಪೆನೆಂದು ಪಾಡುವುದಂ ತವಿವರೊಡನೀಸೂೞ್ಗೆ ನೀಂ ಪಾಡಿಮೆಂಬುದುಮವರ್—

(ತ್ರಿಪದಿ)

ತಾಯ ಪೋರಟೆಯೆಂಬ ತಳ್ತ ಮಾಮಮನೊಡ್ಡಿ ।
ಬಾಯ ಬಿಟ್ಟೊಂದಂ ಬಯಸದಾ, ಸೂಳೆಗಾ ।
ದಾಯಮಿರ್ಮಡಿಸಿ ತಳೆವುದು ॥೧೦

ವ॥ ಇದಂ ಕೇಳ್ದು ವಸಂತಕಂ ಮನದೊಳೀಯುನ್ಮತ್ತರುಮೆನ್ನವೋಲತ್ತೆವಾಡಂ ಪಾಡುವರಿವಂ ತವಿಪೆನೆಂದೆನಿಸಿಯುವರೊಡನೆ—ಎಲೆಲೆ ಮಣ್ಣಾದಂ ಬೞೆಯಣ್ಣಂದಿರ್ ಕೇಳಿಂ ಮುಕ್ಕುಮುಕ್ತಾದೀಮುಕ್ಕಾಲ್ವಾಡುಗಳ್ ಸಿಲ್ಕಿ ಜೋಕೆಯಿಂ ಚೌಕಂಗೊಂಡು ಬಣ್ಣಿಗೆಯೊಳ್ ತುಂಬುವಾಡಂ ಪಾಡಿಮೆಂಬುದುಮವರ್ ಮನದೊಳವಸೆಮ್ಮಂ ಸಬ್ಬವಂಗೆಯ್ದೞ್ಬವಲ್ಲದೆ ಬಿಡನವಾಯುಂ ಬರ್ಪುದರ್ಕೆ ಮುನ್ನಮುಪಾಯದೊಳ್ ಪೋಪಮೆಂದೆಣಿಸಿ ವಸಂತಕನೊಡನೆ ಮಗಿಂ ಸುಪ್ಪಿಯ ತ್ರಿಪದಿಗಳಲ್ಲದೆ ತೋಱದೀಮನೆಯ ಸೂಳೆವೆಣ್ಗಳ್ ಸಾಂಗತ್ಯಮಂ ಪಾಡುವರಿಂ ಕೇಳ್ವುದೆಂದು ಬೀೞ್ಕೊಂಡು ಪೋಪುದುಮವಾಬಂಬಲ್ಗೊಂಡ ತುಂಬುಂಜವ್ವನೆಯರ್ ತಂತಮ್ಮಮನೆಗಳಂ ಸಾರ್ವಿನೆಗಂ ವಸಂತಕಂ ಕಂದರ್ಪಕಲಾಧರರನೊಡಗೊಂಡು ಮನೆಯೊಳಅಂಗಳದೊತ್ತಿನ ನಿಚ್ಚಳದ

ಪೆರ್ಚಿಯ ಜಗಲಿಯೊಳ್ ಕುಳ್ಳಿರ್ದು ಬೆರ್ಚಿಂತೆ ಮುರ್ಚಿದ ಕದವನಿನಿಸುಂ ಬಿರ್ಚಿ ನೋಡಿಯುರ್ಚರಿವಡುತ್ತೆ ಕಂದರ್ಪಂ ಕಲಾಧರನೊಡನೆ—

ಪೊಸತೆ ಮುಸುಂಕದರ್ಚ ಪೊಸಬಾಂಬೊಱೆಯಿಂಬೊನಲೊರ್ವ ಕೂ
ನೆರ್ಗಣಂ | ಮುಸುಱಿದ ಜೇನ ಪುಟ್ಟಿ ಪೊನೆಮುಳ್ಳಿಲಿಗೇದಗೆ ತಳ್ತಪೆರ್ಚಿವಾ ||
ಪಸೆಯೆಸವಾಸವರ್ಥಿಬಿಸಜಂ ಕಱಿಯೊಂದದ ಚಂದುವಟ್ಟಿ ಮಾ |
ಮಸಗಿತೊ ಗಂಡುವೋಳಗರ ಕೈಬೆಮರೊಂದದ ಸೂಳೆವೋಳವೋಲ್ ||೧೫೫

ವ|| ಎಂಬನಿತಱೊಳಾಸೂಳೆವೆಣ್ಗಳ್ ಮೇಳಂಗೊಂಡು,

(ಸಾಂಗತ್ಯ)

ಕಾಮಂಗೆ ಜಯಮಕ್ಕೆ ಕಾಮಿನಿಯರ ಪಕ್ಕೆ | ಕಾಮುಕರಿಗೆ ಕರಮಕ್ಕೆ ||
ಕಾಮತಂತ್ರಗಳ ಕಲ್ತೋದಿ ಪಾಡುವ | ರೀಮಹಿಯೊಳಗೇಳ್ಗೆದಾಳ್ಗೆ ||೧

ವ|| ಎನುತ್ತವರ್ ತಣ್ಣನೆ ಪಾಡುವ ಬಣ್ಣವಾಡನಾಲಿಸುತ್ತೆ ಕಲಾಧರಂ ||

ತಿಂಗಳ್ವಟ್ಟಿಂದಂದಂ |
ದಿಂಗಿಱಿದಾಕಳೆಗಳೀಕೆಗಳ ಮೆಯ್ವರಿಜೆಂ ||
ದಂಗಳದೊಳ್ ಮೆಱೆವಪುವಿಂ |
ಸಿಂಗರವಾಡಂಗುವೆರಸಿ ಪೊಂಗುವುಪಮ್ಯತಂ ||೧೫೬

ವ|| ಎಂಬನಿತಱೊಳ್ ವಸಂತಕನಾನಂದಪಾರವಶ್ಯದಿಂ ಕಂದರ್ಪಕಲಾಧರರಂತೆ ಕಿವಿಯಿತ್ತಾಲಿಪುದುಂ ಪುನಮೊಲ್ದು ಭಾವಿಪುದುಮಲ್ಲದಿವು ಕವ್ಕನಿಪ್ಪೆದೆಂದೊಯ್ಯನೆ ಸುಯ್ಯಂ ಸೇದಿ ಶೀಘ್ರನಾಘ್ರಾಣಿಸುತುಂ, ಕೆರ್ಚನಿಪ್ಪುದೆಂಪರ್ಚರಿಯಿಂ ಕಣ್ಬಿರ್ಚಿ ನಿಟ್ಟಿಸುತುಂ, ಸೀಯನಿಪ್ಪುದೆಂದೊಯ್ಯನೆ ನೆರೆವಾಯ್ದೆಱದಿಂಪಿ ಚಪ್ಪರಿಯುತುಂ, ತಣ್ಣಗಿಪ್ಪದೆಂದು ಗೆಲ್ಕನೆಲ್ಕಱಿಂ ಬಿಗಿಬಿಗಿದು ತಳ್ಕೈಸುತುಂ,

ಮೃಗಮದದಿಂಪು ನಾಸಿಕೆಗೆ ಕಣ್ಗನುಗಪ್ಪುರನತ್ತಿ ಮತ್ತೆ ನಾ |
ಳಗೆಗಮೃತದ್ರವಂ ಸರಸಚಂದನಚರ್ಚೆ ತೊವಲ್ಗೆ ಕರ್ಣಪಾ ||

ಳಗೆ ಕಳಕೋಕಿಲಾರವವನುನಾರತನಿರ್ವೃತಿ ಚಿತ್ತವೃತ್ತಿಗಿ |
ಕೆಗಳಶೆವೀಣೆಬೇಣುಗಳ ಬಾಜಿಸಿ ಪಾಡುವ ಬಣ್ಣವಾಡುಗಳ್ ||೧೫೨

ವ|| ಎಂಬುದುಂ; ಕಲಾಧರಂ—ಎಲೆ ವಸಂತಕ, ನೀಂ ಪೊಱಗಪ್ಪ ಬಣ್ಣದಿಂ ತಣ್ಣನೆ ತಣಿದೈ, ಆಮುಮಿವರೊಳಗಪ್ಪ ಪುರುಳ ತಿರುಳಂ ತಿಳಿದು ಸಂತಸಂಬಡೆವವೊಂದವನಂ ಸ್ಯೈತಿರಿಸುವುದುಂ; ಮತ್ತಮಾಚಾತುರ್ಯವತಿಯರ್

(ಸಾಂಗತ್ಯ)

ತನುಮನವೆರಡೊಂದು ದಾರಿವಿಡಿದು ಸೊರ್ಕಿ | ಯಿನಿಗೆಯ್ತದೆಸಕದೇೞ್ತರದೆ |
ತನಗೊಲ್ದ ಚದುರೆಯು ತಾನೊಲ್ದು ನೆರೆದೊಡ | ದನುಪಮಾನಂದಮೆನಿಪುದು ||೧

ಮನದೊಲ್ಮೆ ನೆಲೆಯುಕ್ಕೆ ಮಾಯುಮದಕ್ಕೆ ಮೇ | ಣನುಗೆಯ್ಮೆಯನಳವಡಿಸಿ |
ತನಗೊಲ್ದಳೆಂಬಂತನುವಿಸೆ ಕಾಂತನ | ಮನಕೆ ಸೊಗಸುಮಸಗುವದು||೨

ಕಲ್ಮನದಿನಿಯಂಗೆ ಕರಗಿ ಗಂಡಂಗದ | ಬಲ್ಮೆಯಿಂದು ಬರ್ಪಂತೆ |
ಬಲ್ಮೆಗುಂದುಪುಗಳೊಳೊಂದುಂದಯದೆ ತೋಱಿ | ನಲ್ಮೆಗೊಳಿಸಿ ನಲಿಸುವುದು ||೪

ಅವನ ನೇಹಿಗರೊಡನನುಗೆಳೆವಳೆಯಿಸಿ | ಸವಿಗತೆ ಸಂದಣಿಯಲ್ಲಿ |
ಅವನಂದಚೆಂದವನವನ ಚಾತುರ್ಯವ | ನವರ ಮೊಗದೊಳಾಲಿಪುದು ||೫

ವಿವರಿಸಿ ವಿವರಿಸಿ ಕೇಳ್ದುಕೆಳ್ದೀಂಟುತೆ | ಸವಿಸವಿಸವಿದು ಸಂತಸವೆ |
ಕವಿಯೆ ಕಟ್ಟಿಱಿಕದ ದಿಟ್ಟ ಮೆಯ್ಮುರಿಪಲ| ನಾವುದು ಸುಯ್ಗಳ ಸೂಸುವುದು ||೬

ಅಂಗಱಿತವನ ಗುಣಂಗಳ ಬಣ್ಣಿಸು| ವಂಗನೆಯುತ್ಸಂಗದೊಳು |
ಅಂಗವನೀಡಾಡಿಯುವಳ ಸಂಗತಿಯೊಳೆ | ಹಿಂಗದೆ ಹೆಕ್ಕಳಿಸುವುದು ||೭

ಎಡೆಯೊಳೆನಿಸು ಪೊೞ್ತುವೆಯಾಡದಿದೊರ್ಗಂದು | ಕುಡುಮ್ರವರ್ಣನೆ ಕೊಂಕುಗೊಳಿಸಿ |
ಬಿಡವೆ ಜಾಸಿಸಿ ಮಿಡುಮಿಡುಕಿ ತನ್ನೊಳಗೆ ತಾ | ನೊಡನೆೞ್ಱಡಿಬಾಲಿಪುದು ||೮

ಇನಿಯನ ಸುದ್ದಿಗೇಳ್ವೆಡೆಗೆ ತಾನೆಯ್ತಂದು | ಮನವಾರ್ತೆ ವೇೞ್ವಮಾತೆಯೊಳು |
ಮೊನೆದೋಱಿ ಮುನಿದು ಮುಕ್ಕಿರಿದು ಕಳುಪಿ ಮುನ್ನಿ | ನನುವಾತುಗಳನಾಲಿಪುದು ||೯

ಪಸಿದೆಮೆಚ್ಚಿರೆ ಕಾದ ಪಗಲ್ತಿತಂದುದೆಂ| ದುಸಿರ್ವ ಮಾತೆಯೊಳುರವಣಿಸಿ |
ಬಿಸುಬಿಸುನುಡಿಗಳಿಂ ಪೆಱದೆಗೆಯಿಸಿ ಮುನ್ನ | ಪಸವಾತನೊಸದಾಲಿಪುದು ||೧೦

ಪೇೞಪೇೞೆನೆಂದು ಪೇೞ್ದುದೆ ವಿವರಿಸಿ | ಪೇೞಿನ್ನೊಮ್ಮೆ ಪೇೞೆಂದು |
ಪೇೞ ಪೇೞ್ವಳನೇೞಲೀಯದೆ ಬಪ್ಪು ದೇ | ವೇಳೆಯೊಂದಾಸೆಗೊಳುವುದು ||೧೧

ವ॥ ಎನೆ; ಕೇಳ್ದು ಕಲಾಧರಂ ಕಂದರ್ಪನೊಡನೆ ಕಿವಿವೇಟದ ಬಗೆ ಸೊಗಸಾದುದೆಂಬಿನಂ ; ವಸಂತಕನಿಬೇಟವನಿತುಂ ಬೂಟಕಮೀಯಾಟವುಂ ವಿಟಂ ಕೇಳ್ದು ಪೆರ್ಕಳಿಸಿ ಬರ್ಕೆಂದು ಬನ್ನಂಬಡುವ ಬಗೆಯೆಂಬುದುಂ ; ಕಂದರ್ಪಸೀಕಿವಿವೆಟ್ಟ ಬಯಕೆಯುಂ ಪಾಡುವ ಕಣ್ಬೇಟವುಂ ಕೇಳ್ವವೊಂದು ಸೈತಿರಿಸುವಿನಂ ; ಮತ್ತಮಾಮತ್ತಕಾಸಿನಿಯರ್—

(ಸಾಂಗತ್ಯ)

ಅವನೊಲ್ದು ಕೇರಿಯೊಳ್ಪೈತರ್ಪ ಪೇಳೆಯು । ನವರವರಿಂದಾರಯ್ದು ॥
ಪವಣಿನೆ ಸಿಂಗಾರವಾಂತು ಮಾಡಮನೇಱಿ । ದಾವಲೋಕಿಪ್ಪುದರ್ವೆತ್ತು ॥೧೨

ದೂರದೊಳೆಯ್ತರೆ ತುಂಬುಮೊಗವ ತೋಱಿ । ಭೂರಿಲೀಲೆಗಳ ಪೊಸಯಿಸಿ ॥
ಸೇರಿ ಬರ್ಪನವನುಸಿಂಗರದೇಸಿಯು । ಕೋರೆನೋಟವ ಕೊನರಿಪ್ಪುದು ॥೧೩

ನೆಟ್ಟನೆ ಬಳೆದು ಸೆಗೞ್ದು ತೊಟ್ಟೆಡೆಯೋರೆ । ವಟ್ಟಲದಾವರೆಯಂತೆ ॥
ಬಟ್ಟಮೊಗವನೋರೆಗೊಳಿಸಿಯುವನ ಮೊಗ । ವಿಟ್ಟ ದಿಟ್ಟಿಯೊಳು ನಿಟ್ಟಿಪುದು ॥೧೪

ಚೆಲ್ಲವಾಡುತ ಸಖಿಯರ ಸರಸದ ನೆವ । ದಲ್ಲಿ ಸಲ್ಲೀಲೆಯೆಸಗುತ ॥
ಮಲ್ಲಿಗೆಯಲರ ಮಱೆಯು ಮಸಗಿಸುವಂತೆ । ಚೆಲ್ವನೋಟಗಳ ಚೆಲ್ಲುವುದು ॥೧೫

ಮುಂದಿರ್ಪ ಕೆಳದಿಯ ಕಂದದ ಮಱೆಗೊಂಡು । ನಿಂದಲ್ಲಿ ನಿಡುನಿಟ್ಟಿಸುತ ॥
ಬಂದೊಂದು ಲೀಲೆಯೊಳೊಳ್ಮೊಗವನೆ ತೋಱಿ । ಪಿಂದೆಗೆವುದು ಬಿಂಕದೊಳು ॥೧೬

ನೋಡುವುದವನ ನೋಟದ ಸುೞಿವಿನೊಳನು । ಗೂಡಿ ನೋಟವ ಕೊಂಕಿಪುದು ॥
ಕೂಡೆ ಮಱಲ್ದು ಕೊನೆನೋಟಗಳಿಂ ಕೂರ್ತು । ನೀಡುಂ ಪೊೞ್ತು ನಿಟ್ಟಿಪುದು ॥೧೭

ಮುದದಿ ಮೋಹಿಸಿ ಮುಂದುವರಿವೆನ್ನೆರ್ದೆ*ಯಿರ । ವಿದನೋಡೀಪರಿಯೆಂದು ॥
ಇದಿರಿಡುವಂತೆಪ್ಪೋಲೆಳನಗೆಗೂಡಿದ । ಪದನೋಟವ ಪರ್ಬಿಸುವುದು ॥೧೮

ಬಗೆದು ತಾವರೆಗೆ ಬಂಬಲ್ಗೊಂಡು ತುಂಬಿಗಳ್ । ಮೊಗೆದು ಮುಸುಱಿ ಮುತ್ತುವಂತೆ ॥
ಬಗುಮೆಗೆಯೊಳೆ ಕವಿಪ್ಪಾಳ್ಪನೋಟಗಳಿಂದೆ । ಮೊಗವ ಮುಸುಕಿ ಮುದ್ದಿಪುದು ॥೧೯

ಬಿಗಿದ ಪುರ್ವೆಂಬ ಬಿಂಕದ ಬಿಲ್ಲನು ಸೇದಿ । ಮುಗುಳಂಬನಿಸುವಂಬುಗಳೆ ॥
ತೆಗೆಬಗೆಯೊಳು ತಿಂತಿಣಿಸಿ ಕವಿವ ಪೊಸ । ಸೊಗಸುನೋಟಗಳ ಸೂಸುವದು ॥೨೦

ತವಕವಾಡುವ ತತ್ತರಿಪ ತಲ್ಲಣಿಸುವ । ಬವಣಿಗೊಳುವ ಬಂಬಲಿಡುವ ॥
ಕವಿವ ಕಾತರಿಪ ಕರಗುವ ಕಾಲೂಱುವ । ಸವಿನೋಟಗಳ ಸಮನಿಪುದು ॥೨೧

ವ॥ ಎನೆ; ಕೇಳ್ದು ವಸಂತಕಂ—ಅಕಟಕಟ! ಕೆಗಳ್ ತನ್ನಿಂ ತಾಂ ನೆಗಳ್ದುದ ನೋಟಕ್ಕೆ ಕೋಟಲೆಗೊಂಬರೆಂಬುದುಂ ; ಕಲಾಧರಂ— ಪ್ರಕಣ್ಯೋಟದ ಬಳಿಯಿಂ ನಡೆವೆಟ್ಟಂ ಬಳೆಗುಮುದನಾಲಿಸುವವೊಂದವನನುಸಿಕಂಬಡಿಸುವುದುಮಾ ಬೆಡಂಗಿಯರ್—

(ಸಾಂಗತ್ಯಂ)

ಆವ ಮಲದೋಂಟುವಮಾವ ತಾವರೆಗೊಳ : ಮಾವ ದೇಗುಲಮಾದೊಡಕ್ಕೆ ॥
ಭಾವಿಸಿಯುವನಿರ್ಪ ಬಳಿಗೊಂದು ನೆವದಿಂ । ದಾ ವೇಳೆಗಲ್ಲಿಗೆಯ್ದುವುದು ॥ ೭೦

ಏಹಬ್ಬವೆಸಗುವನೇವಿಜ್ಜೆಗಳ ಕಲ್ವ । ನೇಪಸಜಾತ್ರೆಗೆಯ್ದುವನು ॥
ಆಪರಿಗಳ ತಿಳಿದವನ ಗುಣಂಗಳ । ನೇಪೊಚ್ಚುನೋಡ್ದೆಣಿಸುವುದು ॥ ೭೧

ಬಗೆದು ನೇಹಿಗರೊಳು ಭಾವಿಸಿ ನೇಹವ ।. ಪಗೆವರೊಡನೆ ಪಗೆಗೊಂಡು ॥
ಬೆಗಡುಪತ್ತವನ ಬೇಸ್ತುಸುದ್ದಿಗೇಳುತ। ಸೊಗಸುವಾರ್ತೆಯೊಳು ಸೊರ್ಕುವುದು ॥ ೭೨

ಅವನ ಪೊನ್ನುಡಿಗಳೊಳವನ ಪುರುಳ್ಗಳೊ । ಳವನೈಸಿರಿಗಳಸಿತ್ತಿಯೊಳು ॥
ಅವನೊಳಗದವರೊಳವನಂತೆ ಮಮತೆಯು । ಸವಿಸಿಸಿ ಸಲಿಗೆದಾಳ್ದುವುದು ॥ ೭೩

ಆವನ ನೋಟದ ಸೊಬಗವನ ನುಡಿಯ ಸೊಗ । ಸವನನಡತೆಯುಂದವನು ॥
ಸವನಿಸಿ ಸವನಿಸಿ ಸಖಿಯರೊಡಂಬಡೆ । ನವನವಾನಂದವಡೆವುದು ॥ ೭೪

ತಡೆಯುದಂಗವಿಸುತೆ ತುಗೆಹಸಾವಕ್ಕೆ । ಪಡೆವುದು ಭಕ್ತಿಭಾವದೊಳು ॥
ಮುಡಿದೊರ್ವ ಕೆಲನಿಟ್ಟ ಪೊಲ್ಲಮಲ್ಲಿಗೆಗಳ । ಮುಡಿದೈದುವುದು ಮುಂಗಡೆಗೆ ॥ ೭೫

ಪಡದ ಪಾಟಗಳಿಂದ ಪಡೆವುದವನ ಕೈ । ವಿಡಿದ ಪೂಚೆಂಡ ಪೆರ್ಮೆಯೊಳೆ ।
ಮುಡಿಗೆ ಕಣ್ಗಳಿಗೊತ್ತಿ ಮುಂಡಾಡಿ ಮನೆಗುಯ್ದು। ಪೊಡಮಟ್ಟು ನಲಿದು ಪೂಜಿಪುದು ॥

ಅವನಂಕಮಾಲೆಯನಾದರದಿಂ ಕೇಳ್ವ । ದವರ್ಗೆ ಕುಡುವುದನುವಱಿತು ॥
ಅಪತುಮಂ ಕಲ್ವುದವರ ಪುರುಳ್ಗಳ । ವಿವರವ ತಿಳಿದು ಪಿಳ್ಗುವುದು ॥ ೭೮

ಮುಪ್ಪುರಿಗೊಂಡಿದೆ ಮೋಹವಿಜಾತಿಗೆ । ದೊಪ್ಪದೆಂದೊದರುವರೊಡನೆ ॥
ಅಪ್ಪುದಪ್ಪುದು ನನಗಿದಱಿಂದೈತಪ್ಪ । ತಪ್ಪೆಯೊಳ್ಪಂದೊಪ್ಪುವುದು ॥ ೭೯

ಆವನ ಸಂಗಾತಿಗಳನಿಬರುಮೊಂದೊಂದು । ವಿವರದೊಳನುವೇಲ್ಪಂತೆ ॥
ಅವರವರೊಡನುಚಿತಾನುವರ್ತನದಿಂ । ದವನ ಸಂಗತಿಗಂಗಯಿಪುದು ॥ ೮೦

ವ॥ ಎನೆ ಕೇಳ್ದು ಕಲಾಧರಂ ಕಂದರ್ಪನೊಡನೆ ಮುಂಪೊಡಿದೆರಡುಂ ಪ್ರಕರಣಂಗಳಂತೆ ಸರ್ವಸಾಧಾರಣಮಲ್ತಿದು ಮಹಾಪುರುಷನೊರ್ವನೊಲ್ಮೆಗೆ ಬಲ್ವಗೆಗಾರ್ತಿಯೆನಿಸಗುವ ಪಸಗೆಯ್ಮೆಯಾಗಿರ್ಕುಮೆಂಬುದುಂ ; ವಸಂತಕಂ—ಅಯಸ್ಯಾ ಸ್ಮೈತಿರ್, ಚಟುಲತರಘಟಿಚಕೋಟೀವಿಚೇಷ್ಟಿತಂಗಳಂ ಪೆಱತಪ್ಪ ಸೂಳೆವಾದದ ನಾಟ್ಪಾಡುಗಳೊಳ್ ಕೇಳ್ದು ಕಿವಿಗಳ್ ನಿಬ್ಬರಮುಬ್ಬೆಗಂಗೊಂಡಿರ್ಕುಂ. ಉಬ್ಬಸಂಗಳೆಮಂತಿಲ್ಲಿ ಸಂಭ್ರಮದಿಂ ವಿಜೃಂಭಿಸಿ ಪಾಡುವ ಗಂಭೀರತರರಂಭಾಸಂಭೋಗಸಂರಂಭಮಂ ಭಾವಿಸಿ ತುಂಬುಸಂತಸಂಗೊಂಬೆನೆಂಬುದುಮಾಬಿಂಬಾಧರೆಯರ್ ॥

(ಸಾಂಗತ್ಯಂ)

ನಿನ್ನ ಗುಣಂಗಳನೆಲೆಮಾನವನ ಕೂಡೆ । ಬಿನ್ನವಿಸಿದೆನೆಂದು ಪೇೞ್ದು ॥
ಚೆನ್ನೆಯು ನುಡಿಯೆಂಬ ಚಂದ್ರಿಕೆಗೆಳಸುವ । ಜೊನ್ನವಕ್ಕಿಗೆ ಜೋಡೆಸಪುದು ॥ ೩೧

ಈನಲ್ವಗಲಿನೊಳೇನೆಲೆವಾಡಮೊ । ಳೇನೆನದೊಳೆ ಪೇೞ್ದನೆಂಬ ॥
ಜೇನ ಸರಿಯು ಪೋಲ್ವ ಚೆಲ್ವ ಮಾತನು ಪರ । ಮಾನಂದದಿಂದೆ ಲಾಲಿಪುದು ॥ ೩೨

ಇನ್ನೇಕೆ ಸಂದೇಗಮಿಂದಿನ ಸಂಜೆಗೆ । ನಿನ್ನೆಡೆಗೆಯ್ದಪನೆಂಬ ॥
ತನ್ನದೂದವಿಗೆಂಡು ತಾನುಟ್ಟಿದಿತ್ತು ಪೂ । ಗಿನ್ನೊನ್ನೆಯೆಂದೆಬ್ಬಿಪುದು ॥ ೩೩

ಸೂಸಿ ಪನ್ನೀರ್ಗಳ ಸೊಗಸುದೂಪೆಯು ತೋಱಿ ಪಾಸಿ ಮೆಱೆದು ಮೂಱುಬೞಿಯು॥
ಪಸುಪೊತ್ತೀಱಿರಿಮೆಂದು ಕೆಳದಿಯರ । ಗಾಸಗೊಳಪುದು ಗಾವಸಿ ॥ ೩೪

ತೊಡರಿಸಿ ಪೊಸದಳಿರ್ದೊರಂಪೆದೋರಣಗಳ । ನಡೆಮಡಿಗಳನಳವಡಿಸಿ ॥
ಬಿಡುಗೆಲಸದ ಪೆಣ್ಗಳೆಡೆಯೂಪದಿರಿಮಿ । ನ್ನಡೆಯಿಮೆಂದವರನಟ್ಟುವುದು ॥ ೩೫

ಅಲ್ಲಿಗೆ ಬಂದನಲ್ಲಿಂದ ಮುಂದಕೆ ಬಂದ । ನಿಲ್ಲಿಗೆ ಬಂದನೆಂದೆಂಬ ॥
ಸೊಲ್ಲುಸೊಲ್ಲಿಗೆ ಮಿಗೆ ಸೊರ್ಕೇಱಿ ಮೊಱವಾಗಿ । ಲಲ್ಲಿಗೆಯ್ದುವುದಾದರದೆ ॥ ೩೬

ಬಾಗಿಲ ಪೊಕ್ಕೊಂದು ಪಜ್ಜೆಯಿಕ್ಕದ ಮುನ್ನ । ಮಾಗಳಂ ತವನನೆಲ್ಲಡಿಗೆ ॥
ಬೇಗದಿಂದೆಱಗಿ ಬೆಂಬಡದುಂಗುಟವ ಕ । ಣ್ಣಾಗಿಪುದನುರಕ್ತಿದಳೆದು ॥ ೩೭

ಪೊನ್ನ ತಳಿಗೆಯಲ್ಲಿ ಪನ್ನೀರ ಕರಗಮು । ಲ್ಲನ್ನ ಬೆಳ್ಮಡಿಯುಡೆ ಯಲ್ಲಿ ॥
ಸನ್ನದಗೆಯ್ಯೆಮೆಂದಲ್ಲಿ ಸಂದಣಿಪೆಳ । ಗನ್ನೆಯರನುಕಳಿಪುವುದು ॥ ೩೮

ಎಬ್ಬಿ ನಿಂದೆಣೆಗೊಂಡು ಪೊರೆ- ಕ್ಕೈಲಾಗಿತ್ತು | ತೋಳ್ತೋಳ್ಗಳ ತೊಡಕಿನೊಳು ||
ಬೊಬ್ಬಿ ಸೊಗಕೆ ಸುಯ್ದು ಸವೇಱುವಂತೆ ಪೊ | ದಬ್ಬಿ ಕದುಬುದಾಳ್ದಿವುದು ||೩೯

ಪಿಂದೇನನೋಂತೆನೇ ಬಿನ್ನಣವಾಂತೆನೇ | ಯಿಂದದೊಳೆಟ್ಟೆಯೊಂದಿದೆನೋ ||
ಅಂದಿಗೆ ಕುಬುಜೆಯನಾದರಿಸಿದ ಚೆಂದ | ವಿಂದಾದುದೆಂದು ನಲಿವುದು ||೪೦

ವ|| ಎನೆ ಕೇಳ್ದು ಕಲಾಧರಂ ಕಂದರ್ಪನೊಡನೆ— ಈಪ್ರೌಢಾಂಗನೆವೇಟದೊಳೆ ಸೊಗಸು ಬಟ್ಟುದಿಂ ಮನೋಪ್ರೋಕ್ತರಲ್ಲಿನ್ನೆಂತಕ್ಕುಮೆಂಬುದುಂ ; ವಸಂತಕನೀಗ್ರಹಪ್ರವೇಶಮುಹೂರ್ತಮೆ ಸುಮುಹೂರ್ತಮಕ್ಕೆಂದು ಪರಸಿ ನಗಿಸುವಿನಮಾಸೊಗಸುಗಾತಿಯರ್,

(ಸಾಂಗತ್ಯ)

ಪಲವು ತಪಸುಗೆಯ್ದು ಪಡೆದಿಷ್ಟದೇವರ | ನೊಲಿದು ಪೂಜಿಸುವೋಜೆಯೊಳ್ ||
ಅಲರಣ್ಪು ತೊಡವುಡೆಯನುಗೆಯ್ಮೆಯೊಳುೞ್ | ನಲಿನಲಿಯುತೆ ನಮಿಸುವುದು ||೪೧

ಅಲರ್ವಾಸುಮಂಚದೊಳವನಿರೆ ಕೆಲಸಂದು | ನೆಲದೊಳು ನಿಂದು ನಿಟ್ಟಿಸುತ ||
ತಲೆವಾಗಿ ನಸುನಾಣ್ದಳೆದೋರೆಸೋಟದ | ಮಲರ ಪೂವಲ ಮಸಗಿಪುದು ||೪೨

ಬರಸೆಳೆದವನೀಱೆ ಭಯಭಕ್ತಿಯಾಭಿನಯ | ವರಸಿಯೊಂದಿಸಿಸು ಪಿಂಬರಿದು ||
ಮರಳ್ದೆಬ್ಬಿವಿನವನೊಳಸರಿದಂತೆ ಸ್ಟಯ್ಯನೆ | ಸರಸದಿಂ ಪತ್ತಿಸಾರುವುದು ||೪೩

ಕೈಸೋಂಕಿನೊಳು ನಸುಕಳೆಸೊರ್ಕು ಸುೞಿದಂತೆ | ಮೆಯ್ಸೋಂಕಿನೊಳು ಮಲರ್ದಂತೆ ||
ಬಾಯ್ಸವಿಗೆಳಸಿ ಮುಂ ಬಾಯೆ ಬಾಯ್ತಾಂ ಕಲೆ | ತೈಸುಂ ಬಲೆಯ ಬೀಸುವುದು ||೪೪

ಒಡನೆ ಕೈಗಿರದಿರಲುಗುರ ಕೂರ್ಮೊನೆಗಾ | ದೊಡಮುೞ್ತುವಟ್ಟವೂಲೊಸೆದು ||
ಪಿಡಿದೀೞ್ದು ಕುಚಕುಂಭಬಿಂಬಾಧರದೊಳೊತ್ತಿ | ಕಡುಗಿಮುದ್ದಿಸಿ ಕರಗುವುದು||೪೫

ಪಣೆ ಕಣ್ಗಡೆ ಗಲ್ಲ ಬಾಯ್ದೆಱೆಗಳ ಪಾಲ | ತಣಿಯದ ಸವಿದು ಕಾತರಿಸಿ ||
ಅಣಿಮುತ್ತು ತನಿಮುತ್ತೆಣೆಮುತ್ತಿನೊಡನೆ ಸಂ | ದಣಿಮುತ್ತುವೆತ್ತು ತಣಿವುದು||೪೬

ಬೆರ್ಚಿ ಕೂರ್ಪಾಸದ ಬಸುಗೆ ಮುತ್ತಿನ ಸರ | ನುರ್ಚು ನೂಱಾಗಿ ತಾನುದಿರೆ ||
ಪೆರ್ಚಿ ಬಿಗುಹು ತಳ್ತು ಬಿಣ್ಮೊಲೆಗಳು ತ | ಟ್ಟುರ್ಚುವಂತವನನಪ್ಪುವುದು ||೪೭

ಬಿಗಿತಳ್ಕೆಗೊಳೆ ಬಿಗಿಬಿಗಿದಪ್ಪುವಿನಿಯನ | ಬಗೆಯ ಪಾಡಿಪ್ಪಿಸಲೆಂಬಂತೆ ||
ಅಗಿದಗಿದವನ ಸುಧಾಧರವನು ಪೀರ್ವ | ಸೊಗದೊಳು ಸೊರ್ಕಿದೋಱುವುದು ||೪೮

ಪಾಯ್ದೊಡನವನೊರ್ಮೆ ಪಲ್ಗೊನೆ ತಣಿವಂತೆ | ಬಾಯ್ದೆಱೆಗದುಕೆ ಬಲ್ಮೆಯೊಳು||
ಕಯ್ದೆಱೆರೊದಱುತ ಕಣ್ಬರ್ಬ ಪಲವಗೆ | ಗೆಯ್ದೆಳರ್ವದು ಲಲ್ಲೆಗರೆದು ||೪೯

ಕಡುಗಾಸಿಯೊಳು ತಟ್ಟಿಗೆ ಕೈಯು ಪೊಂಬಳೆಯೊತ್ತೆ | ಯುಡೆಯು ಚೆಂಪೊನ್ನೊಲ್ಲಗಳುಡಿಯೆ ||
ತೊಡೆತೋಳ್ಗಳನೆಡೆವಿಡದೆ ತೊಡರ್ ಕಡು | ದುಡುಕುಗೆಯ್ಮೆಗಳ ತೋಱುವುದು || ೫೦

ವ|| ಎನೆ ಕೇಳ್ದು ಕಲಾಧರಂ ಕಂದರ್ಪನೊಡನೆ ಈಪೊಸಗೆಯ್ಮೆವಾತು ಪೊಸತಾದುವು, ಬೞಿಯಿಂ ಸವಿಗೆಯ್ಮೆವಾತಂ ಸವಿನವೆಂಬಿನಮಾಕಂಬುಕಂಠಿಯರ್ ||

(ಸಾಂಗತ್ಯಂ)

ಎಳೆದು ಪಾಸಿಕೆಗೆಯ್ಮೆಗೆಳಸೆ ಸಾಯುಜ್ಯದಂತೆ | ತಱಿಸಿ ಸೆಣ್ಣನದನುವ ||
ಬೞಿಕವನೆಸಗುವ ಬಲ್ಮೆಗೆ ಬೞಿಸಂ | ದೊಳಸರಿದೊಡಲನೊಪ್ಪಿಪುದು || ೫೧

ಕಡುಗಿ ಗಂಡಂಗದ ಕಾತರದೊಳು ಕಡು | ಮಿಡುಕುವಿಸಿಯನ ಮೆಯ್ಸಿರಿಯಾ ||
ಬಿಡದೆ ಸಿಟ್ಟಿಸಿ ಸೀಡು ಪೊಱಗುವಡುವನ್ನೋ | ಲೊಡನುಬ್ಬೆಗವಳವಿಡುವುದು || ೫೨

ಬಡಲಱಿಯದೆ ನಲಿದುರವಣಿಪೆಣ್ಣಿನ | ಪಡಗಡೆವಿಡಿದಿರ್ಪೊಡನೆ ||
ಬಿಡದೆ ಬಾಯ್ದೆಱೆಜೇನ ಪೀರ್ದುಪೀರ್ದಾಸೊಕ್ಕು | ವಡೆದಂತೆ ಸಡಿಲಗೊಡುವುದು ||

ಮೆಲ್ಲುಲರಲಪದಿಂ ಮೆಲ್ಲನೆ ಮಿಸುಕುವ | ಫುಲ್ಲಸರೋಜವ ಪೋಲ್ವ |
ನಲ್ಲನ ಮೊಗದೊಳು ನಲ್ದುಂಬಿಗೆಣೆಗೊಂಬ | ಕೆಲ್ಲ ನೋಟವ ಕೀಲಿಪುದು || ೫೪

ನಿಡುಗಣ್ಗಳಾಟದ ನೆಱೆಸೊಗಸಿನೊಳೊರ್ಮೆ | ಕುಡುವುರ್ವ ಕುಣಿಹದೊಳೊರ್ಮೆ ||
ಎಡೆಯೆಡೆ ಕೂರುಗುರೆಸಕಗಳಿಂದೊರ್ಮೆ | ಯೊಡನುತ್ಸಹವೊಂದವಿಪುದು || ೫೫

ಬಿಗಿಮಾತು ಮೆಲ್ಮಾತು ನಗೆಮಾತು ನಲ್ಮಾತು | ದುಗಮಾತು ದುರುಸುಮಾತುಗಳ ||
ಸೊಗಸುಮಾತರಮಾತು ಸೊಗಮಾತುಗಳಿಂದ | ಸೊಗಸ ಕಿವಿಗೆ ಸೂಸುವುದು || ೫೬

ತಡೆದು ನಿಲಿಪ ಸವಿದಾಳ್ದರೆ ಪೂಣಿಪ | ಕಡುಪುವಡಿಪ ಕೈಮೆಗೊಳಿಪ ||
ಪೆಡಗಿನ ಪುರುಳ್ಗೊಂಡ ಬಿಂಕವಾತುಗಳ ಸು | ಲ್ಪಿಡಿದ ಸರದೆ ಬಳೆಯಿಪುದು || ೫೭

ನಗುವುದು ನಲಿವುದು ನಸುಲಲ್ಲೆಗರೆವುದು | ಬೆಗಡುಗೊಂಬುದು ಪೆರ್ಚುವುದು ||
ಬಿಗಿವಿಡಿವುದು ಮುಯ್ಯೆ ಪೆದಱಿಸುವುದು ಕೂಡೆ | ಬಗೆಬಗೆ ಬನ್ನಬಡುವುದು || ೫೮

ಮಿಡುಕಿನ ಗೆಯ್ಮೆಗೆ ಮೆಚ್ಚುತೆ ಮಿತಿಮೀಱಿ | ಪೆಡಗುಟ್ಟುತ ಪೆರ್ಚಳಿಸುತ ||
ಒಡನೆ ತೋಳ್ತೊಡೆಗಳ ತೊಡಕ ತೊಡಿಸಿ ಬಿಗಿ | ವಿಡಿದು ಕಾಡುತ ಬಿನದಿಪುದು || ೫೯

ಬಿಡದುರವಣಿಸುವ ಬಿಱುಬಿನೊಳಿಸಿಯನ | ಮಿಡುಕ ಸೈರಿಸದೆ ಮೇಲ್ಮೆಯೊಳು ||
ಪಡಿಬರಿಸುತ ಸೂಱೆವಡುವಿಡಿದು ಪಾ | ಯ್ದೊಡನೆ ಪಲ್ಲಟಕುಜ್ಜುಗಿಪುದು || ೬೦

ವ॥ ಎನೆ ಕೇಳ್ದು ಕಲಾಧರಂ ಕಂದರ್ಪನೊಡನೆ—ಈಗಳ್ಗಳ್ ಪಾಡುವ ಶೃಂಗಾರದಶಪದಿಗಳಂ ಬಿಡಲಾಱದೆ ತೊಡರ್ದೆವೆಮ್ಮ ಬಗೆಯಂತೀಸವಿಗೆಯ್ಮೆಯ ದಶಪದಿಯುಂ ಮೇಲ್ಗೆಯ್ಮೆಯ ದಶಪದಿಯುಂ ತೊಡಂಕಿದುದೆಂಬುದುಮಾ ಬಿಂಕಗಾರ್ತಿಯರ್ ॥

(ಸಾಂಗತ್ಯಂ)

ಬಿಟ್ಟಲಿದೆ ಸಂಕು ಕೇಳ್ದುಡು ನೋಡೆನ್ನೊಂದು | ಚಳಕವನೆಂದು ಜಱಿಯುತ ॥
ತೊಳಗಿ ಮುಂಗಾರೊಳು ತೊನೆವಳವಿಂಚಿನೆ | ಲಳಿವುಸಗುವುದು ಲಾಘವದಿ ॥ ೬೧

ಮುನ್ನವನೆಸಗಿದ ಮುದ್ದುಗೆಯ್ಮೆಯನೆಲ್ಲ | ತನ್ನಂತರಂಗಕ್ಕೆ ತಂದು ॥
ಅನ್ನಗವಲ್ಲಿ ಕಲ್ಪಾಂತಪ್ರಲಂದೊಂ | ದನ್ನೆನೆನೆಸೆದನುವಿಪ್ಪುದು ॥ ೬೨

ಬಿಗಿದ ತುಂಬು ಗಂಟುಬಿಚ್ಚೆ ಂಗಿಯ ಕ | ಮ್ಮಗುಳ್ಗಳ ಸರಿ ಮೋಹರಿಸೆ ॥
ತೆಗೆ ಬಗೆಯಿಂದ ಸುಯ್ಲ್ಗಳೊಳ್ ನಸು ಜವು | ರೊಗೆಯ ಲೀಲೆಯನುಣ್ಮುವುದು ॥

ನುಣ್ಗದಪಿನೊಳು ಪೊನ್ನೇಲೆ ಡಾಸಿಸೆ ನಿಡು | ಗಣ್ಗದಗದಿಸಿ ಕಾತರಿಸೆ ॥
ಬಿಣ್ಗೊಂಡ ಮೊಲೆ ನಸು ಬಿಡುರೆ ನೋಳ್ಪನಿಯಂಗೆ | ಪಣ್ಗೊಳಿಸುವುದು ಭಾಗ್ಯವನು ॥

ಕರ್ದು ಕಿಕರ್ದು ಕಿಯುಮರ್ದುಮರ್ದು ಬಾಯ್ದೆಱೆಯೊಳ | ಮರ್ದನೀಂಟ ಮದವೇಱದಂತೆ ॥
ಎರ್ದವಲಗೆಯ ನಿಱದಱದು ಕೂರ್ಮೆಲೆಗಳಂ | ಬರ್ದಲಸೊಗವ ಬಳೆಯಿಪ್ಪುದು ॥ ೬೫

ಕಳನೇಱ ಮಿಱವ ಕಾಪ ವಜೀರನ | ರಳಿಪಿಪ ಬಾಳ ಚಳಕವ ॥
ತಳೆದು ಪೊಳೆದು ಕಾದಲನ ಕಣ್ಗಳ ತಳ | ವೆಳಗುಗೊಳಿಸಿ ಪೇರ್ಚುವುದು ॥ ೬೬

ವೀರ ನೀನಹುದೆನ್ನ ಬೀರ ಬೇಱದು ಪೆಱ | ಸಾರದಿರೆಂದೆಟ್ಟಱಿಸಿ ॥
ಆರಿ ಬೊಬ್ಬಿಱವಪ್ರಾಲಾರುಬಟೆಯ ತೋಱ | ವೀರಾಯತವೆಸಗುವುದು ॥ ೬೭

ಮೊಗದೊಳು ಮೊಗವಿಟ್ಟು ಮುದ್ದಿಸಿ ಮುದ್ದಿಸಿ | ಬಿಗಿದು ಬಿಗಿದು ತಳ್ಕವಿಸುತ ॥
ಬಗುವಿ ಗೇಯುರವಣೆಗುಬ್ಬರಿಸುವ ಸುಯ್ಯ | ತೆಗೆ ಬಗೆಯೊಳು ತಿವರಿಪ್ಪುದು ॥ ೬೮

ಪರಿವಿಡಿಯಿಂದಿಂತು ಪಲವು ಗೆಯ್ಮೆಯ ತೋಱ | ಪರವಶತೆಯ ಪಡೆದಂತೆ ॥
ಅರೆಗಣ್ಮುಚ್ಚುವುಪರವೆಸರ್ಗರೆವುದು | ನೆರೆಪ್ರವುದಿಂಪಿನ ನೆಳೆಯಾ ॥ ೬೯

ಪಿರಿದು ಬವಣೆವಟ್ಟು ಕರಗಿ ಕಾತರಗೊಂ | ಡಿರದೆ ಪೆಂಡೇಳ್ದು ದಿಟ್ಟಯೊಳು ॥
ಹರವಸವಡೆದಂತೆ ಹರಣದೊಡೆಯನವೇ | ರುರದೊಳೊಱಗಿ ಸುಖಿಸುವುದು ॥ ೭೦

ವ॥ ಎನೆ ಕೇಳ್ದು ವಸಂತಕಂ—ಈಮೋಲ್ಗೆಯ್ಮೆವಾಡಂ ಕೇಳ್ದುಮ್ಮಹದೊಳ್ ಗಸ್ಮನೆ ಪೂಪುದುಚಿತಮಿನ್ನಿವರ್ ಪಾಡುವ ಬಱಿಬಿನ್ನಣಿಯು ಹನ್ನಸವಾತುಗಳನನ್ನೆವರವುನ್ನರೆನಿಸಿ ಕೇಳ್ವೆಮೆಂಬುದುಂ; ಕಲಾಧರಂ—ಎಲೆ ವಸಂತಕ ಕೇಳಾಸೂಳೆಬೊಜಗರ್ ಮೋಲ್ಗೆಯ್ಮೆಗಳದು ಮೆಲ್ಲಗೆಪಡೆದು ಮುಱುಗೆಯ್ಮೆವರೆಗಂ ಬಿನದದೊಳ್ ಪ್ರೊಬ್ತುಗಳೆವಂತಾವುಂ ಮುಱುಗೆಯ್ಮೆವಾಡಂ ತೊಡಗುವನ್ನೆಗಮುವರನ್ನರೆನಿಸಿ ಕೇಳ್ವೆಮೆಂಬುದುಂ; ಆಅಂಬುಜಾಂಬಕಿಯರ್ ॥

(ಸಾಂಗತ್ಯಂ)

ಬಱಿಕವನೊಡನೆ ಮೆಲ್ಲಾಸಿನೊಳಿರ್ದು ಬಾ । ಯ್ದೊಳಿಸಿ ಕಪ್ಪುರಗವಳವನು ॥
ತಳೆದು ಬಿಜ್ಜಣಿಗೆಯ ತಾನೆ ಬೀಸುತ ತಣ್ಪು । ಗೊಳಿಪುದು ಚಮರ್ವನಿಗಳನು ॥ ೨೦

ವ॥ ಎನೆ ಕೇಳ್ದು ವಸಂತಕಂ — ಈವಪ್ಪಪದಿಯುಂ ತೊಡಗುವದರ್ಕೆ ಮುನ್ನಂ ಬಱಿಕ್ಕೆವರ್ಗರುವಮಾಸೊಗನಿದ್ದೆದಿಳದೆಬ್ದು ಪೆಱಸಾರ್ವು, ಪಸನಾಗಿ ಬಂದು ಪೊಸವಾಸಿನೊಳ್ಕುಳ್ಳಿರ್ದಂಬಿನಿತುಂ ವಚನವುಂ ಪತ್ತಿಸಲ್ವೇೞ್ವುದೆಂದು ನಗಿಸುವಿನವಮಾಬಿನದಗಾತ್ರಿಯರ್ ॥

(ಸಾಂಗತ್ಯಂ)

ಬಂದೆಲಗ ಗೆಯನೊಲ್ದು ಕೈಯೊಳಗೀವು । ದೊಂದನಿಡುವುದಿಂದಾಟಗೆ ॥
ಬಂದೊಂದನರೆಗಡಿದೊಲವನಾರ್ಪುದು ಬಾ । ಯೊಂದಿರೆ ಬಾಯೊಳೂಡುವುಗು ॥ ೨೧

ಆವನ ಬಾಯೊಳಗರೆಸವಿಪ ವೀಳೆಯುಪೊಂದು । ಸವಿಯುನೆಳಸಿ ಸಂತಸದೊಳು ॥
ಕವಿಕವಿದೊಡನಂಗವಿಸಿ ಮೊಗಕೆ... । ಕವರ್ದ ಸವಿದು ಗರ್ವಿಪುದು ॥ ೨೨

ಆವನ ಮೆಯ್ಸಿರಿಗಳಗಚ್ಚರಿವಡುತ ಕೂ । ರ್ತವನ ನುಡಿಯ ಲಾಲಿಸುತ ॥
ಆವನ ಪುರುಳ ತಿಳಿದಾದರದಿಂದುತ್ತ । ರವನೀವುದು ರಹಸ್ಯವೆನಿಸಿ ॥ ೨೩

ಚೆಲ್ವರೆೞಿಯ ಕೇಳು ಚಾತೀತ್ರಿಬಗೆಯೊಳು । ನಲ್ವಂದವೆನಿತದನಱುಹು ॥
ಕಲ್ವನೆನ್ನೊಳು ಮಱೆಯ್ಯದೆ ಕಲಿಸೆಂದು । ಕಾಲ್ವಿಡಿದವನ ಕಾಡುವುದು ॥ ೨೪

ಎಳಸಿಯೆ ಲೞ್ವನಮೊಬ್ದು ತಳರೆ ತಳರ್ದು ಕೂಡೆ । ಕುಳಿರೆ ಕುಳಿತು ಬೇಸಗೆಳೆದು ॥
ಬಱಿಕ ಪಾಸಿಕೆಗೊಳೆ ಪಕ್ಕದಳ್ಕೆಗೆ ಸಂದು । ನೆಱಿಲವೊಲವನ ನೆಮ್ಮುವುದು ॥ ೨೫

ತೋಳ ಸೋಂಕಿಗೆ ತೋಳ್ತೊಡೆಯ ಸೋಂಕಿಗೆ ತೊಡೆ । ಸೂೞಾಡೆ ಸೊಗದ ಸುಗ್ಗಿಯೊಳು ॥
ವೇಸಿಯಿರ್ವರ ಮೆಯ್ಯೊಂದೆನೆ ಸರ । ಸಾಳಾಪವೆರೆವುದಱ್ತಿಯೊಳು ॥ ೨೬

ಮೊಗಸರಿಸಕೆ ಮೊಗಮೋರೆಯಾಗಿರೆ ಮುಂ | ದೆಗೆದು ಮಾನಿಸು ಮುದ್ದೆಸಗಿ ||
ಬಿಗಿದ ತಳ್ಕೆಯ ಬಿಗಿಪನಿಸು ಸಡಿಲೆ ಪ್ರಸಿ | ಜಗಳವೆಸಗಿ ಜಕ್ಕುಲಿಪ್ರುದು || ೭೮

ನಸುನಿದ್ದೆಯೊಳು ಸಲ್ವ ನಲ್ಲನಿರವ ತಿಳಿ | ದೊಸೆದು ನಿಟ್ಟುಸೆಯೊಳ್ಮೊಗವ ||
ಮಸಗಿ ಮುದ್ದಿಸಿ ಮುದ್ದಿಸಿ ಮುಂಡಾಡಿ ಮೋ | ಹಿಸಿದಂತಪ್ರೋಲೆಚ್ಚಱಿಪ್ಪುದು || ೭೯

ಆಮಾಗ್ಗುಲಪ್ಪಿನಮರನಿದ್ದೆಯೊಳಮೆ | ಪ್ರೇಮೆಯ್ಗೆತಗೆತಗೆದೀಱ್ದು ||
ಮಾಮಱುಕದೊಳು ಮೆಯ್ಮೆಯ್ ಬೆಸುಗೊಳೆ ಭುಜ| ದಾಮದಿಂ ಬಿಗಿದು ತಳ್ಕಿಪ್ಪುದು ||

ಕೆಂಜುಟ್ಟುವಕ್ಕಿಯ ಕೆಂಕರಿಕೆಗೆ ಪೆರ್ಚಿ | ತೇಂ ಜಾಱುವಪ್ಪುದಿರುಳೆನುತ ||
ಮುಂಜಾವಗೆಯ್ಮೆಗೆ ಮೋಹರಿಸುತ ಮಂಜು | ಮಂಜುರವವ ಮಸಗುವುದು || ೮೧

ವ|| ಎಂದಾಬಣ್ಣವಾಡಂ ಪಾಡಿಯೊಡನೆ ಮತ್ತಂ,

ಇನಿಯನ ಸುದ್ದಿಯಂ ನುಡಿವಳೊಳ್ಗೆಳಗೆಯ್ಮೆಯೊಳುಂಬಮೆಂಬಿನಂ |
ತೊನೆಯುತೆ ಕೂರ್ತು ಕೇಳುತೆಡೆಯೊಳ್ ನುಡಿವಬ್ಬೆಯನೊಬ್ಬೆಯೂಟದೊಳ್||
ಮನಮಿಡದೇಕಚಿತ್ತದೊಳೆ ಕೇಳುತೆ ಕೇಳುತೆ ಪೇೞ್ದೊಳೞ್ದು ಪೋ |
ಪಿನಮನುವೇೞ್ದು ನಂಬುಗೆಯ ಕೊಂಬುದು ನಿಬ್ಬರದಿಂದೆ ಬರ್ಪವೋಲ್ ||

ವ|| ಎನೆ ; ಕೇಳ್ದು ಕಲಾಧರಂ ಕೌತುಕದಿಂ ಕಂದರ್ಪನೊಡನೀಪದ್ಯಮುಂ ಪಾಡಿವ ಕಿವಿವೇೞ್ವ ದಶಪದಿಯ ತೊಕದಂತಿರ್ಪುದಿನ್ನುಮೇೞುಂ ದಶಪದಿಗಳ್ಗೇೞುಂ ಪದ್ಯಂಗಳುಂ ಪಾಡಿದೊಡೆ ಸಂಗ್ರಹದಿಂ ವೈಶಿಕಮುಂ ತಿಳಿವುವರ್ಕೆ ಲೇಸೆಂಬುದುಮವರ್–

ಪೊಱವಳೆದಟ್ಟಿ ಬಿತ್ತರಿಸೆ ಮಾಡಮನೇಱಿ ಕಡಂಗಿ ಗಾಡಿಯಂ |
ಮೆಱೆವುದುನೋೞ್ಪನಂ ಬೆಜಗನಾಗಳೆ ನುಣ್ಮೊಗಮಿಾಸು ತೋಱಿ ಮೆ ||
ಯ್ಮಱಸುತೆ ಕೂರ್ಮೆಯಿರ್ಪಡಿಸೆ ಕೊಂಕುವ ಕೊಂಕುವ ಕೋರೆನೋಟ
ದಿಂ | ನೆಱೆಯಿಪುದೊಳ್ಪನುಪ್ಪಳದ ತಾವರೆಯೋರಣದೋರಣಂಗಳಂ ||೧೫೯

ಪೆಡಮೆಡಸಾರ್ದು ಸಾರ್ದವನ ನೇಹಿಗರೊಳ್ ನೆರೆ ನೇಹಮಾಂತು ಬೀ |
ಱುಡೆ ಸವಿಮೀಳೆಯಂ ತಳಗೆಯೋಗರಮಾಂತಲರ್*ವಾಸಿಗಂಗಳಂ ||
ಪಡೆವುದಮಂ ನೆಗೞ್ದು ನುಡಿನೋಟಗಳಂ ಬಗೆಗೊಂಡ ಭಾವದಿಂ |

ದೊಡರಿಸಿ ಮಿಾಱಿ ಪಿಳ್ಗುವುದು ಕೆಂಕನೆ ಪೊಡುವುದಂಕಮಾಲೆಯಂ ||೧೬೦

ಬಂದಪನೀಗಳೆಂದೊರೆದ ದೂದವಿಗುಟ್ಟುದನಿತ್ತು ಬೇಗದಿಂ |
ಚಂದನದಣ್ಪು ಕಮ್ಮಲರ ಬಾಸಿಗವೊಳ್ಪಸೆಗೆಯ್ಮೆಯೊಳ್ಕಗಂ ||
ಸಂದಣಿಗೊಂಬಿನಂ ಬೆಸಸಿ ಬಾಲೆಯುರಂ ತಲೆವಾಗಿಲಲ್ಲಿ ತಾಂ |
ನಿಂದೊಡನೊಂದಿ ಕಂಡು ಕೊನರಿಪ್ಪುದು ಕೂರ್ತುಚಿತೋಪಚಾರವಂ ||

ಪುಸಿನಸುನಾಣ್ಪುಗರ್ವಡೆಯೆ ಮೊಯ್ಮುಱಿದೆಯ್ದಿರದೋರೆನೋಟವಂ|
ಮುಸಗಿಸಿ ಕಾಪಲಂ ಕವಿದು ಮೇಲ್ವರಿವಂತಿರೆಯುರ್ಬುವಟ್ಟು ತಾ ||
ನೆ ಸರಭಸಂ ಕುಚಕ್ಕನಿರಿದುತ್ಕುಚದಿಂ ಬಿಗಿತಳ್ಕಗೆಯ್ದೊಡಲ್ |
ಬಸವೞಿದಂತಿರೊಪ್ಪಿಪುದು ತೊಪ್ಪನೆ ಲೆಪ್ಪದ ಬೊಂಬೆಯೆಂಬಿನಂ ||೧೬೧

ಬಡನೋಪಂ ಗೆಯ್ವ ನಲ್ಗೆಯ್ದ ಸೊಗಸುಗಳಂ ಸೂರ್ಕುಮಿಕ್ಕಂತೆ ಕಣ್ಗಿ | ಟ್ಟೆಡೆಯೊಳ್ ಪಟ್ಟಾಡಿ ನಟ್ಟಾಲಿಯುನವನ ಮುಖಾಂಭೋಜದೊಳ್ ತುಂಬುಗೆಯ್ದು || ತೊಡೆ ಮಾಣೆಂಬೀತೆಱಂಬೆತ್ತರೆನುಡಿಗಳನಾವೃತ್ತಿಗೆಯ್ದು ತ್ತೆ ದೈನ್ಯಂ | ಬಡೆದೆಟ್ಟುತ್ತೇಕೆ ನೀಂ ಪಿಂದೆಗೆದಪೆ ಕಡುಗೆಂದುಮ್ಮಹಂದೋ ರ್ಪುದೊಳ್ಪಂ ||೧೬೨

ತಡೆ ನಿಲ್ಮಾಣ್ಮಾಣ್ಬುಅಲ್ದೈ ತಳವಡು ಮಿಡುಕಿನ್ನೇಕೆ ಸಾರ್ ನಿನ್ನ ಚಿತ್ತಂ||
ಬಡೆವೊಳ್ಪಂ ನೋಡು ನೋಡೆಂದುರವಣಿಸಿ ರಸಾವೇಶದಿಂ ಕಾರ ಮಿಂಚಂ ||
ಕಡೆಗಣ್ಮುತ್ತುಂ ಕೊಳರ್ವಕ್ಕಿಯ ಕಳರವದಾಕೊಂಚೆಯೊಂದಿಂಚರಂ ಭೋ|
ರ್ಗುಡಿಪನ್ನಂ ಪೊಂಗಿ ಮೇಲ್ಸಿಂಗರದ ಕುಣಿಹದೊಳ್ ಕೊಳ್ವುದೊಂದೊಂದು ಕೋಪಂ ||೧೬೪

ಬಂದೊಂದುಂ ತೋಳ್ಗಳೋರೊರ್ವರ ಮುಲಗಿದ ನುಣ್ಮಾಗ್ಗುಲಿಂ ಕೀಲ್ಗೊ ಪೊಯ್ದುಂ | ದೊಂದೊಂದುಂ ಮೇಗಣಿಂ ಬೆಂಬಿಡೆ ತೊಡೆತೊಡೆಗಳ್ ಪತ್ತಿ ಪೆರ್ಬಾವುಗಳ್ ತ || ಳ್ತುಂದಂ ಮೆಯ್ದೋಱಿ ಮುಂಬಾಯ್ದೆರ್ಡೆಯೆರ್ಡೆಯೊರ

ಪಿಂ ಮೆಯ್ಯೆರೞ್ಚಿಟ್ಟಿರಲ್ಕಾ । ನೆಂದಾಲಾಪಂಗಳಿಂದಂ ನಲಿವುದರಿಯದಂತೊಳ್ಪನಿಂ ಪ್ರೋದ ಪ್ರೊತ್ತಂ ॥೧೬೫॥

ವ॥ ಎನೆ; ಕೇಳ್ದು ವಸಂತಕಂ ಸಂತಸದೊಳ್ ಮುಂಮುಮರಿದು, ಅಕಟ ಕಟಯೆಂದನಿತರೊಳ್ ಬೆರ್ಚಿದಂತಿರ್ಕೈಯೊಳ್ ತನ್ನ ಬಾಯಂ ಮುಚ್ಚಿ ಪಿಂದೆಗೆವಿನಂ; ಬಿನದದೊಳ್ ಕಲಾಧರಂ—ಎಲೆ ವಸಂತಕ, ಇದಾವಂದದ ನಾಟಕದ ನಾಂದಿಯೆನೆ; ಅವನಾನೆನ್ನ ಮಂದಮತಿಯೊಳಿಂದು ದೇಸಿಗರ ಪರಿಹಾಸಂಗೆಯ್ಯಲೆಳಸಿದೆನೆಂಬುದುಂ; ಕಂದರ್ಪಂ—ಅಂತಾದೊಡಂ ತಪ್ಪಾವುದು, " ಗುರುಣಾಪಿ ಸಮಂ ಹಾಸ್ಯಂ ಕರ್ತವ್ಯಂ ಕುಟಿಲಂ ವಿನಾ " ಎಂಬೀನೀತಿಯಂ ಕವಡಿಲ್ಲದೆ ಪಿರಿಯರೊಳಂ ಪರಿಹಾಸಂಗೆಯುವರ್ಪುದೆಂಬುದುಂ; ದರ್ಪಣಂ ವಸಂತಕಂ —

ತೋಳನೆ ತೊಟ್ಟಲ್ಗೊಂಡವ ।
ರೇಳಿಪ ಗೆಯ್ತಾದೆ ಪೊದಟ್ಟು ಬಳೆದೆನ್ನಿದಿರೀ ॥
ಸೂಳೆಯರ ಸುಯ್ಯ ಸೋಂಕದ ।
ಪಾಳಯ ಕಬ್ಬಿಗರದೆಂತೊ ಕಂಡಪರಕಟಾ! ॥೧೬೬

ವ॥ ಅದರ್ಕೆ ಕಲಾಧರಂ—

ಮಾರಾಯರ್ ನಿಜಚಾರರಿ ।
ನಾರಯ್ದೀಜಗದ ಜನದ ಸಾಂತರ್ಬಾಹ್ಯಾ ॥
ಚಾರಮುೞಿವಂತೆ ಶಾಸ್ತ್ರಾವಿ ।
ಚಾರದಿನಱಿದಿರ್ಪರಿವರುಮೀನಿದು ತಪ್ಪೇ ॥೧೬೭

ವ॥ ಅದರ್ಕೆ ವಸಂತಕಂ—ಅವರದು ತಪ್ಪಲ್ತು, ಎನ್ನದೆ ತಪ್ಪೆನುತ್ತೊಯ್ಯನೆ ತನ್ನ ಕೆನ್ನೆಯಂ ತಟ್ಟಿಕೊಳುತ್ತೆ,

ರಾಯರ ರಾಯರ ಕಬ್ಬಿಗ ।
ರಾಯುಮನಾರಱಿವರದಱಿನಾರಯ್ಯದದಂ ॥

ಬಾಯುಂ ಬಿರ್ಚದೆ ಪೇೞ್ದಪ್ರೊ ।
ಲಾಯೆಸಕವುನೊಳ್ಪನೆಸಗಿ ನೆಗೞ್ದರ್ ಧೂರ್ತರ್ ॥೧೬೮

ವ॥ ಎಂಬುದುಂ ; ವೇನದೊಳ್ ಮುಂನಳರುತ್ತಿಪೊಡಿವಾಕೆಗಳ್ಗೆ ಪಾವುಡಮುಂ ಕುಡುವೆನೆಂದು ಪೊದೆದ ಬಂಗಾರಂಬಿಯುತ್ತರಿಗೆಯುಂ ಮುಡಿಕೆಗೆಯ್ವಿನಂ ; ಕಲಾಧರಂ—ಎಲೆ ಮುನ್ನೆಲೆನನೆವೊಳ್ ಮುನಿಗಳ್ ಕುಶಲವರ್ಗೆ ಕೋವಣವಿತ್ತಂತೀಗಳ್ ನೀಂ ಕುಡುವ ಕಪ್ಪಡವಾವುದದಿಂದೀಕೆಗಳುಮೀಕವೇಳೆಯೊಳ್ಬರ್ದುಂಕಿದಪರೆಂಬುದುಮಿಂ ಹೂಂಕರಿಸಿ ಕೆಂಕನದೊಳ್ ಮೂಂಕುತೊಯ್ಯಾರದೊಳ್—ಅಯ್ಯ ನೀಂ ರಾಯರುಡೆದೊಡವ್ರಗಳೊಳ್ ॥

ಪಿಂತೆಂದುಂ ಸಬ್ಬವನುಡಿ ।
ಗೊಂತರೆ ವೇನೆಯಾಂತನಲ್ತು ಸಂತಸಮಿರ್ದಂ ॥
ಚಿಂತಿಪನಗಱಿಂತಿರ್ದು ವ ।
ಸಂತಕನುಂ ತಿಳಿಯುದಾಡಿದಂ ತವಿಪೆಸಿಗಂ ॥೧೬೯

ವ॥ ಎಂದು ವಸಂತಕನಂ ಕರೆದು— ಈಚಿಕ್ಕ್ವಿಯರ್ಗೆ ನಲ್ಪಾವುಡವುಂ ಕುಡವೇೞ್ಪುದದಱಿಂ ಪ್ರಾಗಿರ್ಪ ಕೈಬೊಕ್ಕಸದ ಚಿಕ್ಕವನಿಂ ತಂದದಂ ರಾಯಗೆಳೆಯರೆನಗಿತ್ತರೆಂದೊರೆದು ಕುಡುವುದೆಂದು ಕಳುಪೆಯುವಂ ಮುಡಿಸಿದುತ್ತರೀಯುಮುಂ ಬಿರ್ಚಿ ಮೊಗಗೆಗ್ಗೆ ಬಿಸುತ್ತೆನಗುತ್ತರಿಗೆ ವಿಕ್ಕ್ಯದೆಂದು ಪೆರ್ಗಳಿಸಿ ಪೊಱಗಣ್ಗೆ ಪ್ರೊಪಿನಂ ; ಕಂದರ್ಪಂ ಸ್ಮೃತಿರ್ಪ ಕಲಾಧರನ ಮನಸ್ಸಮಾಧಾನಕ್ಕೆ ಪೆರ್ಗಳಂಗೊಂಡು ಮನದೊಳ್,

ಮುನ್ನಮೆ ಮುನ್ನಮೆನ್ನಳವೆಯೊಳ್ಗೆಳೆಯಾನವನೆನ್ನ ಮೆಯ್ಯ್ಮೆಚಿಲ್ ।
ಬಿನ್ನಣದಿನ್ನವಂ ನವಮೆನಲ್ ನೆಗೞ್ದಂ ಪೆರೆನ್ನರಪ್ಪರಂ ॥
ಮನ್ನಿಸನೆನ್ನನೇ ಪೊಗೞ್ವನೆನ್ನಡಿಗೆಯ್ಮೆಯೊಳೆನ್ನೆಗಂ ಕರಂ ।
ನನ್ನಿಗನೆನ್ನನೇಂ ತೊನೆವನೆನ್ನನೆ ಬೇಡುವನೆನ್ನೊಳಾಡುವಂ ॥೧೭೦

ವ॥ ಎಂದಾಳೋಚಿಪ ಕಂದರ್ಪನಂ ತನ್ನೊಳಚ್ಚರ್ತನೆಂದೇ ಬಗೆದು ಸಂತಸದಿಂ ಕಲಾಧರಂ ಮನದೊಳ್,

ಬಣ್ಣಿಪರಾರಿವಂ ತನಗೆ ತಾನೆ ತನತ್ತು ತನೂತನೂಜರೊಳ್ ।
ಪಣ್ಣಿವ ನೇಹಮುಣ್ಮಿ ಪೊರೆಯುತ್ತಿನಿಸುಂ ಪೊರೆದೋಱದಂತ ವೋಲ್ ॥
ಕಣ್ಣನೆ ಕಾಪುಗೆಯ್ದು ಕದಿಂಜರೆಗೆಂಬುಗಳೊಂಪದಂತಿರಿ ।
ಬಣ್ಣದೆ ಬಣ್ಣಪೇಱಸುವನಚ್ಚಱದೆಂತುಟೊ ಆಚ್ಚಯೆಂತುಟೋ ॥೧೩೧

ವ॥ ಎಂದಾನಂದಂಬಡುವನಿತಱೊಳ್ ವಸಂತಕನಾಪಾವುಡಮುಂ ಬೇಗದೊಳ್ ತಂದಾಬಾಗಿಲ ಮುಂದೆ ನಿಂದು, ಕೂಗಿಡುತ್ತೆ—ಎಲೆಲೆ ಪಾಡುವ ಗಾಡಿಕಾರ್ತಿಯರಿರಾ ಬೇಟಪ್ಪದಂ ಬೇಡಿವರಾಂ ಬಂದೆವು ಬಂದೆವೆಂಬುದುಮವರ್ ಘುಲೆನೆ ಪಾಡುವುದನುಱಿದು—ಅಯ್ಯಾ ಬನ್ನಿಂ ಬನ್ನಿಂ ನೀಮಾರೆಂಬುದುಮಿವಂ ಬಿಗಿತೆಪೊಳ್—ಇದೆ ರಾಯರಾಯಬಿಜ್ಜಳಸಬ್ಬವಕಾರರ್ಬಂದೆವೆಂಬುದುಂ; ಕಲಾಧರಂ ಕಂದರ್ಪನೊಡನೆ—ಗಜದಂತಪರೀಕ್ಷೆಗೆಯ್ವಂತಿವನೆಮ್ಮ ಮನೊವರ್ಗ ಬೆರ್ಚಿಸಲಿಚ್ಛೈಸುವನೆಂಬುದುಂ; ಕಂದರ್ಪಂ—ಈಸಬ್ಬವಕಾಱನನಿತರನಲ್ತು ಕಡುಗಬ್ಬದಿಂ ತನ್ನ ಬಿರುದಾವಳಿಯುಂ ಪೊಗಟ್ದಪನೆಂದೊಡಂಬಡಿಸುವಿನಂ; ವಸಂತಕಂ ಮನೆವೊಕ್ಕು ಇರ್ದ ನಲ್ಪಾವುಡಮನಿತ್ತಪೆಂ ಕೊಳ್ವಕೆಗಳೆಯ್ತಪ್ಪರ್ದೆನಲೊಡಂ; ಬಂದು ನಡುವನೆಯೊಳ್ ನಿಂದಾಕೆಗಳಂ ನಿರವಿಸಿ ಕಲಾಧರಂ ಕಂದರ್ಪನೊಡನೆ—

ಪೊಂಗೊಡವೊಲೆಗಳ ಮೇಲಲ ।
ಪಂಗೞಿ ಕೆಂಕರ್ವೆಣಿಮುತ್ತಿನ್ನೆಸರವೊಲವಿಂ ॥
ತಿಂಗಳ್ಮೊಗದೆಳನಗೆವ ।
ಳ್ದಂಗಳ್ ತೆರೆಮುಸಗೆ ಮಂಗಳಾಂಗಿಯೆರಿದೆಕೊಳ್ ॥೧೩೨

ವ॥ ಎನೆ; ಕಂದರ್ಪಂ ಆಕಲಾಧರನ ಮನದಭಿನಿವೇಶಮುಂ ನಿರವಿಸಿ ನಸುನಗುತ್ತೆ—

ಹಾರವೆನೆ ಹೃದ್ಯವಾದೀ ।
ಕೇರಿಗೆ ನಲ್ವನೆಯಿದಪ್ಪುದೊಪ್ಪುವ ತರಳಂ ॥
ಸೇರಿದವರೆಲ್ಲರುಮಂ ತಾ ।
ನೋರಂತಿರೆ ತರಳರೆನಿಸಿ ತೋಱುಕುಮದಱಿಂ ॥೧೩೩

ವ॥ ಎನೆ; ಕಲಾಧರಂ ಪಕ್ಷ್ಮವಣಿಗಳೊಳಂ ತರಳತೆ ತೋರ್ಕುಮೆಂಬು ದುಂ; ನಾಯಕರತ್ನದ ಪೆರ್ಕಳನ್ನೈಸೆಯೆಂದವರ್ ಬಿನ್ನಮಾತುಗಳನಾಡುತ್ತಿರೆ; ವಸಂತಕನಾಪೂವ್ರುಷನುಂ ಗವಸಣಿಗೆಗಳೆಯುದೆಸೆಗೊಂಡಿಸಿದ ಕೈದಳದೊಳ್ ತಳೆದು ಬಿಜ್ಜೆವಳರ್ಗೆ ಚಾಗಮಾವಾಗಳ್ ಕುಡುವವರಂ ಕೊಂಬವರಂ ಕುಡು ವೊಡಪೆಯುಮಂ ಪೆಸರ್ಗೊಂಡು ಪ್ರಾಗಲ್ಭ್ಯ ಕುಡವೇಳ್ಪುದಱಿಂ ನಿಮ್ಮಿರವನ ಱಿಪಿಮೆಂಬುದುಮಾಕೆಗಳ್—ಅಯ್ಯಾ ಕೇಳವಾಂ ಕುಶಲವತಿಯ ಕುಮರಿಯರ್, ಮತ್ತಂ,

ಸವಿಗಾತಿರ್ಯನುಜೆಯರ್ ಮಾ ।
ಧವಿಚಂದ್ರಿಕೆವೆಸರ್ಗಳೆಮ್ಮತು—

ವ॥ ಎಂದು ನುಡಿದಳಂ ನಿಟ್ಟಿಸುತ್ತ ವಸಂತಕಂ ಮನದೊಳ್ ಈಕೆಗಳ ರ್ವರುಂ ಬಿಜ್ಜೆಯೊಳಂ ಬಿನಯದೊಳಂ ಚದುರೊಳಂ ಚೆಲ್ವಿಕೆಯೊಳಂ ದೊ ರೆಗೊಂಡಿರ್ದೊಡವೊರ್ವಳನುಱದೊರ್ವಳೊಳ್ ನೆವವಿಲ್ಲದೆ ನೇಹಂಬಳೆ ಯುತ್ತಿದೆ, ಇದರ್ಕೆ ಪೆಸರ್ಗಳ ಪಸುಗೆಯಾಂ ಬಯಸಿದಂತಾದೊಡೆ ಲೇಸೆಂದೆ ಣಿಸುವಿನಮವಳ್—

—ಎಮ್ಮಿರ್ವರೊಳಂ ॥

ವಿವರಿಸಲೊಡನಾನೀಮಾ ।
ಧವಿಯಿವಳ್ ಗಡಾ! ಚಂದ್ರವದನೆ ಚಂದ್ರಿಕೆಯೆನಿಕುಂ ॥೧೩೪

ವ॥ ಎನೆ; ಕೇಳ್ದು ವಸಂತಕಂ ಸಂತಸದೊಳ್ ಪೆಸರ್ವಸುಗೆ ಪಸನಾದು ದೆಂಬಿನಂ; ಕಲಾಧರನುಂ ಪೆಱತೊರ್ವಳಂ ನಿರವಿಸಿ ವಸಂತಕನಂತಾಳೋ

ಚಿಸಿ, ಅವನಂತೆ ಸಂತಸಂಗೊಂಬಿನಂ ; ವಸಂತಕಂ ಆಕೆಗಳೊಡನೆ ಈವುಡು ಗಜು ಕುಡುವುವಲ್ತು ನೀಂ ಕಲ್ತು ಬಿಜ್ಜೆಗೆ ಮೆಚ್ಚಿ ಮಾಧವವಿಧುಮನ್ಮಥರಿವ ರೆಂದವು ಗವಸಣಿಗೆಗಳಿದು ಚೆಂದಳಿಗಾರ್ವಿಯುಡೆಯಿದು ಬೆಳದಿಂಗುಲಮಿದು ಪೊನ್ನುಡೆಯಿದು ಬೆಳ್ವಟ್ಟೆಯಿದೆಂದು ನಾಲ್ಕುಂ ದೇವಾಂಗಮುಂ ತೆಗೆವಿನಂ; ಕಂ ದರ್ಪಂ ಕಲಾಧರನೊಡನೆ—ಮಿಕ್ಕೆರಡುಂ ನಗಂಗಳನಾರ್ಗೀವನೆನೆ ; ಅವನೀಕೆ ಗಳೊಡತಿಗಮುವರಬ್ಬೆಗಮೆನೆ ; ಕಂದರ್ಪನಾಕೆಗಳ್ಲಿದರೆಂಬುದುಂ ; ನಸು ನಗುತ್ತೆ ಕಲಾಧರಂ—ಇದೆ ವಸಂತಕಂ ಕರೆತಂದು ಕಾಣಿಸುವನೆಂಬುದುಮಾಕೆಗ ಳೊರ್ವರೊರ್ವರಂ ಮೊಗನೋಡುತ್ತೆ ಕ್ಕಟಿಯೊಳ್

ಇದು ರಾಯುಮಾವುಡಂ ನೆಲೆ ।
ಯಿದನೆಂತೋ ತಂದನಿಂದು ಸಬ್ಬವಕಾಜಂ ॥
ಪದನಱಿದುದಾಸೆಯಿಂ ಕೊಂ ।
ಬುದೆಂತಿವಂ ಬಿನ್ನವಿಸ್ಪವೊಡತಿಯುರಡಿಗಾಂ ॥೧೭೫

ವ॥ ಎಂದಾಲೋಚಿಸುತಿರ್ಪಿನಂ ; ವಸಂತಕನವರೊಡನೆ—

ಚಿಕ್ಕಸಸಡಲೀತಕೆ ಗೊರೆ ।
ಬೆಲ್ಕಸದಿಂ ತಂದೆನಕ್ಕುಮುಕ್ಕಿಂ ಸಿಲ್ಕಿಂ ॥
ಚಿಕ್ಕವರಱಿಯಿರ್ ನೀವಿಂ ।
ಗಕ್ಕನೆ ಕರೆತಪ್ಪುದಬ್ಬೆಯೊಡನಕ್ಕನುಮಂ ॥೧೭೬

ವ॥ ಮತ್ತಂ,

ರಾಯರ ಮೆಚ್ಚಿದು ಸಿಮುಗಿ ।
ಚಾಯೆಯ ಪೊಲನಲ್ತು ಕಲ್ತುವಿಲ್ಲಿದನಱಿಂ ॥
ದಾಯುಂಗಿಡದಿಯೆಡೆಯೊಳ್ ।
ತಾಯುಂ ಸಂಗಾರ್ತಿಯೊಡನೆ ತಪ್ಪದೆ ದಾಯುಂ ॥೧೭೭

ವ॥ ಎನೆ; ಅವಪ್ಪೋಗಿ ತಿಳಿಪಲೊಡಮಾಲಿಸಿ,

ಬಿಜ್ಜಿಗೆ ಮೆಚ್ಚಿದ ತೆಱದಿಂ ।
ದುಜ್ಜುಗಿಸುವನೋಜೆಗಜ್ಜವಂ ಬಿಜ್ಜೆವಳಂ ॥
ಸಜ್ಜೆಂದು ತಿಳಿಪುತಜ್ಜೆಗೆ ।
ಬಿಜೆಯ್ಗೆದರಿ ಬಂದಳೆಸೆವ ಸವಿವೆಸಂಸಿಯಳ್ ॥೧೭೮

ವ॥ ಬರೆ ಕಂಡು ಕಂದರ್ಪಂ,

ನೆಲೆಮಿಂಚು ಮಿಂಚಿತಮವಾ ! ।
ಗೊಲೆನೊಂಕಿಪುವಿಂದು ಸೈಪ್ರಗೌಂಗುಗಳಮವಾ ! ॥
ಪೊಲಪಿಡಿಪುದು ಬಗೆಯುಮವಾ ! ।
ಬಲೆಯೊಳ್ ಕಣ್ಣಾಳ್ ತೊಡರೆ ಪಿಡುಕುವುದಮವಾ ! ॥೧೭೯

ವ॥ ಎಂದು ನಿರವಿಸಿ ಮತ್ತಂ,

ಪೊಳೆವಳಕಂ ಪೊದಟ್ದ ಕಪಪಂಪದ ಕುಂಪಣದೋಲೆ ನೀಳ್ದ ಕ ।
ಣ್ಣೊಳನಗೆ ಮುದ್ದವಾಯ್ದೞಿ ಸುಧಾರಸಧಾರೆ ಕಡಂಗಿ ಪೊಂಗಿ ಮಾ ॥
ಯ್ದಟಿವನುವಾಂತ ಮಾತಿನೆಸಕಂ ಮುಸಕಂಗೊಳೆ ಕಣ್ಗೆ ಮರ್ಪಳ ॥
ಲಿತಲತಾಂಗಿಯಂಗಜನ ಬಿಜ್ಜೆಯು ಪೀಲಿಯ ಪಿಂಜೆಯೆಂಬಿನಂ ॥೧೮೦

ಪೊಂಗುವೆರ್ದೆ ಪುಸಿವ ನಡು ಪೊಸ ।
ಪೊಂಗುಡಿಯಂ ಪೋಲ್ವ ಚೆಲ್ವತೋಳ್ಕೆಂದಳಮಾ ॥
ನಂಗನಿಷಂಗದ ಭಂಗಿಯ ।
ನಂಗೀಕರಿಸಿರ್ಪ ಜಂಘೆಯಿಂ ಗೆಲೆವಂದಳ್ ॥೧೮೧

ವ॥ ಎಂದು ನುಡಿದು ಮನದೊಳ್,

ಅಚ್ಚಿಯೊಳಚ್ಚಿಗವೊಂದಿರ ।
ಲಚ್ಚೊತ್ತಿದ ತೆಱದೆ ಬೆಚ್ಚು ಚೆಚ್ಚರಮಿರ್ಕುಂ ॥
ಮುಚ್ಚುತ್ತಿದೆ ಮುಚ್ಚಿತ್ತಂ ।
ಸಿಚ್ಚತಮುಚ್ಚರಿಯ ಸೊಬಗಿನಚ್ಚರಸೆಯಿವಳ್ ॥೧೮೨

ವ॥ ಎಂದಾಲೋಚಿಸುವಿನಂ; ಕಲಾಧರನುಮವಳಂ ನಿರವಿಸಿ,

ಮುನ್ನಿರವುಱದೊಯ್ಯರದಿಂ ।
ದನ್ನಿಬ್ಬರಸವಿಯೆ ಮಸಗಿ ಮಿಸುಗಿದ ತೆಱದಿಂ ॥
§ ಚಿನ್ನದ ಬೊಂಬೆಗೆ ಪಸನೋ ।
ಟನ್ನಗೆನುಡಿನಡೆಗಳಾಗೆಮವೆಂಬಿನಮೆಸೆವಳ್ ॥೧೪೩

ವ॥ ಮತ್ತಂ,

ರೂಪಂ ಗುಣಮುಂ ಸ್ಯೆತು ನಿ ।
ರೂಪಿಸೆ ಮುಂ ಕೊಂಡು ನಿಲ್ವುದಾಂ ತಾನೆನುತಿ ॥
ರೂಪಾಜೀವೆಯುನೆವಗೇ ।
ಸ್ಯೆಪಿಂಪಂ ಪಡೆವನಬ್ಜಜಂ ಮೋಣ ಮದನಂ ॥೧೪೪

ವ॥ ಎನುತಿರ್ಪನಂ; ವಸಂತಕನಲ್ಲಿಗೆೞ್ತಂದ ತಾಯ್ಮಕ್ಕಳಂ ನೋಡಿ ಮನದೊಳ್ ॥

ಸಬ್ಬವವೊಂದಿರೆ ಸಿಂಗರ ।
ಗಬ್ಬಂ ಮೆಱೆವಂತುಟೀಗಳೀಪೆಣ್ಮಣಿ ತ ॥
ವ್ಮಬ್ಬೆಬೞಸಲ್ವಿನಂ ಸವಿ ।
ಯುಬ್ಬರಮುಂ ಪರ್ಬಿಸುತ್ತದೇನುರ್ಬಿದಳೋ ॥೧೪೫

ವ॥ ಎಂಬನಿತಱೊಳ್ ಮಗಳ್ವೆರಸು ನಿಂದಾಕುಶಲವತಿ ಕೈಮುಗಿದು,

ಬಂದಿರ್ ಪಲವುಂ ದಿವಸ ।
ಕ್ಕಿಂದಿನ್ನೀಕೇರಿವಿಡಿದು ಮೇಣದಱೊಳಮೆ ॥
ವ್ಮಂದದ ಮಂದೆಯುರಂ ದಯೆ ।
ಯಿಂದಂ ನೆನೆದೊಲ್ದು ಮನೆಗೆ ಸಂದಿರಿದೆಂತೋ ॥೧೪೬

ವ॥ ಅನಿತಱೊಳ್ ಸವಿಗಾರ್ತಿ ನಸುನಗುತ್ತ—ಆಂ ವಂದಿಪೆನೆಂದೊಯ್ಯಾ

§ ದನ್ನದ ಪುಸ್ತಕಪಾಠ.

ರದಿಂ ಕೈಯುಂ ಮುಗಿದು, ಎಂತಪ್ಪರುಮೊರ್ಮೆ ದಾರಿಪಪ್ಪುವರೆಂಬ ನಾಣ್ಣುಡಿ ದಿಟಮಾದುದು, ಆವಗಂ ರಾಯಗೆಳೆಗಳಂ ಬೞಸಲ್ವ ನೀಮಿಾಬೆಲೆವೆಣ್ಗಳಂಗಳಮಂ ಸಿಂಗರಿಪುದೆಮ್ಮ ಭಾಗ್ಯದೇೞ್ಗೆ, ಕುಳ್ಳಿರಿಮೆಂದು ನೆಲವಾಸಿನೊಳೆಲ್ಲರುಂ ಮಂಡಿಸುವುದುಮಾವಸಂತಕಂ—

ಕೈಬಾಗಂ ಕುಡಲೆಂದೊಡ ।
ಮಿಾಚಪಲೆ ದಲೆನ್ನ ಕಳ್ಳನೆಂದೆಣಿಸುವಳ ॥
ಸ್ನೇಹದುರಿಂ ಮನೆವುಗುವೆನ ।
ದೇ ಚೆಂದದೊಳಂದಗಿಡದೆ ಬಂದೊಡವೆರೆವೆಂ ॥೧೮೭

ವ॥ ಎನೆ ; ಅಬ್ಬೆಯಾಮಾಧವಿಯುಂ ಪುರ್ಬಿನಿಂ ಜರ್ಬುತ್ತೆ,

ಮಾರಾಯರೆಮ್ಮ ಕೇರಿಯ ।
ದಾರಿಯೊಳಂ ಬರ್ಪುದೆಮ್ಮ ಭಾಗ್ಯೋದಯಮಿಂ ॥
ತಾರಯ್ಯದೆ ಮಗಳೇ ನೀ ।
ನೀರೀತಿಯೊಳೆಮ್ಮ ಮನೆಯ ನಡೆಗಿಡಿಸುವರೇ ॥೧೮೮

ವ॥ ಬೞಕ್ಕೆ ಸವಿಗಾರ್ತಿ ಮಾಧವಿ ವಸಂತಕರಂ ನಿರವಿಸಿ—

ತಪ್ಪಿದಳವಳೀಯೆಡೆಯೊಳ್ ।
ತಪ್ಪದು ಪಿರಿದಪ್ಪುದದಱನೊಳಕೊಳ್ಳುವು ಮೇ ॥
ಸೊಪ್ಪುವೆವಿವಳನನಿಮಸ ।
ತಪ್ಪಂ ಕೈಗಾವ ಕೊಲ್ವ ಗೆಯ್ಮೆಗೆ ನೀಮೇ ॥೧೮೯

ವ॥ ಎಂಬುದುಂ ; ವಸಂತಕಂ ಸಂತಸದೊಳಾದೊಡಾನಿವಳನೆನ್ನ ಮನಂಬಂದಂತೆ ಗೆಯ್ವೆನೆಂದೆೞ್ದೆಂದು ಗರೆಯುನವಳ ಕೆಂದಳದೊಳಟ್ಟು,

ಪೊಂದಾರಗೆಯ್ಮೆ ಸೆಜಿಗಿನ ।
ಚೆಂದದ ಚೆಂಗಾವಿಯುಡೆಯುನುಟ್ಟನುಕರಿಪಳ್ ॥

ಇಂದು ವಸಂತಸಮಯಾಗಮ |
ದಿಂದಂ ಕೆಂದಳಿರನಾಂತ ಮಾಂಜೆಳಗೊಂಬಂ ||೧೯೦

ವ|| ಎಂದು ನುಡಿವವಳಂ ಕೈವಿಡಿದೆನ್ನಿಚ್ಚೆವಂದೆಡೆಗುಯ್ಯೆನೆಂದು ಪೊಱಮಟ್ಟು ಪಟ್ಟಣವನೆಯ್ದೆವೊಕ್ಕನುಱುವ ಪಾವುಡಂಗಳಂ ಕೊಟ್ಟು ತೊಟ್ಟನೆ ಬರ್ಪನನ್ನೆಗಮಿರೆಂದು ಸೈತಿಟ್ಟು ಘಟಿಲನೆ ಬಂದು ಪೆಱತೊಂದು ಪಾವುಡಮಂ ಮುದುಪೆಯ ಪೆಗಲೊಳಿಟ್ಟು ನೀನೀಸಱುಮಿಂಡಿಯುಪ್ಪ ಮಾಲವಿಯುಂ ಕೊಂಡುವಱಿಂ ಕುಶಲವತಿಯುಂ, ರಸಿಕಜನನಯನಚಕೋರಚಂದ್ರಿಕೆಯೆನಿಪ ಚಂದ್ರಿಕೆಯುಂ ಪೊರೆವುದಱಿಂ ಕ್ಷೇಮವತಿಯುಂ, ಮದನಮಹಾವೀರಚರಿತ್ರವಿಸ್ಫೂರ್ತಿಯ ನವೀನಮೂರ್ತಿಯೆನಿಪ ಸವಿಗಾರ್ತಿಯಂ ಪಡೆದುದಱಿಂ ಭದ್ರವತಿಯುಮೆನಿಸಿ ನೆಗೞ್ದುದೆಂದು ಪರಕೆಯೆನ್ನದಲ್ತು ಸಾಕ್ಷಾನ್ಮನ್ಮಥಚಂದ್ರಗೆಯ್ವೆರೆಂದವಳನೆಕ್ಕಟಿಗರೆದು —

ಲೋಕದ ಮಾಂತ್ರಿಕರಂತ |
ಲ್ತಾಕೇರಳಯೋಗಿ ಬಂದನೊರ್ವಂ ಸಮುಖ ||
ಕ್ಕೇಕಾಲದೊಳತಿಶಯಮೆನೆ |
ಯಾಕರ್ಷಣವಿದ್ಯೆಯೊಂದನವನಿಂ ಕಲ್ತೆಂ ||೧೯೧

ದೇವರೊಳಂ ಮಾನವರೊಳ |
ಮಾವಂ ಬರವೇೞ್ದುದೆಂದು ಬಗೆವಿನಮೊದವಿಂ ||
ದಾವೇಳೆಯೊಳವನಿದಿರ್ವಂ |
ದೇವೆಂ ಬೆಸಸೆಂದು ಮುಂದೆ ... ... ||೧೯೨

* ... ... ... ... ||೧೯೩

ವ|| ... ನೆಲೆಗೆಯ್ದು ಪೆಣ್ಗಳೊಡನೆ—

* ಇಲ್ಲಿ ಗ್ರಂಥಪಾತ.

ಅಯ್ಯನಿವನಿಷ್ಟದೇವತೆ ।
ಕಯ್ಯಡಕಕೆ ಸಲ್ವ ತೆರದೆ ಬರಿಸುಗುವುದೞಿಂ ॥
ದೆಯ್ಯನೆ ಕುಱಿತೊರೆವುದು ನೀಂ ।
ರಯ್ಯಮೆನಲ್ಕೊರ್ಗೆರೊಂದನೆಲ ಕಂಪರಿರಾ ॥೧೯೪

ವ॥ ಎಂಬುದುಮವರ್ ತವೆಕ್ಕೆಳದಾನದಿಟವಿದರ್ಕೆ ಕದುಬಿ ನಗೆಗಿಡಾಗ ಬಾರದೆಂದೆಣಿಸಿಯಿನನೊಡನೆ ಅವರವರ್ಗನುರೂಪಮಪ್ಪ ದೇವತೆಯುಂ ನೀ ವೆ ಬರಿಸಿವೆಂಬುದುಂ ; ವಸಂತಕಂ ಸಂತಸದಿಂ ಪೊನ್ನಡೆಯನಾಸವಿಗಾತಿ ಗಂ ಮುಗುಲನುಂ ಚಂದ್ರಿಕೆಗಂ ಕೊಟ್ಟು ನಿಮಗೆ ಸಾಕ್ಷಾನ್ಮಕುಂದಚಂದ್ರ ರಂ ತೋರ್ಪೆನೆಂದೊರೆದು ಕುಶಲವತಿಯುಂ ನೋಡಿ–ನಿನಗಾವ ದೇವತೆಯುಂ ತೋರ್ಪುದೆನೆಯುನಳ್ ಕುಬೇರನೆಂಬುದುಂ ; ವಸಂತಕಂ ಮನದೊಳವಳ್ಗೆ ಹರೆಯದಿಂದಮೆ ಕುಬೇರಂ ದೊರೆದಿರ್ಕುಮೆಂದೆಣಿಸಿಯುಂತಾಧನದನನೇ ತೋ ರ್ಪೆನೆಂದು ಸ್ವೈತಿರಿಸಿಯುಂ ಮಂತ್ರಾನ್ನೃತ್ತಿಯಿನಾಹ್ವಾನಂಗೆಯ್ವನ್ನೆಗಂ ಗೆಲಬೆ ಗೆಯ್ವವೇಡೆಂದವರಂ ಪದುಳಂಗೊಳಿಸಿಯೂಮನೆವಾಗಿಲ ಕದವಂ ಮುಚ್ಚಿ ಪೊಱಚಿಲುಕುಗೊಳಿಸಿ,

( ಮಂಜುಭಾಷಿಣಿ )

ಪೊಱಮಂದು ನಿಂದು ಕೆಳಯರ್ಕಳೊಂದಿ ತಾಂ ।
ಕಿಱುಮಾಡಮೇಱೆ ನೆಲೆಯೊಂದಱಲ್ಲಿ ಮುಂ ॥
ತೆರೆದಿರ್ದ ಜಾಲಕದ ಬಾಗಿಲೆಲ್ಲಮಂ ।
ಮುಱಿಗೆಯ್ದು ಡಚ್ಚಿದನದೊಂದು ಚಿತ್ರಮಂ ॥೧೯೫
ಬಂದೆ ಗವಾಕ್ಷಮನರೆದೆರೆ ।
ದೊಂದಿಸಿಯದಱಲ್ಲಿ ದೂರದೃಷ್ಟಿಯ ಕೊಱಲಿರ ।
ಕಂದರ್ಪಕಲಾಧರರಂ ।
ಪಿಂದಳೆದೇಱಿಸಿದನದಱ ಮೇಗಣ ನೆಲೆಯಂ ॥೧೯೬

ವ॥ ಅಲ್ಲಿ ಕಲಾಧರನಂ ನಿಲಿಸಿಯುವರೊಡನೆ,

ಚಂದ್ರಿಕೆಗೆ ಬಯಸಿ ದಿಟವಮಾ ।
ಚಂದ್ರನುನೇ ಬರ್ಕುವೆಂವು ನೆಲೆಗೊಳಿಸಿದೆನೀ ॥
ತಂಪ್ರಿಯನು ದಿಂ ನೀವಮಾ ।
ಚಂದ್ರನನಂತಭಿನಯಿಪ್ಪದೊಪ್ಪದೊಳೀಗಳ್ ॥೧೯೩

ಎಂದವನನಲ್ಲಿ ನಿಲಿಸುತ ।
ಕಂದರ್ಪಂ ಬೆರಸಿಯೋಜು ವೋಗಣ ನೆಲೆಯುಂ ॥
ತಂದಿರಿಸಿ ಬಿನ್ನಯೊಂದಂ ।
ವಂದಿಸಿ ಭಯಭಕ್ತಿಯಿಂದೆ ಬಿನ್ನತಿಗೆಯ್ದಂ ॥೧೯೪

ಅರಸಾಳ್ತನದನುವಂ ನಿಂ ।
ಪರಿವರ್ತನೆಗೆಯ್ದು ಕೃಷ್ಣನಂತಿರವೇಳ್ಕುಂ ॥
ನರನಂತೆವೊಲಾಂ ಬೆಸಸುವೆ ।
ನಿರವಾಪರಿ ನೆಗಳ್ದು ಮೆರೆವುದಾತ್ಮೋನ್ನತಿಯಂ ॥೧೯೯

ವ॥ ಎಂದವರನಲ್ಲಿರಿಸಿ ಭರದಿಂ ಬಂದು ಬಾಗಿಲಂ ತೆರೆದಿರ್ದದೇವತೆಗಳ್ಯತ್ತಂದರ್, ಬಂದು ವಂದನಂಗೆಯ್ವೆವೆಂದವರನೊಡಗೊಂಡು ಕರುಮಾಡದ ಮೊತ್ತಮೊದಲ ನೆಲೆಯೋಜೆಯಲ್ಲಿ ರಂಗುವಡೆದ ಪಿರಂಗಿಗೆಲಸದ ಜಾಲಾಂತರದೊಳಮರಿಸಿದ ಸನಡಿಗನ್ನಡಿಗೊಟಿವಿಯೆಡೆಯಂ ನೋಡಿ ಕೈಯಂ ಮುಗಿದಿದೆ ಚಂದ್ರನು ನಿಂತಂದು ಮುಂತಣ ಬೀದಿಯು ಸರಿಸಕೆ ಬಂದನೆಂದು ತೋಱಿಸೆಯುವರೋರೊರ್ವರ್ ನಿಟ್ಟಿಸಿ ಕಟ್ಟಚ್ಚರಿವಡುತ್ತಿ,

ನಮಿಸಿಂ ಪ್ರಾದೇಶಕಂ ತಾನೆನಿಸಿದ ಸಸಿವಟ್ಟತ್ತ ಮುಂಬಟ್ಟರತ್ನಿ ।
ಪ್ರಮಿತಂ ಮೇಣಂಬಿನಂಕೊಂಬಿನನುಱಿಗೆಮರಲ್ಗಣ್ಮಿಸುಂಬೊಪ್ಪೆ ಮೆಯ್ತೋ॥
ಡೆ ಮಿಗಂ ಸುವ್ಯಕ್ತಮಪ್ಪಂತವೊಲಿದಿರಿದಿರೊಳ್ ಭಿತ್ತಿವಿಸ್ತಾರದಿಂ ವ್ಯಾ ।
ಮಮೆನಲ್ ಕೈಸೋಂಕಿನೊಳ್ ಕಣ್ಕಳರೆ ಪೊಳೆವ ಚಂದು ನಿಂದಿರ್ಕುಮೀಗಳ್॥

ವ॥ ಆಗಳುತ್ತಂಸಿತಾಂಜಲಿಹಸ್ತನಾಗಿ ವಸಂತಕಂ ॥

ತಳತಳಸುವ ಮಂಡಲದೊಳ್ ।
ಗಿಳಿತ ಪ್ರೌಢಿ ಗಲಬೆಯುಪ್ಪುದೊಳ್ಪರಿಜಂವಂ ॥
ದಳೆದೊಳವಂದೀಚಂದ್ರಿಕೆ ।
ಗಳವಡಿಪುದು ದಿವ್ಯಭೌಮಸುಖದೊದವುಗಳಂ ॥೨೦೧

ಸಕಲಕಲಾವಲ್ಲಭ ನಿ ।
ನ್ನ ಕಲೆಗಳಂ ಮಾಂಜಿಯೆನ್ನ ಕೆಳಗೊಂಡುದೞಂ ॥
ದೆ ಕರಂ ಸಂಕೋಚಂಬಡ ।
ದೆ ಕರುಣಿಸಿಂ ಚಂದ್ರವದನೆಯಂ ಚಂದ್ರಿಕೆಯಂ ॥೨೦೨

ವ॥ ಎಂದು ಚಂದ್ರನಂ ಪ್ರಾರ್ಥಿಸಿ ಮಗುೞ್ದೀಕೆಗಳೊಡನೆ,

ಆವಾಹಿಸಿದಪೆನಾವನ ।
ನಾವಳ್ಗವಳೊರ್ವಳವನನುಪಚರಿಪುದೆ ಸಂ ॥
ಭಾವಿತಮುದಱಿಂದಾಂ ಸಿರಿ ।
ಗೋವಳನಂ ಗಾನಲೋಲನಂ ಬೞಿಸಲ್ವೇಂ ॥೨೦೩

ವ॥ ಎಲೆ, ಚಂದ್ರಿಕೆ—

ಈಜಾಲಕದೆಡೆಯೊಳ್ ದ್ವಿಜ ।
ರಾಜಂ ಕೈಪಟ್ಟನೋವುತೀಬಿಜ್ಜೆಯು ನೀ ॥
ನೀಜಗಲಿಯೊಳರೆ ದ್ಯುಕ್ಸರ ।
ಸೀಜಂ ಮುಗಿವನಿತಱಲ್ಲಿ ಸಲ್ಗಂ ಮನೆಯೊಳ್ ॥೨೦೪

ವ॥ ಆಬೞಿಕ್ಕೆ ನಿಮ್ಮಿರ್ವರ ಚಿತ್ತಂಬಂದಂತೆಂದವಳ ಕಿವಿಯೊಳ್—

ಇನ್ನೆಮ್ಮಕ್ಕನ ಪಕ್ಕಿಗೆಯ್ದುವ ಮುಕುಂದಂ ಚಿತ್ತದೊಳ್ ಪೊತ್ತು ಕ ।
ಣ್ಣಿನ್ನಂ ಮನ್ನಿಸಿ ನಿಚ್ಚವೊಂದು ತೆಱದಿಂವಂ ಪೆರ್ಚಿಸಲ್ವೆತ್ತು ಬ ॥

ಲ್ಪಿನ್ನೀಂ ಕಲ್ಲನೊಸರ್ಚಿ ಮೆಲ್ಲಿತೆನಿಪೀ ಪೊಲ್ಲಾಟದಿಂದಿಲ್ಲಿವಂ ।
ದೆನ್ನಂ ಪಾಲಿಸು ನೀಂ ಸುಧಾರಸಖನೀ ಸರ್ವಜ್ಞಚೂಡಾಮಣೀ ॥೨೦೫

ವ॥ ಆನುಂತ್ರಮನುಚ್ಚರಿಸುತ್ತೆ ಮುಚ್ಚಿದ ಕಣ್ ಚಂದ್ರಕರಸ್ಪರ್ಶದಿಂದೆ ತಿಳಿತಳಮಪ್ಪುದುಂ, ತೆಱೆದು ನಿರವಿಸುವವಳನಲ್ಲಿರಿಸಿ, ಮಿಕ್ಕಿರ್ದರೊಡವೆರಸು ಮೊಱನೆಯ ನೆಲೆಯ ಸೋಪಾನಮನೇಱಿ ಪೋಪನಿತಱೊಳ್, ಕಲಾಧರಂ ಚೆಚ್ಚರಮಿೞಿತಂದು ಪಚ್ಚಗಪ್ಪುರಂ ತೀವಿದ ಕೆಂದಳಿರ್ದೊಂಗಲಿಂ ಮುಚ್ಚಿದ ಕಣ್ಗಳಂ ತಡವಿ ಪೋಪುದುಂ, ಬೆಚ್ಚವೆಗಳ್ ನೋಡ್ಪನೆ ತಣ್ಪೇಱೆ, ತನ್ನಿಂ ಮುಂಚುವ ರೋಮಾಂಚಮುಂ ಮುಂಬರಿವ ಕಣ್ಬನಿಬಂಬಲನೊದವುವ ಗದ್ಗದಮುಮಂ ನೆರಂಗೊಂಡೇಱುವರ್ಪರ್ಗಳಂ ಜಾಲಕದ್ವಾರದಿಂ ನೋಡುತ್ತೆ ಕಲಾಧರಂ—

ನಿಱಿಯುಂ ಚೆನ್ನುಡಿಯುಂ ತೊಡಂಕದಪ್ರೊಳೊಕ್ಕೈಯಿಂದವೊಯ್ಯಾರದಿಂ।
ಪೆಱಸಾರ್ಚುತ್ತೆ ಪೊದಳ್ದು ಬಿಣ್ಮೊಲೆಗಳೊಳ್ ತಳ್ಪೊಯ್ಯೆ ಹಾರಂಗಳಂ ॥
ಪೆಱಗೈಯಿಂ ಸಸಗೆಯ್ಯುತೊಂದಡಿಯನೂಱುತ್ತೊಂದನೆತ್ತುತ್ತೆ ತ ।
ತ್ತಱದಿಂ ನೆಟ್ಟನೆ ಮೆಟ್ಟನೇಱುವಳದೇಂ ಮುಚ್ಚಿತ್ತಮಂ ಪೆತ್ತುವಳ್ ॥೨೦೬

ವ॥ ಮತ್ತಂ,

ಮುಂ ಬಾಗಿಸೆ ಕುಚಕುಂಭಂ ।
ಪಿಂಬಿಡಿದೆಳೆದೇೞ್ದು ಜಡಿಯೆ ಪೃಥುಲನಿತಂಬಂ ॥
ಲಂಬಾಲಕೆ ತನ್ನುಳ್ಳನಿ ।
ತುಂ ಬಲ್ಪಿಂದೇಱಿ ಬರ್ಪಳ್ಚುಱದೆಂತೋ ॥೨೦೭

ವ॥ ಎಂದು ಬಣ್ಣಿಸುತಿರ್ಪಿನಮವಳಾವಾಸಭವನದ್ವಾರಮುಂ ಸಾರ್ದಲ್ಲಿ ಮನದೊಳ್ ॥

ಅಕಟಕಟೇನಿದಚ್ಚರಿ ಮನಂ ಮನೆವಾಗಿಲೊಳೆಕ್ಕೆ ನಿಲ್ವುದುಂ ।
ದು ಕಡುಗಿಯೊತ್ತಿ ನೂಂಕುತಿದೆ ಸಾಧ್ವಸದೊತ್ತರಮೆತ್ತ ಪೋಪೆ ನಿಲ್ ॥

ವಿಕಲತೆ ತೋಱಿರ್ದಪುದೆಂದು ಪೆಱಸಾರ್ಚಿ ಮುರಲ್ಚುಗುಮೊಮ್ಮೆ ಜಾತಿಗೀ |
ಚಕಿತತೆ ಸಲ್ಲದೆಂದು ದಿಟವೊಂದಿದೊಡಂ ಬಳೆವತ್ತು ತಲ್ಲಣಂ ||೨೦೮

ವ|| ಎಂದಾಳೋಚಿಸುತ್ತೊಳಪೊಕ್ಕು ಪಕ್ಕದೊಳ್ ನಿಂದು ನೋೞ್ಪನಂ; ಆಗಳವಳ್,

ಜಾಱಿತು ಜಾಣ್ಮೆ ಬಿಂಕಮುರೆಗೊಂಕಿತು ಬಿನ್ನನೆಯಾಯ್ತು ಬಿನ್ನಣಂ |
ಪಾಱಿತು ಪಾಳಿ ಬರ್ದುಂ ಕೆಲಸಾರ್ದುದು ಕೈಮೆ ಕಟಿಲ್ದುದುಬ್ಬರಂ ||
ತಾಱಿತು ಮುಂದಣೊಂದೆಸಕಮುಂ ಮೊಗದೋಱದೆ ನಿಂದುದೊಲ್ಮೆ ಕೈ |
ಮಿಱಿದ ಮೋಹದಿಂ ಪಸಪುಗೊಂಬುವೆ ಪೆಣ್ಗಳ ಪಂಥಪಾಡುಗಳ್ ||೨೦೯

ವ|| ಇಂತಿರ್ದಿರವಂ ನಿರವಿಸಿ ಕಲಾಧರಂ ಮನದೊಳ್-

ನಸು ನಸುನಾಣ್ಬುತ್ತೊಂದಿನಿಸು ಬಾಗಿದ ಮುಣ್ಕ್ಮೊಗವೊಂದುಪಕ್ಕದೊಳ್ |
ಮುಸಗಿ ಮುರಲ್ದು ಮಾರ್ಪೊಳೆದು ಬೆಂಗರಿನೊಂಕಿ ಕಡಂಗಿ ಕೊಂಕಿತುಂ ||
ಪಸಪಸನಾಗಿ ನೋಡುತೆಳಜವ್ವನಮೋಂ ಮುಗುಳ್ದಿತ್ತೊ ಮತ್ತಮುಂ |
ಬೆಸಕನುರಾಂತಳೊಲ್ದೆಡೆಯೊಳುಣ್ಮಿದು ಬಿನ್ನಣಮುಣ್ಮುಮಾರ್ಪುಗಳ್ ||೨೧೦

ವ|| ಮತ್ತಮಾಸೊಗಸಂ ನೋಡಿ ಕದುಬುತ್ತೆ,

ಬರಸೆಳೆದಪ್ಪಿ ಕುಪ್ಪಸದ ಮುಪ್ಪುರಿನೂಲ್ಪುಡಿಯೋಜೆ ಮುತ್ತಿನ |
ಯ್ಸರಮೊರ್ದೆಯೊತ್ತಿನೊತ್ತರದೆ ಕಿತ್ತುದಿರುತ್ತಿರೆ ತಳ್ತು ಕಾಂಚಿ ನಿ ||
ಬ್ಬರದೆ ಪಟಕ್ಕೆನಲ್ ಪಱಿಯೆ ತೋಳ್ತೊಡೆಸಂದಿಸಿಯೊಂದೆ ಮೆಯ್ಯೆರ |
ಬ್ಬರಸಿ ಪ್ರದುಂಗಿನೊಳ್ಪುಮರಸಂಗೊಳೆ ತಾಂಗುವೆನಿಲ್ಲತಾಂಗಿಯಂ ||೨೧೧

ಪೆಡಗಡೆ ಸಾರ್ಚಿದೊಂದು ಕರದಿಂದೆಳೆದೋರೆದುಱುಂಬನೊಂದಱಿಂ |
ಪಿಡಿದು ಕದಂಪನೆತ್ತಿ ಮೊಗದೊಳ್ ಮೊಗಮಿಟ್ಟೊಡನಾಂಕಿ ಶಂಕೆಯಂ ||
ತೊಡಪಿ ಕಡಂಗಿ ಬಾಯ್ವೆಱೆಯನೊಲ್ದುಕರ್ದುಂಕಿ ಕರ್ದುಂಕಿ ಪೀರ್ದು ಪಿ |
ರ್ದೊಡನಡಸಿರ್ದ ಬಾಯುಱಕೆಯಂ ತವಿಪೆ ಸವಿ ಪೆಂಪುಗೊಂಬಿನಂ ||೨೧೨

ವ|| ಇಂತೆಣಿಸುವ ಮಾನವಚಂದ್ರನಂ ನೋಡುತ್ತ ಚಂದ್ರಿಕೆ ಮನದೊಳಾದಿಟಂಗೊಂಡು,

ಮೆಲ್ಲಾತುದೆನೋಱುತೆಯ್ದನೆ |
ಚೆಲ್ವಿನೊಳಂ ಚೆಲ್ಲನೋಟಮಂ ಚೆಲ್ಲುವೆನೋ ||
ಕಾಲ್ವಿಡಿದೆಱಗುವೆನೋ ಮೇಣ್ |
ಮೇಲ್ವಾಯ್ದೀಂ ಪೞ್ಗುಯ್ದು ತಳ್ಕೈಸುವೆನೋ ||೧೧೩

ವ|| ಮತ್ತಂ,

ಗಮ್ಮನೆ ಕವಿದುಣ್ಮೆ ನವಿರ |
ಬಿಮ್ಮನೆ ಬಿಗುಪೇಱ ಮೀಱ ಪೊಣ್ಪುವ ಮೆಲೆಗಳ್ ||
ಪಿಮ್ಮೆನೆದೋರ್ಪಿನೆಗಂ ಮನ |
ದುಮ್ಮಹದಿಂ ಬಿಗಿದುಬಿಗಿದು ಬೆಂಡೇಱಪೆನೋ ||೧೧೪

ವ|| ಮತ್ತಂ,

ನುಣ್ಬಣ್ಣೆ ಮೆಲ್ಲದಪು ಮುರ |
ಲ್ಗಣ್ಬಾಯ್ದೞ ತುಂಬುಗಂದಮಿಂಬಿಡಿದೆರ್ದೆಗಳ್ ||
ಪುಣ್ಬಡುವಿನೆಗಂ ಬಿಗಿದು |
ಪೆಣ್ಬಾೞ್ತೆಯು ... ... ||೧೧೫

§ ... ... ... |
... ಪಿಂ ಗಲಬೆಗಾದೆನೆಡೆಯಿಂದಿಗಳ್ ||
ಜಾಣಿಂವಮೊಯ್ಯನೊಯ್ಯನೆ |
ವೀಣೆಯುನೆಂ ನುಡಿಸುತಿರ್ಪನಪ್ಪನುಪೇಂದ್ರಂ ||೧೧೬

ಅಂಕವೊಳಟ್ಟೆ ಕಂಪದೊಡನೊಂದಿಸಿ ನೇವರಿಸುತ್ತ ತಾಣದೊಳ್ |
ಕೊಂಕಿ ನಖಂಗಳಂ ಬಿರಡೆಯಂ ಪಿಡಿದಾಂಕಿಯೊಡರ್ಚೆ ಮೇಳವಂ ||

§ ಇಲ್ಲಿ ಪ್ರತಿಯಲ್ಲಿ ಬಂದು ಓಲೆ ಹೋಗಿದೆ.

ಭೋಂಕೆನೆ ಮಂದ್ರತಾರಸಮನಾದಮದುಣ್ಮೆ [ಪೊಮಟ್ಟು] ದೇಸಿಯಿಂ ।
ತೆಂಕಿತು ಬಾಜಿಪ್ರೋಜೆಯುಕಟ್ಟೇಂ ಸೊಗಮಂ ಮಿಗೆ ಚಂದ್ರಶಾಲೆಯೊಳ್ ॥

ವ॥ ಎನೆ; ಕೇಳ್ದು ಕಲಾಧರಂ ಮನದೊಳ್ ವಸಂತಕಂ ಲೀಲಾವಮುಕುಂ ದಯುಂತ್ರವಾಪನಮಂ ನುತಿಸುವ ನೆವದಿಂದೆನ್ನ ವಿಡಂಬಿಪನದಱಿಂದಾನುಮೊಂದು ನೆವದೊಳಿಲ್ಲಿಂ ಪ್ರೊಬಮುಟ್ಟಿ ಕಣ್ಬಡುವೆನೆಂದು ಯೋಚಿಸಿ ಕಟ್ಟೆಚ್ಚರಿಯನಭಿನಯಿಸುತ್ತಿಲೆ ಚಂದ್ರಿಕೆ ಇಂದೆಮಗ–

ಬಂದುದು ಸಂಕಲ್ಪದ್ರುಮ ।
ವಿಾಂದುದು ವಾಂಛಾಘಟೋಧ್ನಿಭಾಗ್ಯದ ಕಂದಂ ॥
ಕಂದೊಡೆಮಮ ಲೀಲಾಗೊ ।
ವಿಂದಂ ಬಂದಪ್ಪನೇಚ ವಂದಿಸಿ ಬರ್ಪಂ ॥೭೩

ವ॥ ಎಂಬವಳ್ ಕೈಲಾಗಿನಿಂದೆಟ್ಟು ಬರ್ಪಾಗಳಿರ್ವರುಂ ॥

ನೆಱೆಯೆ ನವಿರ್ ಪೆಂಪಿಡಿದೆಡೆ ।
ದೆಱಪಿಲ್ಲದೆ ನೆರೆದ ಪಕ್ಕದಿಂ ಸೊರ್ಕುತುಮಾ ॥
ಪೆಱಮೆಯ್ಯಕ್ಕಮನೆರಡುಮ ।
ನಱತರ್ ಭೂಭಾರಮೆಂದೆ ತಱಸಂದಾಗಳ್ ॥೭೪

ಬಂದೊಂದುಂ ಮೆಟ್ಟೇಲುವ ।
ರೊಂದೊಂದುಂ ಸೂೞೊಳೊರ್ವರೊರ್ವರಭುಜಮೊಂ ॥
ದೊಂದಂ ನೆಮ್ಮುತೆ ಮೊಗಮೊಗ ।
ಮೊಂದಿರೆ ನುಡಿಯುತ್ತೆ ನಿಂದುನಿಂದಡಿಯಿಡುವರ್ ॥೭೫

ವ॥ ಆಗಳಾಕಲಾಧರಂ ಚಂದ್ರಿಕೆಯೊಡನೆ–

ದಂಪತಿಗಳಂತೆಪ್ರೊಲನು ।
ಕಂಪಾಸಿಧಿಯುಡಿಗೆ ನಮಿಸುವಿನಮಃನೆಮ್ಮಂ ॥

ಪೆಂಪಿಡಿಸಿ ಕಳುಪುವಂ ದಿಟ |
ಮೆಂ ಪರಿಪುಂ ಬಿನದಕೆಂದು ತಾಂ ಪೂರ್ಣೇಂದ್ರನೇ ||೨೨೬

ವ|| ಎನುತ್ತೆ ಪೋಪಿನಮಲ್ಲಿ ಕುಶಲವತಿ ವಸಂತಕನೊಡನೆ—

ಪಾಪದ ಪುಣ್ಯದ ಫಲಮವು |
ನೀಪರಿಯಿಂದಱಿಯದಿರ್ಪನದೆಪಾಪಿಯಗರ್ಭ ||
ಶ್ರೀಪುರುಷೋತ್ತಮನಂ ಮನೆ |
ಗಾಪೆನಿಸಿದ ದಿವ್ಯಪಾದಕಾನೆಱಗಿದಪೆಂ ||೨೨೭

ವ|| ಆಗಳ್ ಸವಿಗಾತಿರ್ ತಾಯೊಡನೆ—

ಇಂಚರದೋಜೆ ಸೋಜಿಗಮಿದಪ್ಪ ಮನಂ ತನುವುಂ ತನತ್ತು ಸಾ |
ಜಾ ಚಲವಾಗೆ ಪಂತಮುಱದತ್ತು ದಂತೆಳಸಿರ್ಪ ಗೆಯ್ಮೆಯುಂ ||
ಲ್ಲಂ ಚಪಲಾವಿಲಾಸಮೆನಿಸಿತ್ತು ಮದರ್ಪಂಡಪೊಲುಕರ್ಪಸೊಕರ್ಪಗಳ್ |
ವಂಚಿಸುತುಂ ಚಲಂಬಿಡಿವುದೆ ತೆಱನಾಂ ಚದುರಿಂ ಪಳಂಚುವೆಂ ||೨೨೮

ವ|| ಎಂಬುದುಮಾವಳ್ಕಿಱಿಂದವಳಂ ಮುದ್ದಿಸುತ್ತೆ,

ಎನ್ನಾನೆ ಯೆನ್ನ ಕಂದಾ |
ಎನ್ನಂಚೆಯುಮಱಿಯೆಯೆನ್ನ ಮುತ್ತಿನ ಮಣಿಯೇ ||
ಬಿನ್ನಣಮುಂ ಪೆಂಪೇಱಿಸಿ |
ತನ್ನೊಲ್ಗವಿತ್ತು ಮನ್ನಿಪಂ ನಿನ್ನನಿಯಂ ||೨೨೯

ವ|| ಎಂಬನಿತಱೊಳ್ ವಸಂತಕಂ ಚಂದ್ರಿಕಾಕಲಾಧರರಡಿಸೊಪ್ಪುಳ
ನಾಲಿಸಿ,

ಚಂದಿರನುಂ ರೋಹಿಣಿಯೊಡ |
ನೊಂದಿ ಪೊದಲ್ದುದಿಸಿ ಬಂದನಿಗುಳರೆಗಳದ ||
ತ್ತಂದಿನವೊಲತ್ತಯಿನಾ |
ನಂದಂ ಪೊಗರೇಱ ಭವದೊಳಾವಿರ್ಭವಿಸಾ ||೨೩೦

ಅಬ್ಜಾಕ್ಷ ನೀಂ ನಿಮಿರ್ಚಿದ |
ಕುಬ್ಜೆಯಿವಳ್ ಮಧುರೆ ಪುರಿಯಿದುದ್ಧವನಿದೆ ನೋ ||
ಡಬ್ಜಂ ನಿಂ ನಲವಿಂದೆ ಕ |
ಕುಬ್ಜಯುಮಂ ಮಸಗಿಸಿಂದುಮಂದಿನ ತೆಱದೊಳ್ ||೨೩

ಕಟ್ಟಿದ್ಯೈ ಕಿವಿಗಮರ್ದಂ ಮಗು |
ಟ್ಟಿದ್ದೀ ನಾಲಗೆ ಮೂಗು ಕಣ್ಗೊವಲ್ಗನಿತರ್ಕಂ ||
ಮೆಚ್ಚುವ ಸವಿವೆಸರಸಿಯುಳಂ |
ನೆಱ ತಾಳ್ದುಂ ಪೆತ್ತ ಪೂರುಷೋತ್ತಮವೆಸರಂ ||೨೪

ಜಗುನೆಯ ತಡಿವರಮುಡಿಗಳೊ |
ಳಗಿಯುತ್ತಗಿಯುತ್ತೆ ನೆಗಟ್ದ ತೆಱನಲ್ಲೀಗಳ್ ||
ಜಗಜಿರುವನಾಂತು ಪಂತದೆ |
ಬಗೆಬಗೆಯೊಳ್ ತೊಳಗಿ ಬೆಳಗಿ ತೇಲಿಸ ಸೊಗಸಂ ||೨೫

ವ|| ಎಂದು ಕೈಯಂ ಮುಗಿದೊಯ್ಯನೆ ಬಾಗಿಲ ಸನಿಯಮಂ ಸಾರ್ದಲ್ಲಿ ಯೊಳಚಿಲಕಂ ಕೇಳ್ದು ಪೊಱಗಣ್ಗೆ ತೆಗೆವ ಕದದ ಕಂಡಿಯೊಳ್ ನಿಟ್ಟಿಸುತ್ತೆ,

ಸಾಸಿರ ಮುಡಿಕಣ್ಗಾಯ್ದಱ |
ಸಾಸಿರ ತೋಳ್ಕಂದಮೊರ್ದೆಕೊರಲ್ಪೊಡೆಮಗ್ಗುಲ್ ||
ಸಾಸಿರ ನಡುತೊಡೆಮಣಿಕಾಲ್ |
ಸಾಸಿರ ಕಣಕಾಲ್ತಳಂಗಳಚ್ಚರಿಯುಮುಮಾ ! ||೨೬

ವ|| ಕುಶಲವತಿಯುಮಂತೆ ನೋಡಿ,

ಪಲಸಾಸಿರ ದೀವಿಗೆಗುಡಿ |
ಪಲಸಾಸಿರ ಮಂಚಮಲ್ಲಿ ಪಲಸಾಸಿರ್ವರ್ ||
ತಲೆದೋರ್ಪರ್ ದೇವರುಮಿಾ |
ನೆಲೆಯೆಂತೋ ದೇವಮಾಯೆಯುಂ ತಿಳಿದವರಾರ್ ||೨೭

ವ॥ ಎನೆ; ಕೇಳ್ದು ಕಲಾಧರಂ ಮನದೊಳೀಗಳೀವಸಂತಕಂ ಪಲವುಂ ಪಟ್ಟೊರೆದ ಭೈರೂಪದ ಪಳಿಕುವಟ್ಟನಲ್ಲಿಯುಮರ್ಚಿರವೇೞ್ಕುಮದಱಿಂ ಪಲವುಂ ರೂಪುದೋರ್ಪುದಾದೊಡಂ ಧೂಳೀಪಟಲದೊಳ್ ಧೂಮಭ್ರಮೆಯಿಂದನುಮಿಸಿದೆಡೆಯೊಳ್ ಕಾಕತಾಳನ್ಯಾಯದಿಂದಂ ವಹ್ನಿಯಿರೆ ಅತೀವ್ರವಿಷಯಸಾಮಾವದಿ ಪ್ರಮಾಣಾಭಾಸಮಂತೆ ಕಪಟಯಂತ್ರದಿಂ ತೋಱದೊಡಮಿವಳ ತಳಿವುಂ ವಿಸ್ವರೂಪವಿಷಯಮಾಪುದಱಿಂದಮಪಪನ್ನಮೆಂದಾಲೋಚಿಸುವನ್ನೆಗಂ ತಾನುಂ ನಿಟ್ಟಿಸಿ ಬೆಕ್ಕರ್ಯುಚ್ಚರಿಪಡುವ ಸವಿಗಾರ್ತಿಯುಂ ನಿರವಿಸಿ ವಸಂತಕನಾಮನೆವಾಗಿಲಂ ಸಾರ್ದು ಕೈಮುಗಿಯುತ್ತೆ,

ನಿನ್ನಡಿಯ ದಾಸನಿವನೆಂ ।
ದೆನ್ನಂ ನೆರೆ ನಂಬಿ ಬಂದಳೀಪರಿಯಿವಳೊಳ್ ॥
ನಿನ್ನ ವಿಜೃಂಭಣವೃತ್ತಿಗ ।
ಳನ್ನೆಗಱಿಸಿ ಬೆದಱಿಸುವುದಿದೆತ್ತಣ ಬಿನದಂ ॥೨೨೮

ವ॥ ಎಂಬಿನಂ; ಕಲಾಧರಂ ಮನದೊಳ್ ವಸಂತಕನೀಗಳಾಪಳಿಕುವಟ್ಟಂ ತೊಲಗಿಸಲೆಳಸಿಪನನಿತಱೊಳೀಚಂದ್ರಿಕೆಗಾಯಿಂದ್ರಜಾಲಮಂ ತೋಱಿಸುವೆನೆಂದಾಲೋಚಿಸಿಯುಮವಳೊಡನೆ ನಡೆದಾಸನಿಯುಮಂ ಸಾಮ್ರ್ದುಮುಮವರಿರ್ವರುಂ ನಿಟ್ಟಿಸೆ ಕುಶಲವತಿಯುಂ ಸವಿಗಾರ್ತಿಯುಂ

ಗೋಕುಲದೊಳ್ ದೇವತೆಯೊಡ ।
ನೇಕರಸಂಬರಸಿ ಗೋವಳತಿಯರ್ ನೆಗೞ್ದಾ* ॥
.ಸಾಕೆನಿಸಿದ ಸಂತಸಮಿಂ ।
ದೀಕೇರಿಯೊಳೆಮ್ಮ ಮನೆಯೊಳುಣ್ಮಿತ್ತಕಟಾ ! ॥೨೨೯

ವ॥ ಅನಿತಱೊಳಾಚಂದ್ರಿಕೆಯುಂ ನಿಟ್ಟಿಸಿ ಸೋಜಿಗಂಗೊಂಡು,

ಜಗದ ನೆಗೞ್ತೆಯ ದೇವರ ।
ನಗೆವೊಯ್ದುವೊಲಿರ್ಕುಮಕ್ಕಟಕ್ಕಾಜಿಯದೇ ॥

ಪಗೆಯೊಳ್ ಬಿಗಿದಪ್ಪುವಳೋ |
ಬಿಗುರದೆ ಮೊಗವಿಟ್ಟು ಮೊಗದೆ ಮುದ್ದಾಡುವಳೋ ||೨೩೦

ವ|| ಎಂಬುದುಮಾವಸಂತಕಂ,

ಆಲೋಕನದಾಲಾಪನ |
ದಾಲಿಂಗನದಱ್ತ್ತದಳ್ತ್ತ ಪಲಮೊಗಮೊಯ್ಯಿಂ ||
ಲಾಲಿಪನೊಪ್ಪಿದೊಡೊಲ್ಲದೊ |
ಡೀಲೀಲೆಯನುೞಿದು ಮೊಯ್ಯನೊಂದನೆ ತೋಱರ್ಪಂ ||೨೩೧

ವ|| ಮತ್ತಂ ಸವಿಗಾರ್ತಿಯೊಡನೆ—

ಈಸಕಲಾವನಿಮಂಡಲ |
ದೀಸರನಂ ತಂದು ನಿನ್ನ ಕೈಬಸಗೆಯ್ವೆಂ ||
ಬೇಸಱಿಸದೆ ಬೇಗದೆ ಮೆ |
ಲ್ಲಾಸಿನೊಳುಪಚರಿಸು ನೆಗೞಿಸೆನ್ನುೞಿಗಮಂ ||೨೩೨

ವ|| ಬೞಿಕ್ಕಾಕುಶಲವತಿಯುಂ ನಿಟ್ಟಿಸಿ,

ಇತ್ತರ್ ಚಂದ್ರಂಗೋರ್ವಳ |
ನಿತ್ತಿರುಪೇಂದ್ರಂಗದೊರ್ವಳಂ ಪೆಣ್ಮಗಳಂ ||
ಪೆತ್ತರ್ ಪಲರಿರ್ದೊಡಮೇಂ |
ಸಿತ್ತಳಿಯುಂಗೊಂಡರುಂಟೆ ದೇವರನಿಳೆಯೊಳ್ ||೨೩೩

ವ|| ಅನ್ನೆಗಂ ಕಲಾಧರಂ,

ಎನ್ನಂ ತಗುಳ್ದ ತಮಮುಂ |
ನಿನ್ನ ಸುದರ್ಶನದೆ ಪರಿವು ಕಳೆದೈ ನಿನಗಿ ||
ನ್ನೆನ್ನೆಗಮೀತಾಮಸಮೀ |
ಚೆನ್ನೆಯನುಪಚರಿಸು ನೆಗೞಿಸೆನ್ನುೞಿಗಮಂ ||೨೩೪

ವ|| ಅನ್ನೆಗಮಿನಿಸುಂ ಕಱಮುನರೆಗೆಯ್ದು ಮನೆಯಂ ನಿಟ್ಟಿಸಿ ಸವಿಗಾರ್ತಿಯಂ ಕೈವಿಡಿದೆಟ್ಟು ಮುನಿಸಿಂ ಚಂದ್ರಿಕೆ—

ನಾರಾಯಣನಖಿಲಜಗ |
ತ್ಕಾರಣನಖಿಲಾಂತರಾತ್ಮನಖಿಲಾಧಾರಂ ||
ಕಾರುಣ್ಯದಿಂದೆ ಮನುಜಾ |
ಕಾರಮನಾಂತಿರ್ಕುಮಕ್ಕ ಬೆಕ್ಕಸವಡದಿರ್ ||೨೩೫

ವ|| ಎಂದು ಬಲ್ಮೆಯಿನವಳಂ ಮನೆವುಗಿಸಿ ನಾಲ್ವರುಮಾಪ್ರೊಙಜಗಲಿಯೊಳ್ ಕುಳ್ಳಿರ್ದು ಬೆಳ್ದಿಂಗಳಂ ಬೆಳರ್ತ ಬೀದಿಯುಂ ನಿಟ್ಟಿಸುತ್ತಿರ್ಪಿನಂ; ವಸಂತಕಂ ಕುಶಲವತಿಗೆ ಕುಬೇರನನಾವಾಹಿಸುವೆನೆಂದು ಗೆಲ್ಲನೆಲ್ವುಮಂ; ನಗುತ್ತೆ ಕುಶಲವತಿ–

ಬಿಗಿಪು ಸಡಿಲ್ದು ಪಲ್ಗಳನಿಸುಂ ಚರಿಸುತ್ತಿದೆ ಮೆಯ್ಯ ನುಣ್ಪೊದವಲ್ |
ಜಗುಳ್ದು ಮಸುಳ್ದು ಸುಕ್ಕುತಿದೆ ಮುಂದಲೆಯೊಳ್ ನರೆ ಕಾಣಿಸುತ್ತಿದೀ ||
ವಗೆಯ ವಯಸ್ಸಿನೊಳ್ ಪಡಪುಸಬ್ಬವಕಾಙರ ಪಬ್ಬಮಪ್ಪುದೀ |
ಮಗಳ ನೆಗೆಟ್ಟೆಯಿಂ ತಣಿದು ಸಂತಸವೊಂದುವೆನಿಂದು ಸಾರಿಸಾ ||೨೩೬

ವ|| ಎಂಬುದುಂ; ವಸಂತಕನಕಟಕಟ ಕೆಟ್ಟೆನಗೆ ಮುಟ್ಟುಡುಗಿ ಮುತ್ತುಮುದುಪಾಗಿಯುಂ ಮೂವತ್ತುಂ ಬರಿಸದೆಳಜವ್ವನೆಯಂತೆ ಗಳಪುವದೆಂದು ಮನದೊಳುಕ್ಕುವ ಮುಳಸನೀಜಾತಿಗಿದುಚಿತಮೆಂದು ತಿಳಿದು ಮನದೊಳ್ ತಣ್ಪುಗೊಳಿಸಿ,

ಕನಸಿನೊಳಾಭ್ಯಂತರರತಿ |
ಗನುವಪ್ಪರ್ ಮನುಜಮಾನವತಿಯೊಳ್ದವಿಜರ್ ||
ಮನವುಳ್ಳೊಡೆ ಕನಸಕ್ಕುಂ |
ಕನಸಿಂಗೇನುಪಕರಿಪ್ಪುದೆಳಪಟವರೆಯುಂ ||೨೩೭

ವ|| ಎನೆ; ಕೇಳ್ದು ಕಂದರ್ಪಕಲಾಧರರ್ ಮನದೊಳದೆಮ್ಮನೆಟ್ಟಿಙುವ ಬಗೆಯೆಂದು ತಿಳಿದರ್: ಚಂದ್ರಿಕೆ ಸವಿಗಾರ್ತಿಯುರ್ ಬೆಚ್ಚಿದರ್: ಕುಶಲವತಿಯೊಡಂಬಟ್ಟಳ್: ಅನ್ನೆಗಂ ವಸಂತಕನಿತ್ತಣಿನಿಙದು ತಲೆವಾಗಿಲಂ ಪೊಙದು

ಟ್ಟಲ್ಲಿ ಕೆಲಜಗಲಿಯೊಳಿರ್ದೆಱಗೆವವನಿಂದೊಂದು ಜಾಳಗೆಯಂ ಕೊಂಡು ಬಲ್ಲಿನಪ್ಪ ಪಲ್ಲನೊರ್ವನ ಪೆಗಲೇಱಿಯುಂಗಳಂಬೊಕ್ಕ ಪ್ರೇಂಗಳಂ ಚೆಲ್ಲುತ್ತೆ ಮಾಧವಿಯುಂ ಕರೆದು ಪ್ರೇನ್ಸೆಱಿಯುಂ ಕರೆವ ಪೊಂಜರಿಯುಂ ನಿರವಿಸಲ್ಕೆ ಕುಶಲವತಿಯುಂ ಕರೆತರ್ಪರ್ದೆಂಬುದುಮವಳ್ ಕಱುಬಿಂ ಕರುಮಾಡಮನೇಱಿಯೆಮ್ಮಂಗಳದೊಳ್ ಪೊಮ್ಮಱಿಗೆಱೆದಪ್ಪುದು ಗುಡಿಸಿ ಕುಪ್ಪೆಗೆಯ್ವಂ, ಬರ್ಪರ್ದೆಂಬುದುಮಾಕುಶಲವತಿ ಕಟ್ಟಾಸೆಯಿಂ ತೊಟ್ಟನೆ ಮೆಟ್ಟನಿೞಿಯುತ್ತಾ ಮಿಸುನಿವಱ್ ಮುಸುಗಿದ ತೆಱನಾವುದೆನೆ ; ಮಾಧವಿ—

ನಿರವಿಸೆ ಮನುಷ್ಯಧರ್ಮಂ ।
ನರವಾಹನಮೇಱಿ ಬಂದನೆಮ್ಮಂಗಳದೊಳ್ ॥
ಸುರಿಗುಂ ಪೊಮ್ಮಱ್ ಭರದಿಂ ।
ಬರವೇೞ್ಕುಂ ಧನದನೆೞ್ದು ಪೋಗದ ಮುನ್ನಂ ॥೨೩೮

ವ॥ ಎಂಬುದುಂ ; ಭರದೊಳ್ ಬಂದಂಗಳದೊಳ್ ಚೆಲ್ಲಿದ ಪೊಂಗಳನಚ್ಚರಿಗೊಂಡು ಬಾಚುರ್ತ್ತಿರ್ಪಿನಮತ್ತಲ್ ಕಂದರ್ಪಕಲಾಧರರ್ ಮನದೊಳ್ ವಸಂತಕನೀಮುದಪೆಯುಂ ಪೊಱದೆಗೆಯಲ್ಕೆಂದಾಸೆವಱೆಯುಂ ಬೀಸಿದನೆಂದೇಶಿಸಿದರ್, ಚಂದ್ರಿಕೆಸವಿಗಾತ್ರಿಯರಬ್ಬೆಗೆ ಪಬ್ಬಂ ಪಱಿತೆಂದುಬರ್ದಿದರ್, ಆಗಳಾಕಂದರ್ಪಂ ಸವಿಗಾತ್ರಿಯೊಡನೆ—

ತೆಗೆದಿಸಿಸಂ ಪೊಂಗದಮಂ ।
ಮೊಗಮಂ ಪುಂಬುಗಿಸಿ ಮುಱಿದು ನೋಡುವ ಸೊಗಸಿಂ ॥
ಮುಗಳ್ನ*ಗೆ ಸೂಸಿದೈಯಿಂ ।
ಬಗೆಬಗೆಯೊಳ್ ಕೊನರಿಸೊಲ್ಮೆಗುಣಿಹದ ಕೋಪಂ ॥೨೩೯

ವ॥ ಆನಡಿಗೇಳ್ದವಳ್ ತನ್ನೊಡಲನಮ*ರ್ಪಗಡಲೊಳೞ್ದುವಂತಾಮನಮೊಕ್ಕೊಂಡು ಪಕ್ಕದೊಳ್ ನಿಂದು ಮನದೊಳ್,

ಭಕ್ತಿರಸಂ ಮುಸುಕುವುದನು ।

ರಕ್ತಿರಸಂ ಮಸಗಿವರ್ಪುದೇ ಕೆಲದಿಂ ||
ಯುಕ್ತಮಯುಕ್ತಮದೆಂಬ ವಿ |
ಭಕ್ತಿಯುದೆತ್ತಣದು ಚಿತ್ತವೃತ್ತಿವಿಕೃತಿಯೊಳ್ ||೨೪೦

ಮುನ್ನಂ ಮುನ್ನಮೆ ನೋಡು ಮುದ್ದುಮೊಗಮಂ ನೀನೆಂಬುದಕ್ಕಾರ್ದಿವೇ|
ಕನ್ನಳ್ವನ್ನಡಿಯಂ ನಿರೂಪಿಸೆನುತಿರ್ಕುಂ ಸೊರ್ಕುಮೆಯ್ದುಣ್ಮುಗೊಂ ||
ಬನ್ನಂ ತಳ್ಕಯಿಸೆಂಗುಮೊಳ್ಪ ಪದಪಂಕೇಜಕ್ಕೆ ಮೊಟ್ಟೆಂದು ಪೂ |
ಕ್ಷ್ಯನ್ನಂ ಪೊರಟೆಗೊಳ್ಳ ಮಿನ್ನಗೆ ಸ್ವನಾನೆಂ ಭಕ್ತಿಯುಂ ರಕ್ತಿಯುಂ ||೨೪೧

ವ|| ಇಂತಾಳೋಚಿಸುತ್ತೆ,

ಇಂಗಡಲೊಳ್ ಬೆಡಂಗುವಡೆದೆಟ್ಟಿ ತರಂಗದ ಪಾಂಗಿನಿಂದ ಪಾಂ |
ಗಂಗುಡಿದೋಱ ಸಿಂಗರದ ನೋಟದೊಳೂರ್ಮೆ ಮರಳ್ದ ಕಣ್ಗಳಂ ||
ಬಿಂಗದಿವರ್ಟ್ಟನಿಂದೊಗೆವ ತಣ್ಣದಿರಂದದ ಸಾಂತಿದಿಟ್ಟಿಯಿಂ |
ಪೊಂಗುತುಮೊರ್ಮೆ ನಿಟ್ಟಿಸುತುಮಿರ್ತಾಡಿ ... ಮೆಟ್ಟಿ ನಿಂದಪಳ್ ||೨೪೨

ವ|| ಇಂತು ಶಾಂತಿಶೃಂಗಾರರಂಗಳೆರಡುಮಂಗೈಸುವಿನಂ ||

ಸಿಂಗರಕಿನಿಯನ ದಿಟ್ಟ ನೆ |
ರಂಗೆಯೆ ತಾಂ ಪೊಣ್ಮಿ ಪೂಣ್ದು ಪೊಂಗಿತ್ತಾಗಳ್ ||
ಬೆಂಗೊಟ್ಟುದು ಶಾಂತಿರಸಂ |
ಸಂಗಡಿಕುಮೆ ಪರರಸಂಗಳೆಂ ಸಿಂಗರದೊಳ್ ||೨೪೩

ಕವಿದು ಕಡಂಗಿ ಮುಂಬರಿದು ಮುಟ್ಟಿ ಮುಟುಂಗಿ ಮುಗುಳ್ದು ಮೊ
ಹಸಂ | ಪ್ಲವದೊಳಗಟ್ಟಿ ತೇಂಕಿ ತಿಳಿವೊಂದಿಯುರಲ್ದಿದಿರಾಂತು ನಾಂಟಿ ನಿಂ ||
ದು ವಿವಿಧವಿಭ್ರಮಂಬಡೆದು ತೇಲ್ದು ತೆರಳ್ದು ಮಗುಳ್ದು ಸೂಠಿಯಿಂ |
ಕವರ್ದು*ವು ಕಾಂತಚಿತ್ತಮನದೇಂ ಸವಿಗಾರ್ತಿಯು ನೋಟದಟ್ಟಿಗಳ್ ||೨೪೪

ವ|| ಆಗಳ್,

ಮೊಗಸಿರಿಯೊಂದು ದೇಸಿ ನೊಸಲೊಳ್ಪು ಕದಂಪಿನಲಂಪು ನೋಟದೊಳ್ |
ಸೊಗಯಿಪ ಠೀವಿ ಕನ್ನದಸು ಮುತ್ತಿನ ಪಚ್ಚದ ಪೆಂಪು ಕಂಠದೊಳ್ ||

ವೊಗಸುವ ರೇಖೆ ಕಂದದೆಡೆ ಬಿಣ್ಪೆರ್ದವೆತ್ತ ಪುರ್ವುಜೆದೋೞ್ಗಳೊಳ್ |
ಮಿಗುವ ಪ್ರೌಢಪರ್ವಮಂ ಪಡೆದುವೊ ಸವಿಗಾರ್ತಿಯ ಕಣ್ಗೆ ದರ್ಪವಂ ‖

ವ‖ ಆಗಳವಳ್,

ನೊಸಲೊಳ್ಪಂ ನಡೆ ನೋೞ್ಪೆನೋ ಕುರುಳ ಕೊಂಕಂ ಕೂರ್ಪೆನೋ ಪುರ್ಬಿನೊಳ್ | ಮಿಸುಕಂ ಮುಚ್ಚುವೆನೋ ಕದಂಪನಲೆವಾನಾಲ್ಕುತ್ತುವಚ್ಚುಂಗಳೊಳ್ ‖ ಪಸನಂ ಪುರ್ವಿನೊ ಕೊಪ್ಪುಗೊಂಡು ಕುಣಿತರ್ಪಿಕೋರೆನೋಟಂಗಳಂ | ಬಸಗೆಯ್ದಲ್ಪೆನೊ ಬಾೞ್ವೆನೇತೆಱದಿನೆಂದಾಲೋಚಿಸುತ್ತಿರ್ಪಿನಂ ‖೨೪೬

ಸಿಕ್ಕೆಯೊಳ್ ಸಿಲ್ಕಿ ಕುರುಳ್ಗಳೊಳ್ ತೊಡಕಿ ತೋಗಲ್ಮುತ್ತಿನೊಳ್ ಜೊಲ್ದು ಕ | ರ್ಣಿಕೆಯೊಳ್ ಮಿಂಚಿ ಕೊಡಂಗೆಯೊಳ್ ಸುೞಿದು ಸೀಡುಂ ಪುರ್ಬಿನೊಳ್ ಕೊಂಕಿ ನಾ ‖ ಸಿಕದೊಳ್ ಸಿಲ್ಕಿ ಕದಂಪಿನೊಳ್ ಪೊಳೆದು ಚೆಂಬಾಯಿಂಬಿನೊಳ್ ಬಣ್ಣವೆ | ಈ ಕಳಂಸೂೞ್ವರಿದಲ್ಲಿ ಕಟ್ಟೇಕದಿಂದೆ ಪಟ್ಟುವಾದಿಟ್ಟಿಗಳ್ ‖೨೪೭

ವ‖ ಬೞಿಕ್ಕವಳ್—

ತೊಳಪ ಕದಂಪಿನೊಳ್ ತೊನೆದು ತೂಗಿ ಪೊಳಂಚುವ ಮಿಂಚಿನೋಲೆವೊ |
ಯ್ಲೊಳ್ ತನಿಜೇನೊಸರ್ತುರ್ದೆನೆ ಸೇವೆ ಪದಂಗೊಳೆ ಗಪ್ಮನುಣ್ಮೆ ಪೊಂ ‖
ಪುಳನೆಗೆದಾಲಿನೀರೊೞಿದು ತುಳ್ಕೆ ಕರಂ ನಡು ಬಳ್ಕೆ ತತ್ತರಂ |
ಗೊಳೆ ನಡೆ ಮುೞ್ಗಿ ನಲ್ಲನಡಿದಾವರೆಯೊಳ್ ಮುಡಿಯಿಟ್ಟು ಪೊೞ್ಗಿದಳ್ ‖

ಸಿರಿಯುಡಿಸೋಂಕಿನಿಂ ಪಣೆಯು ಮುಂಬರಪಂ ಪಸನಾಗೆ ಸೈಪು ಬೇ |
ರ್ವರಿಯೆ ಮನೋರಥಂ ಪರಿಪು ಮುನ್ನವೆ ತಾಂ ಬಯಸಿರ್ದ ತಾಣದೊಳ್‖
ನೆರೆವಿನಮುಕ್ಕೆವಂಗಳನಿತುಂ ತನತೇೞ್ಗೆಯೊಳೊಗ್ಗುಗೂಡೆ ಮೆಯ್ |
ಹರವಸಮೊಂದೆ ನಿಂದಳಮೃತಾಬ್ಧಿ ತರಂಗದೆ ತೇಂಕುವಂದದಿಂ ‖೨೪೮

ವ‖ ಆಗಳವಳ್ ಮನದೊಳ್,

ಸಡಿಲವ ತಳ್ಕೆ ಪೀರ್ದುರ್ಬಿಯುದಿಂದುಟಿ ಕೊಂಕದೆ ನಾಂಟುಗೊಂಬುಗುರ |

ತಡೆಯದ ಲಲ್ಲೆಯಲ್ಲೆಗುಡದುನ್ಮುಹವಳ್ಗದ ಮೋಹದೇಱ್ಗೆ ಕೈ ||
ಗಿಡದಳವಳ್ಕದಾಪ್ಪುದ ಪದಮೆಟ್ಟಿದ ಜೌವನದುರ್ಬುಗೊರ್ಬಿನಿಂ |
ದೊಡಲೊಡಲೊಂದೆ ತೋಱುಸುವೆನೆನ್ನಯ ಪೆಣ್ತನದೊಂದು ಪೆರ್ಮೆಯಂ ||

ಬಗೆಯೊಳ್ಬಲ್ಪ ಕಟಲ್ದೊಡಂ ನಡುಕದಿಂದಂಗಂ ನವಿರ್ತಾಲ್ದೊಡಂ |
ಬಿಗಿಪಿಂ ಬಿಣ್ಮೊಲೆ ಸೊಂಗ ಪೊಣ್ಮಿದೊಡಮಂಗೈಕಾಲ್ ಬೆಮರ್ತೋದೊಡಂ ||
ಪೊಗರ್ವೆತ್ತಾಗಿ ಮೊಗಂ ಬೆಗರ್ಗೆಡೆದೊಡಂ ಮೆಯ್ಯುಂ ಮರಂಬಟ್ಟೊಡಂ |
ಬಿಗುರುತ್ತೇನಸಳ್ಪೊಂದಿ ಸಿಂದಳಪಚಾರಂ ಬಪ್ಪುದೆಂದಾರ್ಪಿನಿಂ ||೨೫೧

ವ|| ಆಗಳಾಕಂದರ್ಪಂ,

ಕರಗುವ ಮಾನಸಂ ಕದುಬುವಕ್ಷಿಕಳಲ್ದಳವಳ್ಗವಾಪ್ಪ ಪಿಂ |
ಜರಿವ ವಿವೇಚನಂ ಮೊಳಪ ಮೆಯ್ನಡುಕಂ ಬೆಮರ್ಗಂಬ ಕೆಂದಳಂ ||
ಮರವಡುವಂಗಮುಣ್ಮುವ ನವಿರ್ ಪೊಸಬಣ್ಣಿಗೆವೆತ್ತ ನುಣ್ಮೊಗಂ |
ಬೆರಸು ನೆಗಲ್ಚಿದಂ ಕುಬುಜೆಯಂ ಪರಿಪಾಲಿಸಿದಂದಿನಂದಮಂ ||೨೫೨

ವ|| ಮತ್ತಮಾಮ,

ನಳಿತೋಳಂ ಪಿಡಿದಿಟ್ಟು ಬಿಣ್ದೊಡೆಯ ಮೇಲಿಟ್ಟೆನ್ನ ಮೆಯ್ಮೆಚ್ಚಿಗೊ |
ಳ್ಪಳವಪ್ಪಂತಿರೆ ತಪ್ಪದಪ್ಪಿ ಬಿಗಿದಾಂಕುತ್ತಂಕೆಯಿಂ ಸಂಕೆಯಂ ||
ತಳೆದಾಘ್ರಾಣಿಸಿ ಗಲ್ಲಮಂ ಕವಿದು ಚೆಂಬಾಯ್ಸೋನನೀಂಟುತ್ತುಮ |
ಗ್ಗಳದೊಳ್ಪುರಿವಗೂಗಿನಿಂ ತಣಿಪೆನಾನಿನ್ನೆನ್ನ ಶ್ರೀಕಂಠನಮಂ ||೨೫೩

ವ|| ಮತ್ತಂ,

ತುಡುಕಿ ತುಱುಂಬನೀಲ್ದೆಳೆಗೆ ಸಿಲ್ಕಿದೆಯೆಂಪಲವಾಸಿನೊಳ್ ಪಡ |
ಲ್ವಡಿಸಿ ಕುಕಿಲ್ದು ಪಾಯ್ದೊಡರ್ದು ಪಲ್ವಸೆಗೆಯ್ಮೆಯ ಕೈಮೆಯಿಂದೆ ಸೈ ||
ವಡಿಸುತೆಯೆನ್ನ ಬಿನ್ನಣಮುನನ್ನುತಿಗೆಯ್ವವಳಾರ್ಕುಸೋರ್ಕಿನಿಂ |
ದೊಡರಿಸುಲಲ್ಲೆಮೆಲ್ನಗೆಜೆನುಂಗುಗಳಿಂದೆ ಕಡಂಗಿ ಪೊಂಗುವೆಂ ||೨೫೪

ವ|| ಅಂತುಮಲ್ಲದೆಯುಂ,

ಬಳೆಗಳ್ ತಳ್ತ್ಗೆ ತೊಡಂಕೆ ಕಿಬ್ಬುದಿರೆ ಮುಕ್ತಾಹಾರಮೊಳ್ಪಾಸಿಗಂ |

ಕಳವೂದಾಳ್ದ ಕಟಿಲ್ದ ಬೀಟ್ ಕಡಗಂ ಕಿಲ್ವಿರ್ಚೆ ಪೊನ್ನೇವುರಂ ॥
ಕಳನಾವಂಗಳ್ ರತ್ನಕಾಂಚಿ ಪರಿದಾವೆಲ್ಪಟ್ಟಿಯೊಳ್ ಸಿಲ್ಕೆ ವೆ ।
ಯ್ಗಳವೊಳ್ಪಿಂ ಮಿತಿಮೀರ್ ಸಿಂಗರವುಯಿಳ್ತ್ರಿಯ್ದೊಂದುವೆಂ ಗಲ್ಲಮಂ ॥೨೫೫
ವೆಳೆಯುಲದೋರ್ಂಪೆ ಕೈಬೀಗೆ ತೆಳಿಕ್ಸ್ಗಿಡಿ ಮುಯ್ವೊಸವರ್ಗವ್ಮ್ರ ರಕ್ಷೆಬಂ।
ಬಳೊಳಳೆವಾಲಿಸುಂಬಿ ವೊಗದಾನರಗಿಂದುಟಿಗೆಂಬರಲ್ವೊಗರ್ ॥
ನೆಲಸಿ ಪಲ್ಲ ಬಜ್ಜರಸರಕ್ಕೆ ನೆರಂಗೆಯೆ ಸಂಗಳಾಂಗಿಯುಂ ।
ತೊಲಗದವೊಳ್ಪೆತ್ತಡಂಕಿ ನಲವಿಂ ಕಾಳೆಯೇಱಿಸಿ ಮುಚ್ಚಿ ಮುಚ್ಚಿಪೆಂ ॥೨೫೬

ಮಿಡುಕಕೆ ಮುಚ್ಚಿ ತಪ್ಪಗನುನಪ್ಪದು ಮೆಲಿದು ಭಾಪು ಭಾಪು ಹೋ ।
ತಡೆ ತಡೆ ತತ್ತರಂಬಡದಿರೊಯ್ಯನೆಯೊಯ್ಯನಿದೇ ಪವಣ್ ॥
ಕಡುಗದಿರಾಱೆನಿನ್ನಗಿವನಳ್ಕದೆನಳ್ಗನಟ್ಟಿದನಟ್ಟಿದನೆಂ ।
ದೊಡನಳಸಿಂ ಬಟ್ಟಿಲ್ಗ ಬಗೆಗುಂದಿದೊಡಂ ಬಿಡವಂದವೊಂದುವೆಂ ॥೨೫೭

ವ॥ ಮತ್ತಮುಸುರಿರ್ವರುಂ,

ಬಗೆಯೊಳ್ ಭಾವಿಸಿಯಾಸೆವಟ್ಟ ಪುರುಳಂದಿಂದಿನ್ನೆಗಂ ಕಲ್ತ ಪಾ ।
ಸುಗೆಯೊಳ್ಗೈಮೆಯು ಕೈಮೆ ಜಾವನದ ಜಾಣುಂ ಸೈಪಿನೊತ್ತಂಬರಂ ॥
ಪೊಗರ್ವೆತ್ತಂಗದ ಸಿಂಗರಂ ಸೊಗಸಿನೊಪ್ಪಂ ಬಾಸ್ತಯೊಂದೇಟ್ಟರಂ ।
ಮಿಗುತೇಂ ಬಂದಪುವೆಂದೆ ಸಂದಣಿಸುವಾನಂದಾಬ್ಧಿಯೊಳ್ ತೇಂಕಿದಿರ್ ॥೨೫೮

ಪೊಸಪೊಸತಿಂತಿದೆಂದುಮೆಸೆಯಾಟಕೆ ಸೈರಿಸದಿಂತಿದೆಂದು ಬ ।
ಣ್ಣಿಸಲರಿದಪ್ಪ ಮೆಯ್ಸಿರಿಯು ನಿಟ್ಟಸುತಿರ್ವರನೊರ್ವರಂದಣಂ ॥
ಮಿಸುಕದೆ ತಿವಿದಿಂಗಡಂ ಪೆರ್ಮಡುಮಂ ಪಡಿಗೊಂಡು ತಳ್ತ ಸಂ ।
ತಸದೊಳಗದ್ದು ತೇಲ್ದು ತಣಿಗೊಂದಿಪರೆಂ ಪೊಸತೊಂದು ದೇಸಿಯುಂ ॥

ವ॥ ಇಂತಿರ್ವರುಂ ಸಂತಸದಿಂದಿರ್ಪಿನಮನ್ನೆಗಂ,

ಬಿಗಿಭಂಗಳ್ ಬಿರ್ಚೆ ದಿಗ್ಭಿತ್ತಿಯು ಬೆಸುಗೆದೊಡರ್ ಬಿರ್ಚೆ ದಿಕ್ಪಾಲಕರ್ ತ।
ಳ್ತಗಿವಿಂತಾನುಳ್ಕೆ ಮುನ್ನಿರ್ಗಳ ತೆರೆ ಸರದಿಂ ತುಳ್ಕೆ ನಾಗಾಧಿಪಂ ಸೋ ॥
ಜೆಗದುರ್ಬಂ ತಾಳೆ ಕೂರ್ಮಂ ಬೆದಱೆ ಪದುಳವುಂ ನೋಳ್ಡಕೇಳ್ದಾಧುವಂಕ।

ಣ್ಮುಗಿವನ್ನಂ ಕೂಡೆ ತೀವಿತ್ತು ಗಲಭೆ ನಡುಕಂಗೊಂಡುವಿನಂ ಲೋಕಮೆಲ್ಲಂ॥

ವ॥ ಆಗಲಭೆಗಳ್ಕಿ ಸವಿಗಾತಿರ್ಗೆ ಕಂದರ್ಪನಂ, ಚಂದ್ರಿಕೆ ಕಲಾಧರನಂ, ಮೇಲ್ವಾಯ್ದು ತಳ್ಕೈಸುತ್ತುಮಂ ಕಾಪಿಡುವುದೆಂದು ಹಮ್ಮೈಸುತ್ತೆ ಬಿಗು ಪ್ಪುಸಂತಸಂಗಳಿಂ ಮೆಯ್ಮರೆದವರ್; ಕಂದರ್ಪಕಲಾಧರರಚ್ಚರಿಸಂತಸಂಗಳಿಂದ ಚ್ಚಗಂಗೊಳುತ್ತುಮವರಾರುಮನಳ್ಕುವಡೆಂದು ಸಂತೈಸುತ್ತೆ ಮನದೊಳ್,

ಆಕಟೇಂ ಬ್ರಹ್ಮಾಂಡಭಾಂಡಂ ಬಿರಿದುದೆ ಹಿಮವನ್ಮೇರುಗಳ್ ಪ್ರೋಚ್ಚುದ್ದ ವ್ರೋ ವಾ। ರ್ಧಿಕುಲಂ ಕೈಗಣ್ಮುತಂ ಭೋಂಗರೆದುದೊ ಧರೆ ತಾಂ ಸೀಳ್ದು ದ್ದೋ ಕಾಲಮೇಘ॥ ಪ್ರಕರಂ ತನ್ನುಳ್ಳ ಬಲ್ಪಂ ತಳೆದುಱೆ ಮೊಱಗಿತ್ತೋ ಎನಲ್ತುಂಬಿ ಪೊಣ್ಮು। ತ್ತೆ ಕಡಂಗಿತ್ತಾರವಂ ಭೈರವಮನವಧಿಕಸ್ಫೂರ್ಜಥು ಸ್ಫಾರಮಾಗಳ್ ॥೨೬೧

ವ॥ ಎಂದಾಲಿಸುತ್ತೆ ನೆಲೆಗಂಡು,

ತಿಳಿದೇಂ ನಿಸ್ಸಾಳಭೇರೀಪಣವಕಹಳಿಕಾರಾವದೊಳ್ತೊಳ್ತು ಸೊರ್ಕಾ। ಳ್ಗಳ ಬಂಬಲ್ಗೊಬ್ಬೆಯಂ ಕೇಳ್ದ್ವಿಸಿ ಘನಘನಘ್ವಾನಮಾದಂ ತುಪಾಕಂ॥ ಗಳವಿಗಳ್ ಕಾಂಡೋಳ್ಗೊತ್ತನಪಯಿತರಮಾಕಾಂತಯಂ ಮಾಂಜೆ ಲೀಲಾ। ಲಕ್ಷ್ಮೀತಂ ಸೂರ್ತಪ್ಪನಂ ಕಣ್ಗಳೆಯೊಳ್ ಕವಗುಂ ಚಾರ್ಯನಿಷ್ಣಂ ಕಲಿಷ್ಣಂ ॥

ವ॥ ಎಂದು ನಿಱೆಗೆಯ್ದು ಸಂತಸಮಿರ್ಪನಮನಿತರೊಳ್ ವಸಂತಕನು ಲ್ಲಾಸದಿಂ ಮಲ್ಲನ ಮೊಗಲಿಂ ಧುಮ್ಮಿಕ್ಕಿ ಕಳ್ಳರ ಸೇವೆ ಕೈಮೀಱುತ್ತಿದೆ ಬೇ ಗದಿಂ ಬಪ್ಪುದೆಂದೆಱಪಱುವಿನಂ ಬೆದಱುವ ಮಾತಾಧವಿಕುಶಲವತಿಯರ್ ಪ್ರೊ ನ್ನ ಹೊಂಚಿನಡಿ ಕಡೆಗೊಱಡೆಯೊಳ್ ಪುದುಗಿವರ್; ಕಂದರ್ಪಕಲಾಧರರೇ ಲೆಳಸುವಿನಂ ತಳ್ಕೆ ಬಿಗುರ್ಪ್ಪಿ ಕಡೆಗೊಳಿಸಿ ಸೊಸೆಂಗೆಯ್ದುದಿರಿಂ ಮೋಸೆಂಬ ಚ್ಚರಿಂದ ದೈನ್ಯಂಬಡುವ ಸವಿಗಾತಿರ್ಗೆ ಚಂದ್ರಿಕೆಗೊಡನೆ—

॥ ೨೬೫ ೦ ಆಗಿಯುಧಿರಿಕ್ಕೆ ವವಿಸು ಕಾ।

। ಕಾ ಧ್ವ ಬಗ್ಗೆ ಪೂಸಿತೊ ಲ್ಲಿ ಸೊದು ಚೆಲ್ವ ಕರರ।

ಮುಗುಳ್ದಿಯೞ್ತುರ್ಪವು ಭರದಿಂ ।
ಬಗೆಯುಂ ಬಸಗೆಯ್ವು ಪೞ್ಕುವಡುವುವು ಸೊರ್ಕಿಂ ॥೨೬೩

ವ॥ ಎಂಬುದುಮವರಿರ್ಪರುಂ—

ದೇವರೊಡವಾೞ್ತುಗೆಯ್ದಾ ।
ದೇವರಹಸ್ಯಮನೆ ತಿಳಿವರಾರೆಳ್ವಳದೊಳ್ ॥
ಜೀವೇಶನುಂ ಬೆಸಂಗೆ ।
ಯ್ದಾವೇಳ್ಗೆ ತಡೆಯೆ ಬರ್ಪುವಪಚಾರಂಗಳ್ ॥೨೬೪

ವ॥ ಎಂದು ನಿರ್ಧರಿಸಿಯುಂ ಬಿಡಲಾರದಿರ್ಪನವಮಾಕರುಮಾಡಮನೇಱಿ ವಂದು ನಿಂದು ವಸಂತಕಂ ಸವಿಗಾತ್ರಿಚಂದ್ರಿಕೆಗಳಂ ಪೆಸಗೊಂಡು—

ಅಟ್ಟಿತೊಡಪಾರದಿಂ ।
ಪಟ್ಟಯೊಳೇ ನಿದ್ದೆವಟ್ಟು ನೇಮಂಬಡೆಯಿಂ ॥
ಗಟ್ಟನೆ ಬರ್ಪರ್ ಕನಸಿಂ ।
ಗಳ್ಗದಿರಿಂ ಕನಸು ದೇವಕಲ್ಪನೆಯಲ್ತೇ ॥೨೬೫

ವ॥ ಎಂದವರಂ ಸ್ಮೈತಿರಿಸಿ, ಮತ್ತಂ,

ಕಳ್ಳರ್ ಪಱಿವೊಡವೆಗಳಂ ।
ಕೊಳ್ಳಗೊಳುತ್ತಿರೆಯುಮಿಂತು ಪದುಳಂಬಡೆವಿರ್ ॥
ಕಳ್ಳರುಮೊಡೆಯರುಮೊಂದಿರೆ ।
ಪೆಳ್ಳಗರೇಗೆಯ್ವರೆಂಬ ನುಡಿಗೆಡೆಯುಪ್ಪಿರ್ ॥೨೬೬

ವ॥ ಎನೆ ಕೇಳ್ದು ಕಂದರ್ಪಂ ದೇವತಾವಿಶ್ವಾಸದಿಂ ಪಿಂದೆಗೆದಿರ್ಪ ಸವಿಗಾತ್ರಿಯುಂ ಬರಸೆಳೆದಿರ್ದ ತಳ್ಳೈಸಿ ಮುಂಡೆದಡವೃತ್ತನ್ನಂ ಬಗೆಯೊಳ್

... ... ... ... ।
ತೀವಿದೊಡಂ ನಿದ್ದೆ ತಿಳಿವುಮಱವೆಗಳೆಡೆಮಂ ।
ದೋವುವೆನೊಡವಾರದಿರೀ ।
ಠಾವಿನೊಳೇ ಮೋನಮಿರ್ದು ಮುದಮಂ ಪಡೆ ನೀಂ ॥೨೬೭

ವ|| ಎಂದಾಮನೆಯಂ ಪೊಱಮಡುವಿನಂ; ಕಲಾಧರನುಮೀತೆಱದಿಂ ಚಂದ್ರಿಕೆಯುಂ ಮುದ್ದಿಸುತ್ತವಳೊಡನೆ—

ನಿಲ್ಲದಿರಿಯೆಡೆಯೊಳ್ ಪಸೆ |
ಯಲ್ಲಿಗೆ ನಡೆ ಶೌರಿಯಿಂ ಪಯಂಬಡೆದಾ... ||
ನಿಲ್ಲಿಗೆ ಬರ್ಪೆಂ ಬಗೆಯೊಳ್ |
ತಲ್ಲಣಮೊತರ್ಕೆ ನಿಲ್ಕೆ ಗಳ್ಕನೆ ಬರ್ಪೆಂ ||೨೬೮

ವ|| ಎಂದಿರ್ವರುಮಿರ್ದು ಬರುತ್ತೆ ಮನದೊಳ್ ಬೇಱೆವೇಱೆ

ಮೊದಲೊಳ್ ದೇವತೆಯೆಂದೇ |
ಪಡುಳಂಗೊಂಡಿರ್ದಳೊಡನೆ ಭಾವೋದಯದಿಂ ||
ಪದವಱಿದು ಪಲವು ಲೀಲೆಯ |
ನೊದವಿಸಿದಳ್ ಕಾವನಿಸುಗೆಗೈಮೆಯ ತೆಱದೊಳ್ ||೨೬೯

ವ|| ಅದಱೊಳಂ,

ಸುಱಿವ ಮರಲ್ವ ನೇಹರಸದಿಂ ನನೆವೈದೆ ಮುಗುಳ್ವ ನಾಣ್ಚಿ ಚಂ |
ಚಳಸುವ ತೇಲ್ವ ಪೊಂಚುವ ತೆಱಂಬೊಳವೊಳ್ಕೆರ್ದೆಗೊಂಬ ಭಾವಮಂ ||
ಘಟಿಲನುಗುಳ್ದವೋಲ್ ಕವಿವ ನಾಂಟುವ ಬೇರಿಱದೊಳ್ಪುಗೊಂಬ ನು |
ಣ್ಬೆಳತಿಗೆನೋಟದಿಂಬೆನಲೊಳನ್ನೆರ್ದೆಯಱ್ದು ತೊಱಲ್ದು ತೇಂಕುಗುಂ ||

ವ|| ಎಂದು ಭಾವಿಸುತ್ತೆ ನಡೆತಂದೊರೊರ್ವರಂ ಮೊಗನೋಡಿ ನಸುನಾಣ್ಚುತ್ತುಂ ಕೆಲವಂ ನೋಳ್ಪವೆಂದು ಮುಂದಳರ್ವಿನಂ; ವಸಂತಕನುಕ್ಕೆವದ ಮೋಲುಕ್ಕೆವಮೆಂಬುದುಂ; ನಸುನಗುತ್ತಿಬರುಂ ತಲೆವಾಗಿಲಂ ಪೊಱಮಟ್ಟಾನೆರೆಮನೆಯ ಪೊಱಜಗಲಿಯೊಳ್ ನೆರೆದ ಸಂದಣಿಯ ಮಱಿಯೊಳ್ ನಿಂದು ಮನದೊಳ್ ವಂದಿಸಿ ಪೊಂಗುಮರೆಯೋಱು ಬರ್ಪ ರಂಗೇಶನ ದಿವ್ಯಾಂಗಮಂ ಸಾಂಗಭಕ್ತಿಯಿಂ ಕಣ್ಗೊಳಿಸುವೆಡೆಯೊಳ್ ವಸಂತಕಂ

ಪದಿನಾಱುಂ ಸಾಸಿರ್ವರ |
ಪವಗೆಡಿಸಿವ ಚದುರನೀಗಳೇಕೇರಿಯ ಪೊ ||

ಕ್ಕದೆ ಕೊಳ್ ಕವರ್ತದೆತ್ತೀಂ ।
ಪದುಗುತ್ತೀ ಕಾಂತಮಿಂತು ಪರಿವಸನಕಟಾ ! ॥೨೭೧

ವ॥ ಅನ್ನೆಗಂ ಕಂದರ್ಪಂ ಪರಕಾಲಯೋಗಿಯ ವ್ಯೆಮೆಯಂ ನಿ[illegible],

ತೋಳ್ವಲದಿಂ ತೊಡವುಗಳಂ ।
ತಳ್ವದೆ ತಾನಿೞ್ವುದರ್ಕೆ ತಾಳ್ವನೆ ಮುದಮಂ ॥
ಬಾಳ್ವಿಡಿದು ಬಿಜ್ಜೆಯಂ ಕೇಂ ।
ದಾಳ್ವುದುದಿಂ ?,ಗೊಳ್ವೆನಿಂದು ಬಾಳೆಂದಾಗಾಂ ॥೨೭೨

ವ॥ ಎಂದು ವಂದನಂಗೆಯ್ವಿನಂ ; ಕಲಾಧರಂ—

ಆಳ್ವರಸನೆ ಕಪಿಂದವೆ ।
ಆಳ್ವಾೞ್ತಗೆ ಬರ್ಕುವೆಂಬ ನಾಟ್ಕುಡಿದೆವುಮೀ ॥
ಬಾಳ್ವಿಡಿದು ಕಡಿದು ಬಲ್ಪಿಂ ।
ಕಳ್ವಸುವಂ ಭಕ್ತನೆನಿಸಿ ಪರಿಪಾಲಿಸಿದಂ ?, ॥೨೭೩

ವ॥ ಎನುತ್ತನಿಬರುಂ ಮಾದೇವರಂ ಸೇವಿಸುವರ ಸಂವಣಿ ಮುಂವಳರೆ ಪಿಂದುೞಿದು ಮನೆಗೆ ಬರ್ಪ ಸೂೞ್ವಿಂದವಂ ಬಸಂದದೞೊಳಂಪಗಾರ್ತಿಯೆರ್ವರ್ಗಳಂ ತಡೆದು ವಸಂತಕಂ ಕೈಮುಡುಂಕೆ ಕೊಂಕುತಮಳ್,

ತೊಲತೊಲಗೇವ್ರೋ ಕ್ಯವಿಡು ।
ಪೊಲನಲ್ತಿದು ಪಾಱತನಕೆ ಪ್ರೀ ಪ್ರೀಗಿಂತೇಂ ॥
ಮಲೆಪೈ ಜಕ್ಕಂದೊಲಿಯೆ ।
ಕೆಲಸಾರಲ್ಲದೊಡೆ ಜಡಿದು ಕೆಕ್ಕಲಗೆಲೆವೆಂ ॥೨೭೪

ವ॥ ಎನೆ ; ವಸಂತಕಂ ಪಿಂತಿರುಗಿ ನೋಡಿ ತಂತಮ್ಮೊಳಷ್ಟಾಲಾಪಂಗೆಯ್ವ ಕಂದರ್ಪಕಲಾಧರರಂ ನಿರವಿಸಿ,

ತಾಂ ತಾಂ ಬೇಱನುಭವಿಸಿದ ।
ಸಂತಸಮಂ ಸಮರಸಂಗೊಳಕ್ಕಿರ್ವರುಮೀ ॥

ವ|| ಅನ್ನೆಗಮಾವಸಂತಕಂ ಮನದೊಳುಬ್ಬಸದಿಂದಿಲ್ಲಿ ಸರಿಜೋಡಮೀರೇ ತ್ರಿಕಾಳಗಕಾಂದೆಸನಂದುಮಪ್ಪೆನೆಂದೆಣಿಸಿ ಮುಂತಣವರ್ಗ್ಗೆ ಹಿಂತಣವಳಂ ತೋಱಿಸುತ್ತೆ—

ಅಟಿಮಟಿಮುಂದಾನಱಿಯದೆ ।
ದಿಟಮಿಂದೀ ತಿಳಿದೆನಿವಳ ಕಟಕಟ ನುಡಿಯಂ ॥
ಘಟಚೇಟಿಯೊಂದು ನುಡಿವಳ್ ।
ಕಟಕಟ ಬಿಬ್ಬೋಗಳಗೊಳಪ ಜಾಣ್ಮೆಂತಿವಳಾ ॥೨೮೦

ವ|| ಎಂಬುದುಮಾಮುಂತಣಾಕೆ—

ಅಪ್ಪಿದ ಪದಸ್ಥೆಯೊಳ್ ಏಟ ।
ಮಪ್ಪಗೆ ಮುಮಯ್ಯಾಪ್ರೋಕ್ತ ತಾನನ್ನೆನೆ ನೀಂ ।
ಸೊಪ್ಪಗೊಳಗೊಳ್ಳೆನಿಗಳ್ ।
ತಪ್ಪಿದೆನೆಂದೆಱಗ ಕಾಲ್ಗೆ ಮನ್ನಿಸಿ ಕಳವೆಂ ॥೨೮೧

ವ|| ಎಂಬಿನಮವಳ್—

ಕಳ್ದಳವೊಯೊಳೇ ಬಸಿಱಂ ।
ತಾಳ್ದಱಿಯದ ತೆಱದೆ ಮುಮವೆಯಂತುಱನವನಂ ॥
ಬೊಳ್ದಳೆದ್ದೈದಾರವರಂ ।
ತೊಳ್ದದಿನ್ನಿಂ ಪದಸ್ಥೆಯಲ್ಲದೆ ಪೆಱರಾರ್ ॥೨೮೨

ವ|| ಎನೆ ಕೇಳ್ದು ಕೆಂಕರಿಸುತ್ತವಳ್—

ಎಳವೆಯೊಳನ್ನ ಮೊಯ್ಸಿರಿಯಿನೊಳ್ಗಗದೋಜೆಯಿನೋರೆನೋಟದೊ।
ಳ್ಪೊಳಪಿನೆಳಲ್ದು ಬಟ್ಟನೆಲಮಿಂಡರೊಳಾಬಱಿಕೆಯಾಗಂಡನಂ ॥
ತಳೆದವನಿಂ ಮನಕ್ಕೆ ತಣಿವೊಂದದೆ ಸೊರ್ಕಿನೊಳುರ್ಕಗಂಡರೊಳ್ ।
ಬಳಸಿದೆನಾಬಱಿಕ್ಕೆ ಬೆಲವೆಣ್ಣನದೊಳ್ ಬೆಲೆನೆತ್ತು ಪೆರ್ಚಿದೆಂ ॥೨೮೩

ಇಂತೆನ್ನವೊಲೇಂ ಬಗೆವಂ ।
ದಂತಿರೆ ಸೀಂಪುಷ್ಟಿದಂದು ಪೊಂಪುಳಿವರೆಗಂ ॥
ಸಂತಸಮನೊರ್ವೊರ್ಗಯಾಪೆಂದ ।
ಮಾಂತಳ್ ಮುಂಪಾಟಿಪ್ರೋದ ಕಟಕಾಟಿತ್ರೊಟಿ ಸಿಂ ॥

ವ॥ ಎಂಬುದುಮವಳ್—

ಪಿತ್ತಮನೆಳಸುಗೆ ಮೋಕ್ಷ ಕುಲ ।
ವೃತ್ತಂಗಳನೆಣಿಸುಗೆದಱಿಸದಿರದೆ ಕುತ್ತಂ ॥
ಪೆತ್ತರ್ ಪ ಪ್ರೊಂದವ್ರೊ ।
ಲಿತ್ತೆಡೆಯೊಳಡಂಗಿ ಬಾಳ್ಪುದತ್ತಮವಳ್ತಂ ॥೧೪೯॥

† . . . . . . . . . . . . . *

ಇದು ಮಂದರಗಿರಿಶಿಖರಾಭರಣಶ್ರೀಮನ್ನಾರಾಯಣಚರಣಸರಸಿಜಶರಣಪರಾಯಣ ಶರಣಾಗತರಕ್ಷಣವಿಚಕ್ಷಣ ಸಕಲಕಲಾಪ್ರವೀಣ ಪರಮಸಂತೆಂಬರಗಂಡ ತ್ರೈಲೋಕ್ಯೈಕವೀರ ಭೂರಿತುರುಷ್ಕಶುಷ್ಕವನದಾವಾನಲ ಕರ್ಣಾಟಕರಾಟವೀಕ್ಷಾಪಿತ್ಯ ಸಾಟನಸಿರಾಘಾಟ ಪ್ರಳಯಕಾಲಜಂರ ಸಿಲ ಪಾಂಡ್ಯಮಂಡಲಾಖಂಡಲೇತಂಡವಿಲುಂಠನಕಂಠೀರವ ಮಲೆಪನೃಪಮದಮರ್ದನ ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪನಪ್ರತಿಮವೀರನರಪತಿ ಶ್ರೀಚಿಕದೇವಮಹಾರಾಜ ಕೃಪಾಪರಿಪಾಲಿತ

ಶ್ರೀತಿರುಮಲೆಯಾರ್ಯ ವಿರಚಿತಮಪ್ಪ

ಚಿಕದೇವರಾಜವಿಜಯ ಮಹಾಪ್ರಬಂಧಂ

ಸಂಪೂರ್ಣಂ.

---

† ಪ್ರತಿ ಆಶ್ವಾಸದಲ್ಲಿಯೂ ಇರುವಂತೆ ಆಶ್ವಾಸ ಪೂರ್ತಿಯನ್ನು ಸೂಚಿಸುವ ಪದ್ಯವು ಇಲ್ಲಿಲ್ಲದೆ ಇರುವದರಿಂದಲೂ, ಕಥೆಯು ಪೂರ್ತಿಯಾಗದೆ ಇರುವದರಿಂದಲೂ ಗ್ರಂಥವು ಇಲ್ಲಿಗೆ ಮುಗಿದಂತೆ ಕಾಣುವದಿಲ್ಲ. ಆದರೆ ಮೂಲದಲ್ಲಿ ಈ ಪದ್ಯವಾದ ಬಳಿಕ ಈ ಗದ್ಯವು ಇದೆ.